# ವಾಮನರಾವ ಮಾಸ್ತರರ ನಾಟಕ ಮಂಡಳಿ ಮತ್ತು ನಾಟಕಗಳು ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ಶ್ರೀಮತಿ ವಿಜಯಲಕ್ಷ್ಮಿ ಪಿ. ಭೋಸಲೆ

ಎಮ್ ..

ಮಾರ್ಗದರ್ಶಕರು

ಪ್ರೊ॥ ಎಚ್. ಎಮ್. ಬೀಳಗಿ

ವಿಶ್ರಾಂತ ಪ್ರಾಧ್ಯಾಪಕರು

ಕರ್ನಾಟಕ ಕಾಲೇಜು, ಧಾರವಾಡ.



ಡಾ॥ ದ. ರಾ ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ - ೫೮೩ ೨೭೬

೨೦೧೧

# ವಾಮನರಾವ ಮಾಸ್ತರರ ನಾಟಕ ಮಂಡಳಿ ಮತ್ತು ನಾಟಕಗಳು ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ಶ್ರೀಮತಿ ವಿಜಯಲಕ್ಷ್ಮಿ ಪಿ. ಭೋಸಲೆ
ಎಮ್. ಎ.

ಮಾರ್ಗದರ್ಶಕರು

ಪ್ರೊ॥ ಎಚ್. ಎಮ್. ಬೀಳಗಿ
ವಿಶ್ರಾಂತ ಪ್ರಾಧ್ಯಾಪಕರು
ಕರ್ನಾಟಕ ಕಾಲೇಜು, ಧಾರವಾಡ.




ಡಾ॥ ದ. ರಾ ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ – ೫೮೩ ೨೭೬
೨೦೧೧

## ಪ್ರಮಾಣ ಪತ್ರ

ವಿಜಯಲಕ್ಷ್ಮಿ ಪಿ. ಭೋಸಲೆ ಇವರು ಸಾದರ ಪಡಿಸಿದ "ವಾಮನರಾವ ಮಾಸ್ತರರ ನಾಟಕ ಮಂಡಳಿ ಮತ್ತು ನಾಟಕಗಳು ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿದ್ದು, ಡಾ॥ ದ. ರಾ. ಬೇಂದ್ರೆ, ರಾಷ್ಟ್ರೀಯ ಟ್ರಸ್ಟ್, ಧಾರವಾಡ ಮಾನ್ಯತಾ ಸಂಸ್ಥೆಯ ಮೂಲಕ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಖಾಯಕ್ಕೆ ಸಲ್ಲಿಸುತ್ತಿದ್ದಾರೆ.

ಸದರೀ ಮಹಾಪ್ರಬಂಧವು ಮೂಲ ಸಂಶೋಧನೆಯಾಗಿದ್ದು ಇದರ ಯಾವುದೇ ಭಾಗ ಮತ್ತು ವಿಷಯವನ್ನು ಯಾವುದೇ ಉದ್ದೇಶಕ್ಕೆ ಬಳಸಿಕೊಂಡಿಲ್ಲ ಮತ್ತು ಈ ಮೊದಲು ಪ್ರಕಟಗೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

(ಪ್ರೊ. ಎಚ್. ಎಮ್. ಬೀಳಗಿ.)
ವಿಶ್ರಾಂತ ಪ್ರಾಧ್ಯಾಪಕರು,
ಕರ್ನಾಟಕ ಕಾಲೇಜು, ಧಾರವಾಡ

ಧಾರವಾಡ

ದಿನಾಂಕ: ೨೩-೧೨-೨೦೧೧

## ಘೋಷಣಾ ಪತ್ರ

"ವಾಮನರಾವ ಮಾಸ್ತರರ ನಾಟಕ ಮಂಡಳಿ ಮತ್ತು ನಾಟಕಗಳು ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಪ್ರಸ್ತುತ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿದ್ದು, ಪ್ರೊ॥ ಎಚ್. ಎಮ್. ಬೀಳಗಿ, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಡಾ॥ ದ. ರಾ. ಬೇಂದ್ರೆ, ರಾಷ್ಟ್ರೀಯ ಟ್ರಸ್ಟ್, ಧಾರವಾಡ ಮಾನ್ಯತಾ ಸಂಸ್ಥೆಯ ಮೂಲಕ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಖಾಯಕ್ಕೆ ಸಲ್ಲಿಸುತ್ತಿದ್ದೇನೆ.

ಸದರಿ ಮಹಾಪ್ರಬಂಧವು ಮೂಲ ಸಂಶೋಧನೆಯಾಗಿದ್ದು ಇದರ ಯಾವುದೆ ಭಾಗ ಮತ್ತು ವಿಷಯವನ್ನು ಯಾವುದೇ ಉದ್ದೇಶಕ್ಕೆ ಬಳಸಿಕೊಂಡಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

(ವಿಜಯಲಕ್ಷ್ಮೀ ಪಿ. ಭೋಸಲೆ)
ಸಹ ಪ್ರಾಧ್ಯಾಪಕರು,
ಸರಕಾರಿ ಪ್ರಥಮ ದರ್ಜೆಕಾಲೇಜು,
ರಾಜನಗರ, ಹುಬ್ಬಳ್ಳಿ-೩೨

ಧಾರವಾಡ
ದಿನಾಂಕ: ೨೩-೧೨-೨೦೧೧

ಪ್ರೀತಿಯ ನೆನಕೆಗಳು............

ಸ್ನಾತಕೋತ್ತರ ಪದವಿಯ ನಂತರ ಸಾಹಿತ್ಯದಲ್ಲಿ ಸಂಶೋಧನೆ ಮಾಡಬೇಕೆಂಬ ಆಸೆ ಪ್ರಬಲವಾಗಿತ್ತು. ಏನೇನೋ ವಯಕ್ತಿಕ ಕಾರಣಗಳಿಂದಾಗಿ ಆ ಆಸೆ ಈಡೇರಿರಲಿಲ್ಲ ಆದರೆ ಆಸೆ ಬತ್ತಿರಲಿಲ್ಲ. ವೃತ್ತಿಜೀವನದ ೨೦ ವರುಷಗಳು ಕಳೆದ ನಂತರ ಮತ್ತೊಮ್ಮೆ ಸಂಶೋಧನಾ ಕಾರ್ಯಕ್ಕೆ ಮನಸ್ಸು ಮಾಡಿದಾಗ ಅವಕಾಶ ಸಿಕ್ಕಿದ್ದು ಧಾರವಾಡದ ಡಾ॥ ದ. ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟಿನ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯದಲ್ಲಿ.

ಅವಕಾಶವೇನೋ ಸಿಕ್ಕಿತು. ಆದರೆ ವಿಷಯದ ಆಯ್ಕೆ ಮಾಡುವಾಗ ಮನಸ್ಸು ಹೊರಳಿದ್ದು ರಂಗಗೀತೆಗಳತ್ತ. ಮೊದಲಿನಿಂದಲೂ ಸಂಗೀತದಲ್ಲಿ ಆಸಕ್ತಿಯಿತ್ತು. ಆಗೊಮ್ಮೆ ಈಗೊಮ್ಮೆ ಆಕಾಶವಾಣಿಯಲ್ಲಿ ಕೇಳಿ ಬರುತ್ತಿದ್ದ ರಂಗಗೀತೆಗಳಿಗೆ ಆಕರ್ಷಿತಳಾಗಿದ್ದೆ. ರಂಗಗೀತೆಗಳಿಗೆ ಆಶ್ರಯತಾಣವಾಗಿದ್ದ ನಾಟಕಗಳನ್ನು ಕುರಿತು, ಅಧ್ಯಯನ ಮಾಡಬೇಕೆನಿಸಿದಾಗ ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯಲ್ಲಿ ಸಂಶೋಧನೆ, ಅಧ್ಯಯನ ಮಾಡಿದ ರಂಗಚಿಂತಕ ಡಾ॥ ರಾಮಕೃಷ್ಣ ಮರಾಠೆಯವರನ್ನು ಸಂಪರ್ಕಿಸಿದಾಗ ವಾಮನರಾವರವರನ್ನು ಕುರಿತಾಗಿ ಅಧ್ಯಯನ ಮಾಡಬಹುದೆಂಬ ಸೂಚನೆ ಸಿಕ್ಕಿತು. ಈ ಕುರಿತು ನನಗೆ ಮಾರ್ಗದರ್ಶಕರಾಗಿ ನಿಯೋಜಿಸಲ್ಪಟ್ಟ ನಿವೃತ್ತ ಪ್ರಾಧ್ಯಾಪಕರಾದ ಶ್ರೀಮತಿ ಎಚ್. ಎಮ್. ಬೀಳಗಿಯವರೊಂದಿಗೆ ಚರ್ಚಿಸಿ ಅಧ್ಯಯನಕ್ಕೆ ಶ್ರೀಕಾರ ಹಾಕಿದೆ.

ಮಾರ್ಗದರ್ಶಕರಾದ ಶ್ರೀಮತಿ ಎಚ್. ಎಮ್. ಬೀಳಗಿಯವರು ನನ್ನ ವಿದ್ಯಾಗುರುಗಳು. ವಿದ್ಯಾರ್ಥಿಗಳನ್ನು ಸದಾಕಾಲವೂ ಪ್ರೋತ್ಸಾಹಿಸಿ ಸಾಹಿತ್ಯದ ಓದು ಬರಹದಲ್ಲಿ ಆಸಕ್ತಿಯುಂಟು ಮಾಡುತ್ತಿದ್ದ ಗುರುಗಳೇ ನನಗೆ ಮಾರ್ಗದರ್ಶಕರಾಗಿದ್ದುದು ಹೆಮ್ಮೆಯ ವಿಷಯ. ಅವರು ನನ್ನ ಸಂಶೋಧನಾಧ್ಯಯನದಲ್ಲಿ ಧನಾತ್ಮಕ ಉತ್ಸಾಹ ತುಂಬಿ ನಾನು ಕಾರ್ಯಪ್ರವೃತ್ತಳಾಗುವಂತೆ ಮಾಡುತ್ತಿದ್ದರು. ನನ್ನ ಅಧ್ಯಯನಕ್ಕೆ ಸಂಬಂಧಿಸಿದ ವಿಷಯಗಳನ್ನು ಹೊಳೆದ ವಿಚಾರಗಳನ್ನು ತಾವೇ ನನಗೆ ತಿಳಿಸಿ, ಎಂದಿಗೂ ಹಸನ್ಮುಖದಿಂದಲೇ ನನಗೆ ಮಾರ್ಗದರ್ಶನ, ಸಲಹೆ ಸೂಚನೆಗಳನ್ನು ನೀಡಿದ ಶ್ರೀಮತಿ ಎಚ್. ಎಮ್. ಬೀಳಗಿಯವರು ನನ್ನ ಮಾರ್ಗದರ್ಶಕರಾದದ್ದು ನನ್ನ ಭಾಗ್ಯ ಎಂದು ಕೊಳ್ಳುತ್ತೇನೆ.

ಹಾಗೆಯೇ ನನ್ನ ವಿದ್ಯಾಗುರುಗಳಾದ ನಾಡೋಜ ಡಾ॥ ಎಮ್. ಎಮ್. ಕಲಬುರ್ಗಿಯವರು ಯಾವತ್ತಿಗೂ ನನಗೆ ಸಂಶೋಧನೆಗೆ ಒತ್ತು ಕೊಡುತ್ತಿದ್ದರು. ಸಂಶೋಧನಾಧ್ಯಯನಕ್ಕೆ ಪ್ರವೇಶ ಪಡೆಯುವಾಗ ಎಷ್ಟೊಂದು ಪ್ರೀತಿಯಿಂದ, ವಿದ್ಯಾರ್ಥಿನಿ ಎಂಬ ಅಭಿಮಾನದಿಂದ ಅಭ್ಯಾಸ ಮಾಡಲು ಒತ್ತಡ ಹೇರಿದ್ದರ ಫಲ ನನ್ನ ಈ ಮಹಾಪ್ರಬಂಧ ಸಮರ್ಪಣೆ. ಹಾಗೆಯೇ ಈಗ ದ. ರಾ. ಬೇಂದ್ರೆ ಟ್ರಸ್ಟಿನ ಅಧ್ಯಕ್ಷರಾಗಿರುವ ಡಾ॥ ಶ್ಯಾಮಸುಂದರ ಬಿದರಕುಂದಿಯವರು ನನ್ನ ಅಧ್ಯಯನಕ್ಕೆ ಮಾರ್ಗದರ್ಶನ, ಸಲಹೆ ಸೂಚನೆಗಳನ್ನು, ವಾಮನರಾಯರನ್ನು ಕುರಿತ ಕೆಲ ವಿಷಯಗಳನ್ನು ಹೇಳಿ ಪ್ರೋತ್ಸಾಹಿಸಿದ್ದಾರೆ. ಡಾ॥ ಬಾಳಣ್ಣ ಸೀಗೀಹಳ್ಳಿ ಪಿ. ಎಚ್.ಡಿ. ಅಧ್ಯಯನ ಕುರಿತು ಆಗಾಗ ವಿಚಾರಿಸಿ ಪುಸ್ತಕಗಳನ್ನು ನೀಡಿ ಜೊತೆಗೆ ವೃತ್ತಿರಂಗಭೂಮಿ ಕುರಿತು ವಿಷಯ ಹೇಳಿದ್ದಾರೆ. ನನ್ನ ವಿದ್ಯಾ ಗುರುಗಳಾದ ಡಾ॥ ಗುರುಲಿಂಗ ಕಾಪಸೆ, ಡಾ॥ ವೀಣಾ ಶಾಂತೇಶ್ವರರವರುಗಳು ಹಾಗೂ ಡಾ॥ ರಾಘವೇಂದ್ರರಾವ, ಡಾ॥ ಜಿ. ಎಮ್. ಹೆಗಡೆ, ಡಾ॥ ಶಾಂತಾ ಇಮ್ರಾಪೂರ ಇವರೆಲ್ಲ ನನ್ನ ಅಧ್ಯಯನ ಕುರಿತು ವಿಚಾರಿಸಿ ಪ್ರೋತ್ಸಾಹಿಸಿದ್ದಾರೆ. ಶ್ರೀ ಪ್ರಕಾಶ ಬಾಳೀಕಾಯಿ, ಕಿರಣ ತೋಟಗಂಟಿ, ಬಿರಾದಾರ, ಡಾ॥ ನಾಗಮ್ಮನವರ, ಡಾ॥ ಶ್ರೀಮತಿ ಸುಮಿತ್ರಾ ಜಿ. ಹಿರೇಮಠ ಇವರ ಸಹಕಾರವೂ ಕೂಡ ನನ್ನ ಅಧ್ಯಯನಕ್ಕೆ ಸಹಾಯವಾಗಿದೆ. ಈ ಎಲ್ಲ ಹಿರಿಯರನ್ನು ನಾನು ಮನತುಂಬಿ ನೆನೆಯುತ್ತೇನೆ.

ನನ್ನ ಸಂಶೋಧನಾ ಅಧ್ಯಯನಕ್ಕೆ ತಮ್ಮ ಆಶೀರ್ವಾದಿಂದ ಪ್ರೋತ್ಸಾಹಿಸುತ್ತಿದ್ದ ನನ್ನ ತಂದೆ ತಾಯಿಯರನ್ನು ಈ ಘಳಿಗೆಯಲ್ಲಿ ಸ್ಮರಿಸದಿರಲಾರೆ.

ನನ್ನ ಬಾಳ ಸಂಗಾತಿ ಶ್ರೀ ರಮೇಶ ಹೆಬ್ಬಾಳ, ಮಗಳು ಕು. ಸಿಂಧೂರಿ ನನ್ನ ಓದಿಗೆ ಸದಾಕಾಲ ಸ್ಫೂರ್ತಿಯ ಸೆಲೆಯಾಗಿ ನಿಂತವರು ಎಲ್ಲರೀತಿಯ ಸಹಾಯವನ್ನು ಪ್ರೀತಿಯಿಂದ ನೀಡಿದ್ದಾರೆ. ನನ್ನ ಒತ್ತಡದ ಮನಸ್ಥಿತಿಯಲ್ಲಿ ಆತ್ಮ ವಿಶ್ವಾಸವನ್ನು ತುಂಬಿದ್ದಾರೆ. ಅವರಿಗೆ ನನ್ನ ಭಾವದಾಳದ ಕೃತಜ್ಞತೆಗಳು.

ತಂದೆಯವರ ಸ್ಥಾನದಲ್ಲಿ ನಿಂತು ಶ್ರೇಯೋಭಿಲಾಷೆಗೆ ಹರಸುವ ಚಿಕ್ಕಪ್ಪಂದಿರಾದ ಶ್ರೀ ಎ. ಬಿ. ಭೋಸಲೆ, ಎಸ್. ಬಿ. ಭೋಸಲೆ, ಶ್ರೀಮತಿ ನಂದಾ ಶಿತೋಳೆ, ಸದಾ ಕಾರ್ಯೋನ್ಮುಖಳಾಗುವಂತೆ ಹುರಿದುಂಬಿಸುವ ನನ್ನ ಪ್ರೀತಿಯ ಸಹೋದರಿಯರಾದ ಶ್ರೀಮತಿ ಮೀರಾ, ಶ್ರೀಮತಿ ಪ್ರೇಮಾ,

ನಾಗರತ್ನಾ, ಸೋದರರಾದ ಶ್ರೀ ದತ್ತಾತ್ರೇಯ ಭೋಸಲೆ, ಶ್ರೀ ಮಂಜುನಾಥ ಭೋಸಲೆ, ಹೆಬ್ಬಾಳ ಕುಟುಂಬ ವರ್ಗ, ನನ್ನ ಸಹದ್ಯೋಗಿ ಮಿತ್ರರು ಇವರುಗಳಿಗೆಲ್ಲ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಅಧ್ಯಯನವನ್ನು ಅತ್ಯಂತ ತಾಳ್ಮೆಯಿಂದ, ಸುಂದರವಾಗಿ ಗಣಕೀಕೃತಗೊಳಿಸಿದ ಶ್ರೀ ಸೋಮಶೇಖರ ಇಂಡಿ ಇವರಿಗೂ ಹಾಗೂ ಅಂದವಾಗಿ ಬೈಂಡಿಂಗ್ ಮಾಡಿಕೊಟ್ಟ ಮಹಾಂತೇಶ ಬೈಂಡರ್ಸ್‌ರವರಿಗೆ ಕೃತಜ್ಞತೆಗಳು.

ನನ್ನ ಈ ಅಧ್ಯಯನದಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ನೆರವಾದ ಎಲ್ಲರಿಗೂ ನನ್ನ ಹೃದಯ ತುಂಬಿದ ನಮನಗಳು.

ಮತ್ತೊಮ್ಮೆ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ, ಅಲ್ಲಿನ ಅಧ್ಯಯನಾಂಗಕ್ಕೆ, ಧಾರವಾಡದ ಡಾ॥ ದ. ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟಿಗೆ ಧನ್ಯವಾದಗಳು.

# ಪರಿವಿಡಿ

# ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ ಮತ್ತು ಸ್ವರೂಪ

**ಪೀಠಿಕೆ:**

ರಂಗಭೂಮಿ ಎಂಬುದು ನಾಟಕಕಲೆಗೆ ಸಂಬಂಧಿಸಿದ ಅನೇಕ ಸಂಗತಿಗಳನ್ನು ಒಳಗೊಳ್ಳುವಂಥ ಒಂದು ಸಮಸ್ತಕಲೆ. ಅದರಲ್ಲಿ ಆಂಗಿಕ, ಸಾತ್ವಿಕ ಅಭಿನಯಗಳು, ಸಾಹಿತ್ಯ, ಸಂಗೀತ, ಚಿತ್ರಕಲೆಗಳು ಭಾಗಿಯಾಗುತ್ತವೆ. ಅಲ್ಲಿ ನಟ ನಾಟಕಕಾರ ರಂಗಕವಿಗಳ ಸಹಯೋಗವಿರುತ್ತದೆ. ಬೆಳಕು, ರಂಗಸ್ಥಳ, ಪ್ರೇಕ್ಷಾಂಗಣ, ರಂಗತಾಲೀಮು, ಪ್ರದರ್ಶನ ಸಂದರ್ಭದಲ್ಲಿಯ ಪ್ರೇಕ್ಷಕರ ಕ್ರಿಯೆ, ಪ್ರತಿಕ್ರಿಯೆಗಳು ಹೀಗೆ ಅನೇಕ ಸಂಗತಿಗಳನ್ನು ಅದು ಕೂಡಿಸಿಕೊಂಡು ಬೆಳೆಯುವುದರಿಂದ ರಂಗಭೂಮಿಗೆ ಮೇಳಕಲೆಯೆಂದೂ, ಅವಿಭಕ್ತಕಲೆಯೆಂದೂ ಕರೆಯುವರು. ನಂದಿಕೇಶ್ವರನ 'ಅಭಿನಯ ದರ್ಪಣ' ಗ್ರಂಥದಲ್ಲಿ ಬರುವ ರಂಗಭೂಮಿಯ ವಿಶಾಲ ದರ್ಶನವೊಂದು ಹೀಗಿದೆ:

**ಆಂಗಿಕಮ್ ಭುವನಮ್ ಯಸ್ಯ**

**ವಾಚಿಕಮ್ ಸರ್ವವಾಙ್ಮಯಮ್**

**ಆಹಾರ್ಯಮ್ ಚಂದ್ರ ತಾರಾದಿ**

**ತನ್ನುಮಃ ಸಾತ್ವಿಕಮ್ ಶಿವಮ್**

ವಿಶ್ವವೇ ರಂಗಭೂಮಿ, ಶಿವನು ಮಹಾನ್ ನಟ, ವಿಶ್ವದ ಹಾವಭಾವ, ಚಲನವಲನಗಳೆಲ್ಲ ಶಿವನ ಆಂಗಿಕ ಅಭಿನಯಗಳು, ಅಂತರಂಗದಿಂದ ಒಡಮೂಡುವ ಭಾವಸಂವೇದನೆಗಳೆಲ್ಲ ಸಾತ್ವಿಕ ಅಭಿನಯಗಳು, ವಿಶ್ವದೊಳಗಿನ ಭಾಷೆಗಳೆಲ್ಲ ವಾಚಿಕ ಅಭಿನಯಗಳು ಚಂದ್ರ, ತಾರೆ ಮೊದಲಾದವು ಆಹಾರ್ಯ ಅಭಿನಯಗಳು ಎಂದು ರಂಗಭೂಮಿಯ ವಿಶ್ವರೂಪವನ್ನು ಮೇಲಿನ ಶ್ಲೋಕ ವರ್ಣಿಸುತ್ತದೆ. ಭರತಮುನಿ ನಾಟ್ಯಶಾಸ್ತ್ರವು 'ರಂಗಭೂಮಿಯಲ್ಲಿ ಬಾರದ ಜ್ಞಾನವಿಲ್ಲ, ಕಸುಬಿಲ್ಲ, ವಿದ್ಯೆಯಿಲ್ಲ, ಕಲೆಯಿಲ್ಲ, ಯೋಗವಿಲ್ಲ, ಕರ್ಮವಿಲ್ಲ ಎಂದು ಹೇಳುತ್ತದೆ. ಇಂಥ ಕಲೆಗೆ ಔಚಿತ್ಯಪೂರ್ಣವಾದ ಅನ್ವರ್ಥಕವಾದ ಹೆಸರು ಎಂದರೆ ರಂಗಭೂಮಿ.

ಭಾರತೀಯ ಸಂದರ್ಭದಲ್ಲಿ ಈ ರಂಗಭೂಮಿ ಅತ್ಯಂತ ಪ್ರಾಚೀನವಾದುದು. ಅದು ಕಾಲದಿಂದ ಕಾಲಕ್ಕೆ ಬದಲಾಗುತ್ತ, ವಿಕಾಸವಾಗುತ್ತ ಇಂದಿನ ಸ್ವರೂಪವನ್ನು ಪಡೆದುಕೊಂಡಿದೆ. ಕರ್ನಾಟಕದಲ್ಲಿ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿರುವ ರಂಗಭೂಮಿಯ ಪ್ರಮುಖ ಘಟ್ಟಗಳನ್ನು ಜನಪದ ರಂಗಭೂಮಿ, ವೃತ್ತಿರಂಗಭೂಮಿ, ವಿಲಾಸಿ ರಂಗಭೂಮಿ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ. ಜಾನಪದ ರಂಗಭೂಮಿ ಪ್ರಾದೇಶಿಕವಾದುದು ಸ್ಥಳೀಯವಾದದ್ದು. ಕರಾವಳಿ ಪ್ರದೇಶದಲ್ಲಿ ಯಕ್ಷಗಾನ, ಬಯಲು ಪ್ರದೇಶದಲ್ಲಿ ಮೂಡಲಪಾಯ ಬಯಲಾಟಗಳಲ್ಲದೆ, ಶ್ರೀಕೃಷ್ಣ ಪಾರಿಜಾತ, ಸಂಗ್ಯಾ-ಬಾಳ್ಯಾ,

ರಾಧಾನಾಟ, ದಾಸರಾಟ ಹೀಗೆ ಅನೇಕ ರಂಗಪ್ರಕಾರಗಳು ಅಸ್ತಿತ್ವದಲ್ಲಿವೆ. ಜನಪದ ರಂಗಭೂಮಿ ಮುಖ್ಯವಾಗಿ ಆರಾಧನಾ ನೆಲೆಯಲ್ಲಿ ಹುಟ್ಟಿ, ಮನರಂಜನೆ, ನೀತಿಬೋಧನೆ ಕೊಡುವಂಥದ್ದು.

ಆಧುನಿಕ ಸಂದರ್ಭದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಅನುಕರಣೆಯಿಂದ ಜನಿಸಿದ್ದು ವೃತ್ತಿರಂಗಭೂಮಿ. ಇದು ಇಂಗ್ಲೀಷ ನಾಟಕಗಳ ಪ್ರಭಾವದಿಂದ ಮೊದಲು ಬಂಗಾಳದಲ್ಲಿ ಅಸ್ತಿತ್ವಕ್ಕೆ ಬಂದಿತು. ಆ ಮೇಲೆ ಮುಂಬಯಿಗೆ ಪಸರಿಸಿ ಅಲ್ಲಿಯ ಪಾರಸಿ ಜನರ ರಂಗಚಟುವಟಿಕೆಗಳಿಂದ ವೃತ್ತಿಯ ಸ್ವರೂಪವನ್ನು ಪಡೆದುಕೊಂಡಿತು. ಮುಂಬಯಿಯಲ್ಲಿ ಪ್ರಾರಂಭವಾದ ವೃತ್ತಿರಂಗದ ಚಟುವಟಿಕೆಗಳಿಂದ ಮರಾಠಿ ರಂಗಭೂಮಿಯು ಬೇಗನೆ ವೃತ್ತಿರಂಗಭೂಮಿಯಾಗಿ ಪರಿಣಮಿಸಿತು. ಮರಾಠಿ ನಾಟಕ ಕಂಪನಿಗಳ ಸಂಚಾರದಿಂದ, ಅವುಗಳ ಪ್ರಭಾವ ಪ್ರೇರಣೆಯಿಂದ ಮೊದಲು ಉತ್ತರ ಕರ್ನಾಟಕದಲ್ಲಿ ವೃತ್ತಿರಂಗದ ಚಟುವಟಿಕೆಗಳು ಪ್ರಾರಂಭವಾದವು ಆ ಮೇಲೆ ಈ ಚಟುವಟಿಕೆಗಳು ಮೈಸೂರು ಪ್ರದೇಶಕ್ಕೆ ವಿಸ್ತರಿಸಿದವು. ರಂಗಕಲೆಯಲ್ಲಿ ಆಸಕ್ತಿಯುಳ್ಳ ಕಲಾವಿದರು ಬಂಡವಾಳ ಹೂಡಬಲ್ಲ ಒಬ್ಬ ಕಲಾವಿದ ಅಥವಾ ಮಾಲೀಕರ ನೇತೃತ್ವದಲ್ಲಿ ಸಂಘಟಿತರಾಗಿ ನಾಟಕಗಳನ್ನಾಡುವುದನ್ನು ಉದ್ಯೋಗ ಮಾಡಿಕೊಂಡಿದ್ದರೆ ಅದಕ್ಕೆ ವೃತ್ತಿರಂಗಭೂಮಿ ಎಂದು ಕರೆಯಬಹುದು. ಹಣ ಕೊಟ್ಟು ನಾಟಕ ನೋಡುವುದು, ಹಣ ಪಡೆದು ನಾಟಕ ತೋರಿಸುವುದು ವೃತ್ತಿರಂಗಭೂಮಿಯ ಶಿಸ್ತಾಗಿದೆ. ಇದು ನಮ್ಮ ಪ್ರಾಚೀನ ರಂಗಪರಂಪರೆಗೆ ಹೊಸದು.

ಆಧುನಿಕ ಕನ್ನಡ ರಂಗಭೂಮಿಯಲ್ಲಿ ವೃತ್ತಿರಂಗಭೂಮಿಯದು ಒಂದು ಮಹತ್ವದ ಘಟ್ಟವಾಗಿದೆ. ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದಿಂದ ಇಪ್ಪತ್ತನೆಯ ಶತಮಾನದ ಪೂರ್ವಾರ್ಧದವರೆಗೆ ನಮ್ಮ ನಾಡಿನಲ್ಲಿ ಅನೇಕ ನಾಟಕ ಕಂಪನಿಗಳು ತಲೆಯೆತ್ತಿದವು. ನಾಡಿನಾಚೆಗೂ ಸಂಚರಿಸಿ ನಾಟಕಗಳನ್ನು ಅದ್ಭುತವಾಗಿ ಪ್ರಯೋಗಿಸಿದವು. ಪೌರಾಣಿಕ ನಾಟಕಗಳು, ಸಂಗೀತ ನಾಟಕಗಳು, ಮತ್ತು ಅಭಿಜಾತ ನಟರನ್ನು ಸೃಷ್ಟಿಸಿದ ಕೀರ್ತಿ ವೃತ್ತಿರಂಗಭೂಮಿಗೆ ಸಲ್ಲುತ್ತದೆ. ಭಾರತದ ಸ್ವಾತಂತ್ರ್ಯ ಚಳುವಳಿ, ಕರ್ನಾಟಕ ಏಕೀಕರಣದಲ್ಲಿ ಈ ರಂಗಭೂಮಿ ಮಹತ್ವದ ಪಾತ್ರವನ್ನು ನಿರ್ವಹಿಸಿದ್ದು ಮರೆಯುವಂತಿಲ್ಲ.

**ಅಧ್ಯಯನದ ಉದ್ದೇಶ:**

ನವೋದಯದ ಐತಿಹಾಸಿಕ ಸಂದರ್ಭದಲ್ಲಿ ಅವತರಿಸಿದ ವೃತ್ತಿರಂಗಭೂಮಿ ರಾಷ್ಟ್ರ ಕಟ್ಟುವ ಕೆಲಸವನ್ನು ಒಂದು ಚಳುವಳಿಯ ರೂಪದಲ್ಲಿ ನಿರ್ವಹಿಸಿದ್ದೇನೋ ನಿಜ ಆದರೆ ಸ್ವಾತಂತ್ರ್ಯೋತ್ತರದ ಸನ್ನಿವೇಶದಲ್ಲಿ ಚಲನಚಿತ್ರಗಳ ಜನಪ್ರಿಯತೆ, ಹವ್ಯಾಸಿ ರಂಗಚಟುವಟಿಕೆಗಳು ಹಾಗೂ ತನ್ನೊಳಗೇ ಬೆಳೆಯುತ್ತ ಹೋದ ದೌರ್ಬಲ್ಯಗಳಿಂದ ವೃತ್ತಿರಂಗಭೂಮಿ ಸೊರಗುತ್ತ ನಡೆಯಿತು. ಹವ್ಯಾಸಿ ರಂಗಭೂಮಿಯನ್ನು ಕಟ್ಟಲು ಹೊರಟವರ ಉಗ್ರ ಟೀಕೆಗೂ ವೃತ್ತಿರಂಗಭೂಮಿ ಗುರಿಯಾಯಿತು.

'ಕಂಪನಿ ನಾಟಕಗಳು ನಾಟಕಗಳೇ ಅಲ್ಲ' 'ಕಂಪನಿ ನಾಟಕಗಳನ್ನು ನೋಡುವವರು ಸುಸಂಸ್ಕೃತರಲ್ಲ' ಎಂಬ ಟೀಕೆಗಳು ವೃತ್ತಿರಂಗಭೂಮಿಯ ಅಸ್ತಿತ್ವಕ್ಕೆ ಮಾರಕವಾಗಿ ಪರಿಣಮಿಸಿದವು. ಇಂಥ

ಸಂದರ್ಭದಲ್ಲಿ ವೃತ್ತಿರಂಗಭೂಮಿಯವರಾದರೂ ಟೀಕೆಗಳನ್ನು ಸವಾಲಾಗಿ ಸ್ವೀಕರಿಸಲಿಲ್ಲ. ಸಿನಿಮಾಗಳನ್ನು ಅನುಕರಿಸಿ ಇನ್ನಷ್ಟು ದಆರಿ ತಪ್ಪಿಸಿದರು. ಬರುಬರುತ್ತ ವೃತ್ತಿರಂಗಭೂಮಿಯ ಜೀವಂತಿಕೆಯನ್ನು ಪ್ರಶ್ನಿಸುವ ಮಾತುಗಳು ಕೇಳಿಬಂದವು. ವೃತ್ತಿರಂಗಭೂಮಿಯ ದೌರ್ಬಲ್ಯಗಳನ್ನು ತಿದ್ದುವ ಅವುಗಳ ಒಳಿತಿಗಾಗಿ ಹಂಬಲಿಸುವ ಪ್ರಯತ್ನಗಳು ಶಿಷ್ಟರೆನಿಸಿಕೊಂಡವರಿಂದ ನಡೆಯಲಿಲ್ಲ. 'ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ' ಎಂಬಂತೆ ವೃತ್ತಿರಂಗಭೂಮಿಯ ಮೇಲೆ ಟೀಕೆಗಳ ಸುರಿಮಳೆ ಮುಂದುವರೆಯಿತು. ಇದರ ಪರಿಣಾಮ ಇಂದಿನ ವೃತ್ತಿರಂಗಭೂಮಿ.

ಇಂದಿನ ವೃತ್ತಿರಂಗಭೂಮಿಯ ದೌರ್ಬಲ್ಯಗಳನ್ನು ನೋಡಿ ಅದರ ಐತಿಹಾಸಿಕ ಸಾಧನೆಯನ್ನು ಕಡೆಗಣಿಸುವಂತಿಲ್ಲ. ಇಂದಿನ ರಂಗಭೂಮಿ ಕಲಿಯಬೇಕಾದಂತಹ ಅನೇಕ ಪಾಠಗಳು ವೃತ್ತಿರಂಗಭೂಮಿಯ ಚರಿತ್ರೆಯನ್ನು ಬರೆಯುವ ಆ ಮೂಲಕ ಕಲಿಯಬೇಕಾದಂತಹ 'ಪಾಠ'ಗಳನ್ನು ಸಿದ್ಧಪಡಿಸುವ ಪ್ರಯತ್ನಗಳು, ಅಧ್ಯಯನಗಳು ಕಳೆದ ೨-೩ ದಶಕಗಳಿಂದ ನಡೆದಿವೆ. ಅದರ ಮುಂದುವರಿಕೆಯಾಗಿ 'ವಾಮನರಾವ ಮಾಸ್ತರರ ನಾಟಕ ಮಂಡಳಿ ಮತ್ತು ನಾಟಕಗಳು' ಎಂಬ ಮಹಾಪ್ರಬಂಧ ರೂಪಗೊಂಡಿದೆಯೆಂದು ನಮ್ರವಾಗಿ ಹೇಳುವೆ. ಸಂಗೀತ ನಾಟಕಗಳ ಕಾಲದಲ್ಲಿಯ ವಾಮನರಾಯರ ಸಾಧನೆ ಅಪೂರ್ವವಾಗಿದೆ.

**ಕರ್ನಾಟಕ ವೃತ್ತಿರಂಗಭೂಮಿ: ಚಾರಿತ್ರಿಕ ಹಿನ್ನೆಲೆ:**

ಬಂಗಾಳಿ ಮತ್ತು ಮರಾಠಿ ನಾಟಕಗಳ ಪ್ರೇರಣೆಯಿಂದ ಕರ್ನಾಟಕದಲ್ಲಿ ವೃತ್ತಿರಂಗಭೂಮಿ ಹುಟ್ಟಿ ಬೆಳೆದು ಬಂದ ಕ್ರಮವನ್ನು ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲಾಗಿದೆ. ವಿಶೇಷವೆಂದರೆ ಉತ್ತರ ಕರ್ನಾಟಕವು ಮರಾಠಿಮಯವಾಗಿ ಪರಿಣಮಿಸಿದ ಕಾಲದಲ್ಲಿ ಕನ್ನಡ ನಾಡು ನುಡಿಯ ಅಭಿಮಾನದಿಂದ ನಮ್ಮ ವೃತ್ತಿರಂಗಭೂಮಿ ಅಸ್ತಿತ್ವಕ್ಕೆ ಬಂದುದರ ಹಿನ್ನಲೆಯನ್ನು ಶಾಂತಕವಿ ಕಾವ್ಯನಾಮದ ಸಕ್ಕರಿ ಬಾಳಾಚಾರ್ಯರು 'ಕೃತಪುರ ಕರ್ನಾಟಕ ನಾಟಕ ಮಂಡಳಿ' ಕಟ್ಟಿ ರಂಗಭೂಮಿಯ ಮೂಲಕ ಮಾಡಿದ ಕನ್ನಡ ಸೇವೆಯನ್ನು ಈ ಅಧ್ಯಾಯ ಒಳಗೊಂಡಿದೆ.

ಕನ್ನಡ ಮತ್ತು ಮರಾಠೀ ರಂಗಭೂಮಿಗಳ ಪರಸ್ಪರ ಕೊಡುಕೊಳ್ಳುವಿಕೆಯ ವಿಶೇಷತೆಯನ್ನೂ ಇಲ್ಲಿ ಗುರುತಿಸಲಾಗಿದೆ. ಕರಾವಳಿ ಪ್ರದೇಶದ ಯಕ್ಷಗಾನ ಬಯಲಾಟಗಳು, ದಶಾವತಾರ ಆಟಗಳು ಸಾಂಗಲಿ ಸಂಸ್ಥಾನ, ತಂಜಾವರ ಭೋಸಲೆ ಅರಸರ ಆಸ್ಥಾನದಲ್ಲಿ ಪ್ರಯೋಗವಾಗಿ ಆಡಿ ಅಲ್ಲಿಯ ಆಧುನಿಕ ಮರಾಠಿ ನಾಟಕಗಳಿಗೆ ಹೇಗೆ ಪ್ರೇರಣೆ ನೀಡಿದವು? ಎಂಬುದರ ಹಿನ್ನೆಲೆಯೂ ಗಮನಾರ್ಹವಾಗಿದೆ. ಅಂದರೆ ಕನ್ನಡ ಜನಪದ ಬಯಲಾಟಗಳು ಮರಾಠೀ ನಾಟಕಗಳು ಪಾರಸಿ ಕಂಪನಿಗಳ ಪ್ರಭಾವದಿಂದ ಕಂಪನಿ ಸ್ವರೂಪಕ್ಕೆ ತಿರುಗಿದವು. ಮರಾಠೀ ನಾಟಕ ಪಿತಾಮಹ ಎಂದು ಖ್ಯಾತನಾದ ವಿಷ್ಣುಪಂತ ಭಾವೆ ಮುಂಬಯಿ ನಗರದಲ್ಲಿ ಕೆಲವು ದಿನ ವಾಸ್ತವ್ಯ ಹೂಡಿದರು. ಅಲ್ಲಿ ಅವನ 'ಸಾಂಗಲಿ ನಾಟಕ ಮಂಡಳಿ'

ವೃತ್ತಿಯ ಶಿಸ್ತನ್ನು ಪಡೆದುಕೊಂಡು ಸಾಂಗಲಿಯತ್ತ ಮರುಳಿತು. ಅದೇ ರೀತಿ ಈಚಲಕರಂಜಿಕರ ನಾಟಕ ಮಂಡಳಿ, ಚಿತ್ತಚಕ್ಷು ಚಮತ್ಕಾರಕ ನಾಟಕ ಮಂಡಳಿ, ಹಿಂದುಜಾ ಸಾಂಗಲಿಕರ ನಾಟಕ ಮಂಡಳಿ-ಇವು ಮೊದಲು ವಿಲಾಸಿ ಸ್ವರೂಪದಲ್ಲಿ ಪ್ರಾರಂಭವಾಗಿ ಆ ಮೇಲೆ ವೃತ್ತಿಸ್ವರೂಪ ಪಡೆದವು. ಸಂಚರಿಸುತ್ತ ಉತ್ತರ ಕರ್ನಾಟಕಕ್ಕೆ ಬಂದವು. ಈ ಮರಾಠೀ ನಾಟಕಗಳು ಉತ್ತರ ಕರ್ನಾಟಕದ ಜನರನ್ನು ಮರುಳು ಮಾಡಿದವು. ಹೊಸ ಬಗೆಯ ಪ್ರಯೋಗಗಳು, ರಂಗಸಂಗೀತ, ಸೀನರಿಗಳ ಆಕರ್ಷಣೆಗೆ ಮಾರುಹೋಗಿ ಕನ್ನಡಿಗರು ಮರಾಠೀ ನಾಟಕಗಳನ್ನು ನೋಡುವ ಶೋಕಿ ಬೆಳೆಸಿಕೊಂಡರು.

ನಾಟಕ-ಸಂಗೀತ, ವ್ಯವಹಾರ-ಆಡಳಿತ ಇತ್ಯಾದಿ ರಂಗಗಳಲ್ಲಿ 'ಮರಾಠೀ'ಯೇ ಮುಂದಾಯಿತು. ಉತ್ತರ ಕರ್ನಾಟಕವು ಮರಾಠಿಮಯವಾಗಿ ಪರಿಣಮಿಸಿತಲ್ಲದೆ ದಕ್ಷಿಣ ಮಹಾರಾಷ್ಟ್ರ ಎಂಬ ವಿಶೇಷಣಕ್ಕೆ ಪಾತ್ರವಾಯಿತು. ಆಗ ಶಾಂತಕವಿಗಳು ಕನ್ನಡ ನೆಲದ ಮೇಲಿನ ಮರಾಠಿಯ ಸಾಂಸ್ಕೃತಿಕ ಆಕ್ರಮಣವನ್ನು ಪ್ರತಿಭಟಿಸಿ ನಿಂತರು. ಕನ್ನಡದಲ್ಲಿಯೂ ಉತ್ತಮ ನಾಟಕಗಳಿವೆ. ನಾಟಕಗಳಲ್ಲಿ ಸೊಗಸಾದ ವೇಷಭೂಷಣಗಳಿವೆ, ನಾಟಕದಲ್ಲಿ ಮಧುರ ಸಂಗೀತವಿದೆ, ನಾಟಕಗಳನ್ನು ಅಭಿನಯಿಸಲು ಪ್ರತಿಭಾವಂತ ಕಲಾವಿದರಿದ್ದಾರೆ ಎಂಬುದನ್ನು ತಮ್ಮ ನಾಟಕಗಳ ಮೂಲಕ ತೋರಿಸಿಕೊಟ್ಟರು ಶಾಂತಕವಿಗಳ ಈ ಐತಿಹಾಸಿಕ ಪ್ರಯತ್ನವು ಅವರಿಗೆ 'ಕರ್ನಾಟಕ ನಾಟಕ ಪಿತಾಮಹ' ಎಂಬ ಪಟ್ಟವನ್ನು ಕಟ್ಟಿತು. ಕನ್ನಡ ವೃತ್ತಿರಂಗಭೂಮಿಯ ಚರಿತ್ರೆಯಲ್ಲಿ ಶಾಂತಕವಿಗಳ ಈ ಸಾಧನೆ ತುಂಬ ಮಹತ್ವದ್ದು. ಕಾರಣ ಅದರ ಚಾರಿತ್ರಿಕ ಹಿನ್ನಲೆಯೊಂದಿಗೆ ಕೊಣ್ಣೂರ ನಾಟಕ ಮಂಡಳಿ, ಶಿರಹಟ್ಟಿ ನಾಟಕ ಮಂಡಳಿ, ಹಲಗೇರಿ ನಾಟಕ ಮಂಡಳಿ, ವಾಮನರಾಯರ ನಾಟಕ ಮಂಡಳಿ, ಗರುಡ ಸದಾಶಿವರಾಯರ ನಾಟಕ ಮಂಡಳಿ, ಯರಾಸಿ ಭರಮಪ್ಪನವರ ನಾಟಕ ಮಂಡಳಿ, ಅಬ್ಬಿಗೇರಿ ಬಸನಗೌಡರ ನಾಟಕ ಮಂಡಳಿ, ಗೋಕಾಕ ಹೊಸಮನಿ ಸಹೋದರರ ನಾಟಕ ಮಂಡಳಿ, ಜಮಖಂಡಿ ನಾಟಕ ಕಂಪನಿ, ಏಣಗಿ ಬಾಳಪ್ಪನವರ ನಾಟಕ ಮಂಡಳಿ ಇತ್ಯಾದಿ ಅನೇಕ ನಾಟಕ ಕಂಪನಿಗಳು ಕಾಲ ಕಾಲಕ್ಕೆ ಹುಟ್ಟಿ ಹೇಗೆ ರಂಗಭೂಮಿಯ ಆಕರ್ಷಣೆಯನ್ನು ಹೆಚ್ಚಿಸಿದವು ಎಂಬುದನ್ನು 'ವೃತ್ತಿರಂಗಭೂಮಿ : ಚಾರಿತ್ರಿಕ ಹಿನ್ನೆಲೆ' ಅಧ್ಯಾಯದಲ್ಲಿ ಅವಲೋಕಿಸಲಾಗಿದೆ.

**ಕರ್ನಾಟಕ ವೃತ್ತಿರಂಗಭೂಮಿ ಮತ್ತು ವಾಮನರಾವ ಮಾಸ್ತರ:**

ವಾಮನರಾವ ಮಾಸ್ತರರ ಜೀವನ, ಅವರು ನಟರಾಗಿ, ನಾಟಕಕಾರರಾಗಿ ಮತ್ತು ನಾಟಕ ಕಂಪನಿಯ ಮಾಲೀಕರಾಗಿ ಹಂತ ಹಂತವಾಗಿ ಹೇಗೆ ರೂಪಗೊಂಡರು ಎಂಬುದನ್ನು ಪ್ರಸ್ತುತ ಅಧ್ಯಯನ ವಿವರಿಸುತ್ತದೆ. ವೃತ್ತಿರಂಗಭೂಮಿ ಪರಂಪರೆಯ ಅತ್ಯಂತ ಮಹತ್ವದ ಘಟ್ಟದಲ್ಲಿ ವಾಮನರಾವ ಅವರು ರಂಗಭೂಮಿಯನ್ನು ಪ್ರವೇಶಿಸುತ್ತಾರೆ ಅವರು ಹುಟ್ಟಿದ್ದು ಜಮಖಂಡಿ ಸಂಸ್ಥಾನದ ರಬಕವಿಯಲ್ಲಿ, ಬೆಳದದ್ದು, ಶಾಲೆ ಕಲಿತಿದ್ದು ಬಂಕಾಪುರದಲ್ಲಿ, ಶಾಲೆಯ ಶಿಕ್ಷಕರಾಗಿ ವೃತ್ತಿ ಜೀವನ ಆರಂಭಿಸಿದ್ದು ಸಾಂಗಲಿ ಸಂಸ್ಥಾನಕ್ಕೆ ಒಳಪಟ್ಟ ಕಡೋಲಿ ಎಂಬ ಊರಲ್ಲಿ ಈ ಮೂರು ಸ್ಥಳಗಳು ವಾಮನರಾಯರು

ರಂಗಭೂಮಿಯತ್ತ ಒಲಿದು ನಿಲ್ಲಲು ಒಳ್ಳೆಯ ಪರಿಸರವನ್ನು ನೀಡಿದವು. ಮರಾಠಿ ನಾಟಕ ಕಂಪನಿಗಳು ಅಂದಿನ ದಿನಗಳಲ್ಲಿ ವೈಭವಪೂರ್ಣವಾಗಿ ಸಂಚರಿಸುತ್ತಿದ್ದವು. ಕಿರ್ಲೋಸ್ಕರ್ ಕಂಪನಿ, ಸಾಂಗಲಿಕರ ಕಂಪನಿಗಳ ಪ್ರಭಾವ ಜೋರಾಗಿತ್ತು. ಆಗ ಬಾಲಗಂಧರ್ವರು ಒಳ್ಳೆಯ ಪ್ರಸಿದ್ಧಿಯಲ್ಲಿದ್ದರು. ಅವರ ಸಂಗೀತ, ವೇಷಭೂಷಣ, ನಾಟಕ, ನಟನೆ, ನಾಟಕಗಳು ಮಹಾರಾಷ್ಟ್ರದಲ್ಲಿ ಮಾತ್ರವಲ್ಲ ಕರ್ನಾಟಕದಲ್ಲಿಯೂ ಮನೆಮಾತಾಗಿದ್ದವು. ಆ ಕಾಲದ ಕನ್ನಡ ರಂಗಭೂಮಿಯ ನಟ ನಟಿಯರಿಗೂ ಬಾಲಗಂಧರ್ವರು ಅನುಕರಣೀಯರೆನಿಸಿದ್ದರು. ವಾಮನರಾವ ಮಾಸ್ತರ ಕೂಡ ಬಾಲಗಂಧರ್ವ, ಜೋಗಳೆಕರ, ಕೇಶವರಾವ ಭೋಸಲೆ ಮುಂತಾದವರ ರಂಗವ್ಯಕ್ತಿತ್ವದಿಂದಲೇ ಪ್ರೇರಿತರಾದರು. ಆದರೆ ಅವರ ಪಾತ್ರಗಳನ್ನು ಗಾಯನವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿ ನಮ್ಮ ಕನ್ನಡದ ಜಾಯಮಾನಕ್ಕೆ ತಕ್ಕಂತೆ ತಮ್ಮ ರಂಗಭೂಮಿ ವ್ಯಕ್ತಿತ್ವವನ್ನು ಕಟ್ಟಿಕೊಂಡರು. ಮರಾಠಿ ನಾಟಕ ಕಂಪನಿಗಳು ವಾಮನರಾಯರನ್ನು ಆಮಂತ್ರಿಸುತ್ತವೆ. ರಾಯರು ಮಾತ್ರ ಕನ್ನಡದಲ್ಲಿಯೇ ಮಾಡಬೇಕಾದದ್ದು ಬಹಳಷ್ಟು ಇದೆ ಎಂದು ಕನ್ನಡ ನೆಲವನ್ನು ನಂಬಿ ನಿಲ್ಲುವರು. ವಾಮನರಾಯರ ಈ ನಿಲುವು ಕೂಡ ಅಂದಿನ ಕನ್ನಡ ನಾಡು ನುಡಿ ಪರಿಸರದಿಂದ ಪ್ರೇರಿತರಾಗಿರುವುದನ್ನು ಗುರುತಿಸಲಾಗಿದೆ.

ವಾಮನರಾಯರು ೧೯೧೨ರ ಸುಮಾರು ಶಿರಹಟ್ಟಿ ವೆಂಕೋಬರಾಯರ ನಾಟಕ ಕಂಪನಿಯನ್ನು ಪ್ರವೇಶಿಸುತ್ತಾರೆ ಶಿರಹಟ್ಟಿ ಕಂಪನಿಯು ಆಗ ಕರ್ನಾಟಕದಲ್ಲಿ ತನ್ನದೇ ಆದ ಛಾಪು ಮೂಡಿಸಿತ್ತು. ಅದರ ರಂಗಸಜ್ಜಿಕೆ, ರಂಗಪರಿಕರ, ಪೌರಾಣಿಕ ನಾಟಕಗಳು, ಅಭಿನಯ ಕೌಶಲ್ಯದ ನಟರು, ದಕ್ಷ ಆಡಳಿತವನ್ನು ಜನರು ಮೆಚ್ಚಿಕೊಂಡಿದ್ದರು ಇಂಥ ಕಂಪನಿಯು ವಾಮನರಾಯರ ಆಗಮನದಿಂದ ಇನ್ನಷ್ಟು ಜನಪ್ರಿಯತೆಯನ್ನು ಪಡೆಯುವಂತಾಯಿತು. ಕಾರಣವಿಷ್ಟೇ ವಾಮನರಾಯರು ಸಂಗೀತದಲ್ಲಿ ಶಾಸ್ತ್ರೀಯ ಸಂಗೀತದಲ್ಲಿ ಪರಿಣಿತರಿದ್ದರು. ಸಾಹಿತ್ಯದಲ್ಲಿ ಅಭಿರುಚಿವುಳ್ಳವರಾಗಿದ್ದರು ಕನ್ನಡ ಮತ್ತು ಮರಾಠಿ ಎರಡು ಭಾಷೆಗಳಲ್ಲಿ ಪಂಡಿತರಾಗಿದ್ದರು. ಈ ಗುಣಗಳಿಂದ ವಾಮನರಾಯರು ಕಂಪನಿಗೆ ಸಂಪತ್ತಾಗಿ ಪರಿಣಮಿಸಿದರು. ವೆಂಕೋಬರಾಯರು ನಾಟಕದ ಸಂಗೀತ ಮತ್ತು ಸಾಹಿತ್ಯದ ಹೊಣೆಯನ್ನು ವಾಮನರಾಯರಿಗೆ ಒಪ್ಪಿಸಿ ತಾವು ಅಭಿನಯ ಹಾಗೂ ಆಡಳಿತದಲ್ಲಿ ಹೆಚ್ಚು ಲಕ್ಷ್ಯ ಕೇಂದ್ರೀಕರಿಸಿದರು.

ವಾಮನರಾಯರ ಸಾಧನೆಗೆ ಶಿರಹಟ್ಟಿ ಕಂಪನಿಯು ಆಡುಂಬೊಲವಾಯಿತು. ಕಂಪನಿಯ ನಾಟಕಗಳಿಗೆ ಕಲಾತ್ಮಕತೆ ತುಂಬಲು ನಿರ್ದೇಶಕರಾಗಿ, ತಮ್ಮ ಪಾತ್ರಗಳು ಕಳೆಗಟ್ಟಲು ಸಂಗೀತ ಸಾಧಕರಾಗಿ, ಸಂಭಾಷಣೆ ಹೊಸೆದು ಕೊಡಲು ನಾಟಕಕಾರರಾಗಿ–ವಿವಿಧ ನೆಲೆಯಲ್ಲಿ ನಿಂತು ಕೆಲಸ ಮಾಡಿದರು. ಅವರ ಪರಿಶ್ರಮ, ಪ್ರತಿಭೆಯಿಂದ ಶಿರಹಟ್ಟಿ ಕಂಪನಿಯ ನಾಟಕಗಳು ಮೊದಲಿಗಿಂತ ಹೆಚ್ಚು ಜನಪ್ರಿಯತೆಯನ್ನು ಪಡೆದವು. ವಾಮನರಾಯರೇ ಕಂಪನಿಯ ಮುಖ್ಯ ಕಲಾವಿದರಾಗಿ ಬೆಳೆದರು. ಕವಿರತ್ನ ಕಾಳಿದಾಸದಲ್ಲಿ ಕಾಳಿದಾಸ, ವಿವೇಕ ವಿಜಯದಲ್ಲಿ ವಿವೇಕ, ಭಕ್ತ ಪ್ರಹ್ಲಾದದಲ್ಲಿ ಪ್ರಹ್ಲಾದ– ಈ ಪಾತ್ರಗಳು ಅವರನ್ನು

ಕೀರ್ತಿಯ ಉತ್ತುಂಗಕ್ಕೆ ಒಯ್ದವು. ಇವರ ರಂಗಗೀತೆಗಳು ರಸಿಕರ ಮನಸ್ಸನ್ನು ಸೂರೆಗೊಂಡವು ರಾಯರು ಗಾಯಕ ನಟ ಎಂಬ ಖ್ಯಾತಿ ನಾಡಿನ ಉದ್ದಗಲಕ್ಕೂ ಹರಡಿತು. ಗಾಯನದ ಜೊತೆಗೆ ಅಭಿನಯದಲ್ಲಿಯೂ ಇವರು ಔಚಿತ್ಯ ಮೀರುತ್ತಿರಲಿಲ್ಲ ಇದರಿಂದ ರಂಗಭೂಮಿಯ ಸವ್ಯಸಾಚಿ ಕಲಾವಿದರಾಗಿ ಬೆಳೆದರು. ಇದೇ ಕಂಪನಿಯಲ್ಲಿ ನಾಟಕಗಳಿಗೆ ಬೇಕಾಗುವಂಥಹ ರಂಗಗೀತೆಗಳನ್ನು ಬರೆಯುತ್ತಿದ್ದರು. ಸಂಭಾಷಣೆಯನ್ನೂ ಬರೆದುಕೊಡುತ್ತಿದ್ದರು. ಆ ಕಾಲದಲ್ಲಿ ಪ್ರಯೋಗಕ್ಕೆ ಆಯ್ದುಕೊಂಡ ನಾಟಕದ ಪ್ರತಿಯೂ ಕವಿಯ ಪ್ರತಿಯಾಗಿಯೇ ಉಳಿಯುತ್ತಿರಲಿಲ್ಲ. ಕಂಪನಿಯ ಕಲಾವಿದರು, ನಾಟಕ ಆಡುವ ಸ್ಥಳ, ಅಲ್ಲಿಯ ಪ್ರೇಕ್ಷಕರು ಅವರಿಗೆಲ್ಲ ರುಚಿಸುವಂತೆ ಮತ್ತು ನಾಟಕ ಹೆಚ್ಚು ಪರಿಣಾಮಕಾರಿಯಾಗುವಂತೆ ಮಾಡಲು ನಾಟಕದ ಸಾಹಿತ್ಯ, ಸಂಭಾಷಣೆ, ಸಂಗೀತದಲ್ಲಿ ಪರಿಷ್ಕರಣೆ ಎಂಬವುಗಳು ನಿರಂತರ ನಡೆಯುತ್ತಲೇ ಇರುತ್ತಿದ್ದವು. ಶಿರಹಟ್ಟಿ ಕಂಪನಿಯಲ್ಲಿ ವಾಮನರಾಯರು ಈ ತರಹದ ಚಟುವಟಿಕೆಗಳಿಂದ ರಂಗಭೂಮಿಗೆ ಬೇಕಾಗುವ ಬಹುಮುಖ ವ್ಯಕ್ತಿತ್ವವನ್ನು ಸಾಧಿಸಿಕೊಂಡರು.

ಶಿರಹಟ್ಟಿ ಕಂಪನಿಯಿಂದ ಹೊರಬಂದ ಮೇಲೆ ರಾಯರು ಸ್ವಂತ ಕಂಪನಿ ಪ್ರಾರಂಭಿಸಿದರು. ಹಿಂದಿನ ಅನುಭವ ಇಲ್ಲಿ ಹೆಚ್ಚು ಉಪಯೋಗಕ್ಕೆ ಬಂದಿತು. ಶಿರಹಟ್ಟಿ ಕಂಪನಿಯಲ್ಲಿ ಆಡುತ್ತಿದ್ದ 'ಕವಿರತ್ನ ಕಾಳಿದಾಸ' ಹಾಗೂ 'ಭಕ್ತ ಪ್ರಹ್ಲಾದ' ನಾಟಕಗಳನ್ನು ಮತ್ತೆ ಪರಿಷ್ಕರಿಸಿ ನವೀಕರಿಸಿದರು. ತಮ್ಮ ಕಂಪನಿಗೆ ಬೇಕಾಗುವ ರೀತಿಯಲ್ಲಿ ನಾಟಕಗಳನ್ನು ಪುನರ್‌ರಚಿಸಿದರು. ತೆಲುಗಿನಲ್ಲಿ ಅತ್ಯಂತ ಜನಪ್ರಿಯವೆನಿಸಿದ್ದ 'ಲಂಕಾದಹನ' ಹಾಗೂ 'ರಾವಣವಧೆ' ನಾಟಕಗಳನ್ನು ಅಭ್ಯಸಿಸಿ ಅವುಗಳನ್ನು ಕನ್ನಡಕ್ಕೆ ಅನುವಾದಿಸಿದರು. ಈ ಮೂಲಕ ಸ್ವಂತ ಕಂಪನಿಯ ಪ್ರಯೋಗಗಳನ್ನು ಜನಪ್ರಿಯಗೊಳಿಸಿದರು ಮತ್ತು ಕಂಪನಿಯ ಅಸ್ತಿತ್ವವನ್ನು ಭದ್ರಗೊಳಿಸಿದರು.

ವಿಶ್ವಗುಣಾದರ್ಶ ಕಂಪನಿ ನಾಟಕಗಳಿಗೆ ಪ್ರೇಕ್ಷಕರಿಂದ ಒಳ್ಳೆಯ ಪ್ರತಿಕ್ರಿಯೆ ಸಿಗುತ್ತಿದ್ದಂತೆ ರಾಯರು ಮರಾಠಿಯ ಶ್ರೇಷ್ಠ ಮತ್ತು ಸಂಗೀತ ಪ್ರಧಾನ ನಾಟಕಗಳನ್ನು ಒಂದೊಂದಾಗಿ ಅನುವಾದಿಸಿದರು. ಪಾರ್ವತೀ ಸತ್ವಪರೀಕ್ಷೆ, ಭಕ್ತ ಪುಂಡಲೀಕ, ಸಾಧ್ವಿ ಸಖೂಬಾಯಿ, ಎರಡನೆಯ ಬಾಜೀರಾವ ಪೇಶವೆ, ಸಂದೇಹ ಸಾಮ್ರಾಜ್ಯ, ಕೃಷ್ಣಾರ್ಜುನರ ಯುದ್ಧ, ವೀರ ಅಭಿಮನ್ಯು ವಾಮನರಾಯರ ಮೂಲಕ ಕನ್ನಡಕ್ಕೆ ಬಂದ ಮರಾಠಿ ನಾಟಕಗಳಿವು. ಇವನ್ನು ಕನ್ನಡ ಭಾಷೆ, ಸಾಹಿತ್ಯದ ಜಾಯಮಾನಕ್ಕೆ ತಕ್ಕಂತೆ ಕನ್ನಡ ರಂಗಭೂಮಿಗೆ ಹೊಂದುವಂತೆ ಅನುವಾದಿಸಿದರು. ವಿಶ್ವಗುಣಾದರ್ಶ ಕಂಪನಿಯಿಂದ ಪ್ರಯೋಗಗೊಂಡು ಇವು ಕನ್ನಡದ ಶ್ರೇಷ್ಠ ರಂಗಕೃತಿಯಾಗಿ ದಾಖಲೆ ಸ್ಥಾಪಿಸಿದವು.

ವಾಮನರಾಯರು ಕಂಪನಿಯ ಮಾಲೀಕರಾಗಿ ಕಂಪನಿಯ ಮತ್ತು ಕಲಾವಿದರ ಶ್ರೇಯಸ್ಸಿಗಾಗಿ ಶ್ರಮಿಸಿದ ರೀತಿ ವೃತ್ತಿರಂಗಭೂಮಿ ಚರಿತ್ರೆಯಲ್ಲಿಯೇ ಅಪರೂಪದ್ದು. ನಾಟಕ ಎಂದರೆ ಜನರು ಉದಾಸೀನ, ಉಪೇಕ್ಷೆಯಿಂದ ನೋಡುತ್ತಿದ್ದ ಕಾಲದಲ್ಲಿ ರಂಗಭೂಮಿಯ ಬಗ್ಗೆ ಗೌರವ ಭಾವನೆ,

ಕಲಾವಿದರ ಬಗ್ಗೆ ಗೌರವ ಭಾವನೆ ಉಂಟಾಗುವಂತೆ ಮಾಡಿದವರಲ್ಲಿ ವಾಮನರಾಯರು ಪ್ರಸಿದ್ಧರು. ರಂಗಕಲಾವಿದರ ಚರಿತ್ರೆ, ಚಾರಿತ್ರ್ಯ ಹೇಗಿರಬೇಕು ಎಂಬುದನ್ನು ಸ್ವತಃ ನಡೆದು ತಮ್ಮ ಕಂಪನಿ ಕಲಾವಿದರನ್ನು ನಡೆಸಿದ ಹಿರಿಮೆ ವಾಮನರಾಯರದು. ಕಂಪನಿಗಾಗಿ ಕಲಾವಿದರಿಗಾಗಿ ಪತ್ನಿಯ ಮೈಮೇಲಿನ ಆಭರಣಗಳನ್ನು ಮಾರಿದವರು ಕಂಪನಿ ಕಲೆಕ್ಷನ್ ಚೆನ್ನಾಗಿ ಆದಾಗ ಮತ್ತೆ ಆಭರಣ ಮಾಡಿಸಿದವರು ವಾಮನರಾಯರು. ತಮ್ಮ ಜೊತೆಗಿದ್ದ ಕಲಾವಿದರೂ ಸುಖ ಸಂತೋಷವಾಗಿರಬೇಕೆಂದು ಬಯಸಿದವರು. ಈ ರೀತಿ ರಂಗಭೂಮಿಯಲ್ಲಿ ನಾಟಕಕಾರರಾಗಿ, ನಟರಾಗಿ, ಗಾಯಕರಾಗಿ, ಕಂಪನಿಯ ಮಾಲೀಕರಾಗಿ ಬೆಳೆದವರು ವಾಮನರಾಯರು.

**ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿ:**

ಪ್ರಸ್ತುತ ಅಧ್ಯಾಯವು ವಾಮನರಾಯರು ಸ್ವಂತ ಕಂಪನಿ ಕಟ್ಟಲು ಒದಗಿ ಬಂದ ಕಾರಣ-ಪ್ರೇರಣೆಗಳು, ಕಂಪನಿಯ ಸಂಘಟನೆ, ಕಲಾವಿದರು, ಸಂಚಾರ ಕಂಪನಿಯ ಆಡಳಿತ ಇತ್ಯಾದಿ ಕಂಪನಿಗೆ ಸಂಬಂಧಿಸಿದ ಪ್ರಮುಖ ಸಂಗತಿಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಒಳಗೊಂಡಿದೆ. ವಿಶ್ವಗುಣಾದರ್ಶ ಕಂಪನಿಯ ಬಗೆಗೆ ಅಲ್ಲಲ್ಲಿ ಪ್ರಕಟವಾದ ಉಲ್ಲೇಖನಗಳನ್ನು ಸಂಗ್ರಹಿಸಿ, ರಂಗಭೂಮಿಯ ಹಿರಿಯ ಕಲಾವಿದರ ಸಂದರ್ಶನದ ಬೆಳಕಿನಲ್ಲಿ ಖಚಿತಪಡಿಸಿಕೊಂಡು ಕಂಪನಿಯ ಚರಿತ್ರೆಯನ್ನು ಕಟ್ಟಲು ಪ್ರಯತ್ನಿಸಲಾಗಿದೆ. ೧೯೧೪ ರಲ್ಲಿ ಕಂಪನಿ ಆರಂಭವಾಯಿತು. ಆಗ ಅವರಿಗೆ ನೆರವಾದ ಗೆಳೆಯರು, ಮೊದಲಿಗೆ ಕಂಪನಿ ಸೇರಿದ ಕಲಾವಿದರು. ಕಷ್ಟ ನಷ್ಟ ಅನುಭವಿಸಿ ರಾಯರು ಕಂಪನಿ ನಡೆಸಿದ ಸಂದರ್ಭಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ವಾಮನರಾಯರಿಗೆ ನಾಟಕಶಾಲೆ ಎಂಬುದು ಅವರ ಬದುಕಿನ ಅವಿಭಾಜ್ಯ ಅಂಗವಾಗಿ ಪರಿಣಿಮಿಸಿತು. ಶಿರಹಟ್ಟಿ ಕಂಪನಿಯಿಂದ ಹೊರಬಂದಾಗ ಅವರು ಅನುಭವಿಸಿದ ಮಾನಸಿಕ ಯಾತನೆ, ನೋವುಗಳಿಂದ ಪಾರಾಗಲು ಅವರ ಎದುರಿಗೆ ಇದ್ದ ಒಂದೇ ಒಂದು ಮಾರ್ಗವೆಂದರೆ ನಾಟಕ ಕಂಪನಿಯನ್ನು ಕಟ್ಟುವದು. ರಂಗಭೂಮಿಯ ಬಗೆಗಿನ ಅವರ ಆಸಕ್ತಿ, ಆದರ್ಶ ಸಂಕಲ್ಪ, ಸಾಧನೆ, ಸಿದ್ಧಿ ಕುರಿತಾದ ವಿಷಯಗಳನ್ನು ಪ್ರಸ್ತುತ ಅಧ್ಯಾಯ ಒಳಗೊಂಡಿದೆ.

ವಿಶ್ವಗುಣಾದರ್ಶ ಕಂಪನಿಯ ಸಂಚಾರ-ನಾಡಿನ ಯಾವ ಯಾವ ಭಾಗದಲ್ಲಿ ಕಂಪನಿ ತಿರುಗಾಡಿತು? ತಿರುಗಾಟದಲ್ಲಿ ಎದುರಾದ ತೊಂದರೆಗಳು, ಪ್ರೇಕ್ಷಕರಿಂದ ದೊರೆತ ಪ್ರತಿಕ್ರಿಯೆಗಳು, ಅಭಿಮಾನಿಗಳಿಂದ ಸಿಕ್ಕ ಗೌರವ ಪ್ರಶಸ್ತಿಗಳು, ಕಂಪನಿಯ ಬದುಕಿನಲ್ಲಿ ಹೇಗೆ ಮಹತ್ವ ಪಡೆದವು ಎಂಬುದನ್ನು ವಿವರಿಸಲಾಗಿದೆ. ಮೈಸೂರು ಅರಸರು ಹಲವಾರು ಬಾರಿ ಈ ಕಂಪನಿಗೆ ಆಮಂತ್ರಣ ನೀಡಿ, ನಾಟಕಗಳನ್ನು ನೋಡಿ, ವಾಮನರಾಯರ ಸಂಗೀತ ಸಾಧನೆ ಕೇಳಿ ತುಂಬ ಖುಷಿ ಪಟ್ಟಿರುವರು, ಸಂತೋಷದಿಂದ ಕಂಪನಿಯ ಕಲಾವಿದರನ್ನು ಗೌರವಿಸಿ ಪ್ರಶಸ್ತಿಗಳನ್ನು ಕೊಟ್ಟಿರುವರು ಮೈಸೂರು,

ಬೆಂಗಳೂರು, ಹುಬ್ಬಳ್ಳಿ, ಧಾರವಾಡ, ಬಿಜಾಪೂರ, ಬಾಗಿಲುಕೋಟೆಯ ರಸಿಕರ ಪ್ರೋತ್ಸಾಹದಿಂದ ಕಂಪನಿ ಚೇತರಿಸಿಕೊಂಡ ಸಂಗತಿಗಳು ಗಮನಾರ್ಹವಾಗಿವೆ.

ಸಂಗೀತ ನಾಟಕಗಳ ಪ್ರಯೋಗದಲ್ಲಿ ವಿಶ್ವಗುಣಾದರ್ಶ ಕಂಪನಿಯ ವಿಶೇಷತೆಯೇನು? ರಂಗಸಂಗೀತದಲ್ಲಿ ವಾಮನರಾಯರ ಸಾಧನೆ ಏನು? ವೃತ್ತಿರಂಗಭೂಮಿಯ ಪರಂಪರೆ ಪ್ರಯೋಗಶೀಲತೆಯಲ್ಲಿ ಈ ಕಂಪನಿಯ ಸ್ಥಾನಮಾನಗಳೇನು ಎಂಬುದನ್ನೂ ಅಧ್ಯಯನ ಮಾಡಲಾಗಿದೆ. ಕಂಪನಿಯಲ್ಲಿದ್ದ ಕಲಾವಿದರು, ಕಲಾವಿದೆಯರು ಶಾಸ್ತ್ರೀಯ ಸಂಗೀತದಲ್ಲಿ ಸಾಧನೆ ಮಾಡಿದವರು. ಈ ಕಂಪನಿಯಲ್ಲಿದ್ದ ಕಲಾವಿದರನ್ನು ಸ್ಮರಿಸಿಕೊಂಡರೆ ಸಾಕು ಈ ಕಂಪನಿಯ ನಾಟಕಗಳ ಸಂಗೀತದ ಹಿರಿಮೆ ಏನಾಗಿತ್ತು ಎಂಬುದು ಗೊತ್ತಾಗುತ್ತದೆ. ಸ್ವತಃ ವಾಮನರಾಯರು ಗಾಯಕ ನಟರಾಗಿದ್ದರು. ಸಂಗೀತ ವಿದ್ವಾಂಸರಾಗಿದ್ದರು. ಹಿಂದುಸ್ತಾನಿ, ಕರ್ನಾಟಕಿ ಎರಡೂ ಪ್ರಕಾರಗಳಲ್ಲಿ ಅವರು ಸಾಧನೆ ಮಾಡಿ ರಂಗಸಂಗೀತಕ್ಕೆ ಮೆರಗು ತಂದಿದ್ದರು. ಕಂಪನಿಯಲ್ಲಿದ್ದ ಮಲ್ಲಿಕಾರ್ಜುನ ಮನಸೂರ, ಬಸವರಾಜ ಮನಸೂರ, ಗುರುರಾವ ದೇಶಪಾಂಡೆ, ಸಂಗನಬಸಪ್ಪ ಕುಕನೂರ, ಬೇವೂರ ಬಾದಶಹಾ ಮಾಸ್ತರ ಇವರೆಲ್ಲರೂ ಸಾಧನೆಯಿಂದ ಗವಾಯಿಗಳಾಗಿದ್ದವರು. ಮಲ್ಲಿಕಾರ್ಜುನ ಮನಸೂರರ ಪ್ರಾಥಮಿಕ ಸಂಗೀತ ಪಾಠಗಳು ಇದೇ ಕಂಪನಿಯಲ್ಲಿ ಪ್ರಾರಂಭವಾದವು. ಗುಳ್ಳೇದಗುಡ್ಡ ಗಂಗೂಬಾಯಿ ಶಾಸ್ತ್ರೀಯವಾಗಿ ಸಂಗೀತವನ್ನು ಅಭ್ಯಸಿಸಲು ವಾಮನರಾಯರೇ ಕಾರಣ ಇತ್ಯಾದಿ ಐತಿಹಾಸಿಕ ಸಂಗತಿಗಳು ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿಯ ಚರಿತ್ರೆಯನ್ನು ಹೇಗೆ ಶ್ರೀಮಂತಗೊಳಿಸಿವೆ? ಕಂಪನಿಯ ಚರಿತ್ರೆಯ ಜೊತೆಜೊತೆಗೆ, ಕಲಾವಿದರ ಚರಿತ್ರೆಯಲ್ಲಿಯೂ ಹೇಗೆ ಸಾಂಸ್ಕೃತಿಕ ಮಹತ್ವನ್ನು ಪಡೆದಿವೆ ಎಂಬುದನ್ನು ದಾಖಲೆಗಳ ಮೂಲಕ ವಿಶ್ಲೇಷಿಸಲಾಗಿದೆ.

ಸಂಗೀತದ ಜೊತೆಗೆ ಅಭಿನಯಕ್ಕೂ ಈ ಕಂಪನಿ ಹೆಸರಾಗಿತ್ತು. ಮರಾಠಿ ಕಂಪನಿಗಳ ನಟರ ಸಾಧನೆಗಳನ್ನು, ನಾಟಕಗಳ ಪ್ರದರ್ಶನ ವೈಖರಿಯನ್ನು ವಾಮನರಾಯರು ಅಳವಡಿಸಿಕೊಂಡಿದ್ದ ಬಗೆ, ನಾಟಕಗಳ ತಾಲೀಮಿನಲ್ಲಿ ಸ್ವತಃ ವಾಮನರಾಯರು ಅಭಿನಯ ಹೇಳಿಕೊಡುತ್ತಿದ್ದರು. ಸಂಗೀತವನ್ನು ನಾಟಕಕ್ಕೆ ಅಳವಡಿಸಿ ಅದು ಕಲಾವಿದರ ಮೂಲಕ ರಂಗದ ಮೇಲೆ ಹೇಗೆ ಅಭಿನಯಗೊಳ್ಳಬೇಕು ಎಂಬುದನ್ನು ತಿಳಿಸಿಕೊಡುತ್ತಿದ್ದರು. ಕಂಪನಿಯಲ್ಲಿ ಸರಿಯಾದ ಸಮಯಕ್ಕೆ ತಾಲೀಮು, ಸಂಗೀತ ಶಿಕ್ಷಣ, ಬೋರ್ಡಿಂಗ್‌ನಲ್ಲಿ ಶುಚಿಯಾದ, ರುಚಿಯಾದ ಊಟ, ತಾಲೀಮಿನ ನಂತರ ಕಲಾವಿದರ ಜೊತೆಗೆ ಹರಟೆ, ಕಲಾವಿದರಿಗೆ ನೀತಿಯ ಪಾಠ ಹೇಳುವುದು, ವಾಮನರಾಯರು ಬರಿ ಮಾತನಾಡದೆ ನಡೆದು ತೋರಿಸುತ್ತಿದ್ದ ರೀತಿ–ನಾಟಕ ಕಂಪನಿಗಳಿಗೆ ಮಾದರಿಯಾಗಿರುವಂತಹದ್ದು.

ಕಲಾವಿದರ ಆಗಮನ ನಿರ್ಗಮನದ ಪ್ರಸಂಗಗಳು ಕಂಪನಿ ಚರಿತ್ರೆಯಲ್ಲಿ ಬಹುಮುಖ್ಯ ಪಾತ್ರ ವಹಿಸಿವೆ. ಕಲಾವಿದರ ಸಲುವಾಗಿ ಕಂಪನಿ ಅಲ್ಲ ಕಂಪನಿ ಸಲುವಾಗಿ ಕಲಾವಿದರು ಇದು

ವಾಮನರಾಯರ ಧೋರಣೆಯಾಗಿತ್ತು. ಏನೋ ಮನಸ್ತಾಪ, ಸ್ವಾರ್ಥದಿಂದ ಹಿರಿಯ ಕಲಾವಿದರು ಬಿಟ್ಟು ಹೋಗುತ್ತಿದ್ದರು. ಕೆಲ ದಿನಗಳ ನಂತರ ಮತ್ತೆ ಬರುತ್ತಿದ್ದರು. ವಾಮನರಾಯರು ತಕರಾರು ಇಲ್ಲದೆ ಬಿಟ್ಟು ಹೋಗಿದ್ದ ಕಲಾವಿದರನ್ನು ಮತ್ತೆ ಕರೆದುಕೊಳ್ಳುತ್ತಿದ್ದರು. ವಾಮನರಾಯರಿಗೆ ಕಂಪನಿ ಕಂಪನಿ ದಿನಚರಿ, ಕಲಾವಿದರ ಸಾಧನೆ ನಾಟಕಗಳ ಗುಣಮಟ್ಟ, ಪ್ರೇಕ್ಷಕರ ಸಂತೃಪ್ತಿ ಮುಖ್ಯವಾಗಿದ್ದವು. ಎಂಬುದನ್ನು ಇಲ್ಲಿಯ ಅಧ್ಯಯನ ವಿವರಿಸುತ್ತದೆ. ಅನೇಕ ಜನ ಕಲಾವಿದರು ರಂಗಭೂಮಿಯ ಸಂಪತ್ತಾಗಿ ಬೆಳದರು. ಅವರು ವಿಶ್ವಗುಣಾದರ್ಶದಲ್ಲಿ ಸಿದ್ಧರಾದರು ಪ್ರಸಿದ್ಧರಾದರು. ಕಂಪನಿ ಎಂಬುದು ಬರಿ ನಾಟಕ ಆಡುವ ಸಂಸ್ಥೆಯಲ್ಲ ಅದು ಕಲಾವಿದರನ್ನು ರೂಪಿಸುವ ರಂಗಶಾಲೆ ಎಂಬುದನ್ನು ವಾಮನರಾಯರು ತೋರಿಸಿಕೊಟ್ಟರು ಕೊಣ್ಣೂರು ಕಂಪನಿ, ಶಿರಹಟ್ಟಿ ಕಂಪನಿಗಳಿಗಿಂತ ವಿಶ್ವಗುಣಾದರ್ಶ ಕಂಪನಿಯ ಶಿಸ್ತು ಹೇಗೆ ಭಿನ್ನವಾಗಿತ್ತು? ಎಂಬುದನ್ನು ಗಮನಿಸುವುದು ಅಧ್ಯಯನದ ಉದ್ದೇಶವಾಗಿದೆ. ಶಿರಹಟ್ಟಿ ಕಂಪನಿ ಹಲಗೇರಿ ಕಂಪನಿಗಳು, ರಂಗಸಜ್ಜಿಕೆ, ರಂಗ ಪರಿಕರಗಳಿಂದ ರಂಗವೈಭವಕ್ಕೆ ಹೆಸರಾಗಿದ್ದರೆ ವಿಶ್ವಗುಣಾದರ್ಶವು ಸಂಗೀತಕ್ಕೆ ಕಲಾವಿದರ ಚಾರಿತ್ರ್ಯಕ್ಕೆ ಹೆಸರಾಗಿದ್ದುದನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ. ಕಲಾವಿದರ ಚರಿತ್ರೆಯನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ.

**ವಾಮನರಾವ ಮಾಸ್ತರರ ನಾಟಕಗಳು:**

ಕಂಪನಿ ನಾಟಕ ಪರಂಪರೆಯಲ್ಲಿ ವಾಮನರಾವ ಮಾಸ್ತರರ ನಾಟಕಗಳ ವಿಶೇಷತೆಯೇನು? ಅವರ ರಚನೆಗಳ ಸ್ವರೂಪ, ಅನುವಾದ, ನಾಟಕಗಳ ಗುಣಮಟ್ಟ, ಬರೆದ ಒಟ್ಟು ನಾಟಕಗಳು, ನಾಟಕಗಳ ಕಥೆ, ನಾಟಕಗಳಲ್ಲಿಯ ಸಂಗೀತ ಇತ್ಯಾದಿ ವಿಷಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. 'ನಾಟಕ' ಎಂದರೆ ಸಾಹಿತ್ಯ ಕೃತಿಯೇ? ರಂಗ ಕೃತಿಯೇ? ಎಂಬುದರ ಚರ್ಚೆ, ಕಂಪನಿ ನಾಟಕದ ಸ್ವರೂಪ, ಜನಪ್ರಿಯ ಕಂಪನಿಯ ನಾಟಕಗಳು ಅದರಲ್ಲಿ ವಾಮನರಾವ ಮಾಸ್ತರರ ನಾಟಕಗಳ ವಿಶೇಷತೆ ಇತ್ಯಾದಿ ವಿವರಗಳ ಹಿನ್ನಲೆಯಲ್ಲಿ ಇವರ ಒಂದೊಂದು ನಾಟಕಗಳನ್ನು ಪರಿಚಯಿಸಲಾಗಿದೆ. ಭಕ್ತ ಪ್ರಹ್ಲಾದ, ಲಂಕಾದಹನ, ರಾವಣವಧೆ, ಪಾರ್ವತಿ ಸತ್ವ ಪರೀಕ್ಷಾ, ಸಂದೇಹ ಸಾಮ್ರಾಜ್ಯ, ಸಾಧ್ವಿ ಸಖೂಬಾಯಿ, ಎರಡನೇ ಬಾಜೀರಾವ ಪೇಶವೆ, ದ್ರೌಪದಿ ವಸ್ತ್ರಾಪಹರಣ, ಕೃಷ್ಣಾರ್ಜುನರ ಯುದ್ಧ, ವೀರ ಅಭಿಮನ್ಯು – ನಾಟಕಗಳ ಪರಿಚಯ ವಿವರವಾಗಿ ನೀಡಲಾಗಿದೆ. ಇದಕ್ಕೆ ಪೂರಕವಾಗಿ ಮರಾಠಿ ನಾಟಕಗಳನ್ನು ಅನುವಾದ ಮಾಡಿದ ರೀತಿ, ಅವೆರಡರ ತೌಲನಿಕ ನೋಟಗಳನ್ನು ಅಧ್ಯಯನಕ್ಕೆ ಯೋಜಿಸಲಾಗಿದೆ. ಮರಾಠಿಯಿಂದ ವಾಮನರಾಯರು ಅನುವಾದಕ್ಕೆ ಆಯ್ದುಕೊಂಡ ನಾಟಕಗಳು ತುಂಬ ವಿಶೇಷವಾಗಿವೆ. ಒಬ್ಬನೆ ನಾಟಕಕಾರನ ಕೃತಿಗಳನ್ನು ಅವರು ಆಯ್ದುಕೊಂಡಿಲ್ಲ. ಕಥೆಯ ದೃಷ್ಟಿಯಿಂದಲೂ ಅವು ಭಿನ್ನಭಿನ್ನವಾಗಿವೆ. ಸಂದೇಹ ಸಾಮ್ರಾಜ್ಯ ಸಾಮಾಜಿಕ ಕಥೆಯಾದರೆ, ಎರಡನೇ ಬಾಜೀರಾವ ಐತಿಹಾಸಿಕ, ಪಾರ್ವತೀ ಸತ್ವ ಪರೀಕ್ಷಾ ಪೌರಾಣಿಕ, ಸಾಧ್ವಿ ಸಖೂಬಾಯಿ, ಭಕ್ತ ಪುಂಡಲೀಕ ಭಕ್ತಿಪ್ರಧಾನ, ವೀರ

ಅಭಿಮನ್ಯು ಮಹಾಭಾರತದ ಕಥೆ, ಕೃಷ್ಣಾರ್ಜುನರ ಯುದ್ಧವು ಕೀರ್ತನೆಯ ಕಥೆ ಹೀಗೆ ವಾಮನರಾಯರ ನಾಟಕಗಳು ವೈವಿಧ್ಯಮಯ ವಿಷಯಗಳನ್ನು ಒಳಗೊಂಡಿರುವುದರ ಔಚಿತ್ಯವನ್ನು ಗುರುತಿಸಲಾಗಿದೆ.

ಇದೇ ಅಧ್ಯಾಯಕ್ಕೆ ಪೂರಕವಾಗಿ ನಿಲ್ಲುವ ವಾಮನರಾಯರ ನಾಟಕಗಳಲ್ಲಿಯ ಸಂಗೀತ ಪ್ರಾಧಾನ್ಯತೆಯನ್ನು ವಿಶೇಷವಾಗಿ ಅಧ್ಯಯನ ಮಾಡಲಾಗಿದೆ. ವಾಮನರಾಯರು ಮರಾಠಿ ರಂಗ ಸಂಗೀತವನ್ನು ಕನ್ನಡಕ್ಕೆ ಅದೇ ಶೈಲಿ, ಅದೇ ಸತ್ವದಿಂದ, ಅಷ್ಟೇ ನಾದ ಮಾಧುರ್ಯದಿಂದ ಅನುವಾದಿಸಿದರು. ಕನ್ನಡ ರಂಗ ಸಂಗೀತವನ್ನು ಶ್ರೀಮಂತಗೊಳಿಸಿದರು. ಅವರ ನಾಟಕಗಳಲ್ಲಿಯ ರಂಗಗೀತೆಗಳ ಸಾಹಿತ್ಯ, ರಂಗಗೀತೆಗಳ ಸಂಗೀತ, ಸ್ವರಗಳು ಆರೋಹಣ, ಅವರೋಹಣ, ಬಳಸಿದ ರಾಗಗಳು, ರಂಗಗೀತೆಗಳಿಗೆ ಸ್ವರ ಪ್ರಸ್ತಾರ ಹಾಕುವ ಮೂಲಕ ಅವುಗಳ ವಿಶೇಷತೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ವಾಮನ ರಾಯರ ನಾಟಕಗಳಲ್ಲಿಯ ಸಂಗೀತದ ಬಗೆಗಿನ ಕಲಾವಿದರ ಪ್ರತಿಕ್ರಿಯೆಗಳೇನು? ಸಂಗೀತ ವಿದ್ವಾಂಸರ ಅಭಿಪ್ರಾಯಗಳೇನು? ಎಂಬುದನ್ನು ಐದನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಸಮಾರೋಪ:**

ಕರ್ನಾಟಕ ವೃತ್ತಿರಂಗಭೂಮಿಯ ಪರಂಪರೆಯಲ್ಲಿ ವಾಮನರಾವ ಮಾಸ್ತರರ ನಾಟಕ ಕಂಪನಿಯ ಸಾಧನೆ, ವಾಮನರಾವ ಮಾಸ್ತರರ ನಾಟಕಗಳ ಪ್ರಸಿದ್ಧಿ, ಅವುಗಳ ಕುರಿತು ನಡೆಸಿದ ಅಧ್ಯಯನದ ಫಲಿತಗಳನ್ನು ಈ ಅಧ್ಯಾಯ ವಿವರಿಸುವುದು. ವೃತ್ತಿರಂಗಭೂಮಿ ಅದೇ ತಾನೆ ಸಮೃದ್ಧವಾಗಿ ಬೆಳೆಯಬೇಕೆಂದು ಹಂಬಲಿಸುತ್ತಿದ್ದ ಕಾಲದಲ್ಲಿಯೇ ವಾಮನರಾಯರು ರಂಗಭೂಮಿಯನ್ನು ಪ್ರವೇಶಿಸಿದರು. ಆ ಕಾಲದಲ್ಲಿ ಮಾದರಿಯಾಗಿ ನಿಂತಿದ್ದ ಮರಾಠಿ ರಂಗಭೂಮಿಯ ಜನಪ್ರಿಯತೆಯ ರಹಸ್ಯವನ್ನು ಅರಿತು, ಅದೇ ದಾರಿಯಲ್ಲಿ ನಡೆದು ಕನ್ನಡ ರಂಗಭೂಮಿಗೆ ಸತ್ವವನ್ನು ತುಂಬಿದವರು ವಾಮನರಾವ ಮಾಸ್ತರರು. ಅವರ ಪ್ರತಿಭೆ, ಪರಿಶ್ರಮ, ರಂಗಭೂಮಿಗೆ ಸಂಬಂಧಿಸಿದ ಆದರ್ಶ ಗುಣಗಳು ಅವರನ್ನು ದೊಡ್ಡ ಕಲಾವಿದನನ್ನಾಗಿ ಬೆಳೆಸಿದವು.

ವಾಮನರಾವ ಮಾಸ್ತರರು ಬಹುಮುಖ ವ್ಯಕ್ತಿತ್ವವುಳ್ಳವರು, ನಟ, ನಾಟಕಕಾರ, ನಾಟಕ ಕಂಪನಿಯ ಒಡೆಯ, ಸಂಗೀತ ಸಂಯೋಜಕ, ಸಂಗೀತ ನಿರ್ದೇಶಕ ಇವೆಲ್ಲ ರಂಗಭೂಮಿಗೆ ಸಂಬಂಧಿಸಿದ ಮುಖಗಳು. ಜೊತೆಗೆ ಒಳ್ಳೆಯ ಗೆಳೆಯರಾಗಿ, ಕುಟುಂಬವತ್ಸಲರಾಗಿ. ಸಮಾಜ ಸೇವಕರಾಗಿ, ಆದರ್ಶ ವ್ಯಕ್ತಿಯಾಗಿ ಬದುಕಿದವರು. ಅವರ ವ್ಯಕ್ತಿತ್ವದಿಂದ ರಂಗಭೂಮಿ, ರಂಗಭೂಮಿಯಿಂದ ಅವರ ವ್ಯಕ್ತಿತ್ವ ಹೀಗೆ ಪರಸ್ಪರ ಇಬ್ಬರೂ ಬೆಳೆದು ಬೆಳಕು ಕಂಡ ಸಮೀಕ್ಷೆ ಸಮಾರೋಪದಲ್ಲಿದೆ.

**ಅಧ್ಯಯನದ ಸ್ವರೂಪ:**

ಕರ್ನಾಟಕದ ಸಂದರ್ಭದಲ್ಲಿ ರಂಗಭೂಮಿ ಕುರಿತ ಅಧ್ಯಯನಗಳೇ ವಿರಳ. ಅದರಲ್ಲಿಯೂ ಉಪೇಕ್ಷೆಗೆ ಗುರಿಯಾಗಿದ್ದ ವೃತ್ತಿರಂಗಭೂಮಿಯ ಕುರಿತು ಅಧ್ಯಯನ ಮಾಡುವವರು ಯಾರು? ಇಂಥ ಕೊರತೆಯಲ್ಲಿ ವೃತ್ತಿರಂಗಭೂಮಿಯ ಅಧ್ಯಯನದತ್ತ ಗಮನ ಸೆಳೆದವರು ಡಾ॥ ಎಚ್. ಕೆ. ರಂಗನಾಥ ಅವರ 'ಕರ್ನಾಟಕ ರಂಗಭೂಮಿ' ಸಂಶೋಧನ ಕೃತಿಯಲ್ಲಿ 'ಕರ್ನಾಟಕ ವೃತ್ತಿರಂಗಭೂಮಿ' ಎಂಬುದು ಒಂದು ಪ್ರತ್ಯೇಕ ಹಾಗೂ ವಿವರವಾದ ಅಧ್ಯಾಯವಾಗಿ ಬೆಳೆದಿದೆ ೧೯೭೦ ರ ದಶಕದಿಂದ ಪ್ರಾರಂಭವಾದ ಈ ತರಹದ ಅಧ್ಯಯನವು ಹಲವಾರು ಮಹತ್ವದ ಕೃತಿಗಳನ್ನು ಪ್ರಕಟಿಸಿತು. ಡಾ॥ ಸಿಂಧುವಳ್ಳಿ ಅನಂತಮೂರ್ತಿ ಅವರ 'ಗುಬ್ಬಿ ಕಂಪನಿ' ಡಾ॥ ಎಚ್. ಕೆ. ರಾಮನಾಥ ಅವರ 'ಕನ್ನಡ ರಂಗಭೂಮಿ ವಿಕಾಸ', ಡಾ॥ ಬಸವರಾಜ ಜಗಜಂಪಿ ಅವರ 'ಗರುಡ ಸದಾಶಿವರಾಯರು' ಡಾ॥ ರಾಮಕೃಷ್ಣ ಮರಾಠೆ ಅವರ 'ಉತ್ತರ ಕರ್ನಾಟಕ ವೃತ್ತಿರಂಗಭೂಮಿ', ಡಾ॥ ಗರುಡ ಪ್ರಕಾಶ ಅವರ 'ವೃತ್ತಿರಂಗ ಸ್ವರೂಪ', ಡಾ॥ ಎಸ್. ಎಫ್. ಜಕಬಾಳ ಅವರ ಕಲಾವೈಭವ ನಾಟ್ಯ ಸಂಘ', ಡಾ॥ ದೇವದಾಸ ಕಳಸದ ಅವರ 'ವೃತ್ತಿರಂಗ ಸಂಸ್ಕೃತಿ' ಮುಂತಾದವು. ಇವೆಲ್ಲ ಚಾರಿತ್ರಿಕ ನೆಲೆಯ ಅಧ್ಯಯನಗಳಾಗಿವೆ.

ಪ್ರಾದೇಶಿಕವಾಗಿ ವೃತ್ತಿರಂಗಭೂಮಿಯನ್ನು ಪರಿಚಯಿಸುವ, ನಾಟಕ ಇತಿಹಾಸವನ್ನು ದಾಖಲಿಸುವ ಮತ್ತು ಕಂಪನಿ ನಾಟಕ ಸಾಹಿತ್ಯವನ್ನು ಅವಲೋಕಿಸುವ ಮಾದರಿಗಳಾಗಿ ಈ ಅಧ್ಯಯನಗಳು ಗಮನಸೆಳೆಯುತ್ತವೆ. ಗುಬ್ಬಿ ವೀರಣ್ಣ, ಗರುಡ ಸದಾಶಿವರಾಯರು, ಏಣಗಿ ಬಾಳಪ್ಪನವರ ಸಾಧನೆಗಳು ಒಂದೊಂದು ಮಹಾಪ್ರಬಂಧಕ್ಕೆ ಅಸ್ತುವಾಗಿರುವುದನ್ನು ನೋಡಿದಾಗ ವೃತ್ತಿರಂಗಭೂಮಿಯ ಅಧ್ಯಯನ ಕ್ಷೇತ್ರ ಎಷ್ಟೊಂದು ವ್ಯಾಪಕವಾಗಿದೆ ಎಂಬುದು ತಿಳಿಯುತ್ತದೆ. ಇದುವರೆಗೆ ನಡೆದ ಅಧ್ಯಯನಗಳಲ್ಲಿ ವಾಮನರಾವ ಮಾಸ್ತರರ ಸಾಧನೆಗಳು, ವೈಶಿಷ್ಟ್ಯಗಳು ತಪ್ಪದೆ ಉಲ್ಲೇಖವಾಗುತ್ತವೆ. ಆದರೆ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಇದನ್ನು ಗಮನಿಸಿ ನಾನು ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಗೊಂಡಿರುವೆ.

ವೃತ್ತಿರಂಗಭೂಮಿ ಅಧ್ಯಯನಕ್ಕೆ ಪ್ರಕಟಿತ ಆಕರ ಸಾಮಗ್ರಿ ತುಂಬಾ ಕಡಿಮೆ. ಈ ರಂಗಭೂಮಿ ಅಧ್ಯಯನವು ಕಲಾವಿದರ ಸಂದರ್ಶನ, ಅವರು ನೀಡಿದ ಮೌಖಿಕ ವಿವರಗಳು, ರಂಗಕಲೆಯಲ್ಲಿ ಆಸಕ್ತಿಯುಳ್ಳ ಸಾಹಿತಿಗಳು ಬರೆದ ಬಿಡಿ ಬಿಡಿ ಲೇಖನಗಳನ್ನು ಆಧರಿಸಿಯೇ ನಡೆಯಬೇಕಾದುದು. ಇದುವರೆಗಿನ ಅಧ್ಯಯನಗಳಲ್ಲಿಯ ಉಲ್ಲೇಖಗಳನ್ನು ಸಂಗ್ರಹಿಸಿ, ಅವುಗಳಿಗೆ ಮೌಖಿಕವಿವರಗಳನ್ನು ಕೂಡಿಸಿ ವಾಮನರಾವ ಮಾಸ್ತರರ ನಾಟಕ ಮಂಡಳಿ ಮತ್ತು ನಾಟಕಗಳ ಅಧ್ಯಯನ ನಡೆಸಲಾಗಿದೆ. ಮರಾಠಿ ನಾಟಕಗಳು ಮತ್ತು ರಂಗಸಂಗೀತದ ಪ್ರಭಾವದಲ್ಲಿ ವಾಮನರಾಯರ ರಂಗಕೃತಿಗಳು ಅರಳಿದ್ದರಿಂದ ಮರಾಠಿಯ ಜೊತೆಗಿಟ್ಟು ವಾಮನರಾಯರ ನಾಟಕಗಳನ್ನು ತೌಲನಿಕವಾಗಿಯೂ

ಪರಿಶೀಲಿಸಲಾಗಿದೆ. ಒಟ್ಟಾರೆ ಕರ್ನಾಟಕ ರಂಗಭೂಮಿ ಪರಂಪರೆಯಲ್ಲಿ ವಾಮನರಾವ ಮಾಸ್ತರರ ಸಾಧನೆಯನ್ನು ಚಾರಿತ್ರಿಕವಾಗಿ ಮತ್ತು ತೌಲನಿಕವಾಗಿ ವಿಶ್ಲೇಷಿಸುವ ಪ್ರಯತ್ನ ಇದಾಗಿದೆ.

ಕರ್ನಾಟಕ ವೃತ್ತಿರಂಗಭೂಮಿಯ ವೈಭವದ ಇತಿಹಾಸಕ್ಕೆ ವಿಶಿಷ್ಟವಾದ ರೀತಿಯಲ್ಲಿ ಸೇವೆ ಸಲ್ಲಿಸಿದವರು ವಾಮನರಾವ ಮಾಸ್ತರ. ಈ ಅಪರೂಪದ ರಂಗಸಾಧಕನ ಜೀವನ, ನಾಟಕ, ನಾಟಕ ಕಂಪನಿಯ ಕಥನವನ್ನು ವಿಶೇಷ ಅಧ್ಯಯನಕ್ಕೆ ಒಳಪಡಿಸಬೇಕೆಂದು ಹೊರಟಾಗ ದಾಖಲೆಗಳ ಕೊರತೆ, ದೊಡ್ಡ ಸಮಸ್ಯೆಯಾಗಿ ಪರಿಣಿಮಿಸಿತು. ವಾಮನರಾವ ಮಾಸ್ತರರ ಮೊಮ್ಮಕ್ಕಳು ಧಾರವಾಡದಲ್ಲಿಯೇ ಇದ್ದಾರೆ ಅವರನ್ನು ಸಂದರ್ಶಿಸಿದಾಗ ಅವರ ಬಳಿ ಯಾವುದೇ ಸಾಮಗ್ರಿ ಲಭ್ಯವಾಗಲಿಲ್ಲ. ಎಲ್ಲವೂ ಮಸುಕು ಮಸುಕು ನೆನಪುಗಳು. ಬೇರೆ ಕಡೆ ಓದು, ಬೇರೆ ಬೇರೆ ಕಡೆ ನೌಕರಿ ಮಾಡಿದವರು ಹೀಗಾಗಿ ಅಜ್ಜನ ಇತಿಹಾಸವಾಗಲಿ, ಅವರ ಬಗೆಗಿನ ದಾಖಲೆಗಳಾಗಲಿ ಸಂಗ್ರಹಿಸಿ ಇಡುವ ಸಂದರ್ಭ ಒದಗಲಿಲ್ಲವೆಂದು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದರು. ಸಾಮಗ್ರಿ ಬಗ್ಗೆ ನಿರಾಶೆಯೆ ಆಯಿತು. ಸಿಕ್ಕ ಕೆಲವು ನಾಟಕಗಳೇ ಆಧಾರವಾಗಿದ್ದವು. ಇಂತಹ ಸಂದರ್ಭದಲ್ಲಿ ಎನ್ಕೆ ಕುಲಕರ್ಣಿಯವರು ಮತ್ತು ನಾಡಿಗೇರ ಕೃಷ್ಣರಾಯರು ವಾಮನರಾವ ಮಾಸ್ತರರನ್ನು ಕುರಿತು ಬರೆದ ಕಿರು ಹೊತ್ತಿಗೆಗಳೇ ಮುಖ್ಯ ಆಕರಗಳಾದವು. ಇವುಗಳ ಜೊತೆಗೆ ರಂಗಭೂಮಿ ಕುರಿತು ನಡೆದ ಅಧ್ಯಯನಗಳು ಅಲ್ಲಲ್ಲಿ ಸಾಂದರ್ಭಿಕವಾಗಿ ಪ್ರಸ್ತಾಪಗಳನ್ನು ಹೆಕ್ಕಿ, ಒಂದೆಡೆ ಜೋಡಿಸಿ ವಾಮನರಾಯರ ಜೀವನ ಹಾಗೂ ರಂಗಭೂಮಿ ಕುರಿತ ಅವರ ಸಾಧನೆಯ ಕಥನವನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ವಿಶೇಷವೆಂದರೆ, ಅವರ ನಾಟಕಗಳು ಪ್ರಕಟವಾಗಿರುವುದರಿಂದ ಅವುಗಳ ಕಥೆ ಅನುವಾದ, ರಂಗ ಸಂಗೀತದ ಅವರ ಸಾಧನೆ ವಿವರವಾಗಿ ವಿಶ್ಲೇಷಿಸಲು ಸಾಧ್ಯವಾಯಿತು. ನೆರೆಯ ಮರಾಠಿ ರಂಗಭೂಮಿಯ ಚರಿತ್ರೆ ಅತ್ಯಂತ ಶ್ರೀಮಂತವಾಗಿದೆ. ದಾಖಲೆಗಳಿಂದ ಸಮೃದ್ಧವಾಗಿದೆ. ವಿಷ್ಣುಪಂತ ಭಾವೆ ಅವರ ಕಾಲದಿಂದ ಇತ್ತೀಚಿನವರೆಗಿನ ರಂಗಭೂಮಿಯ ಸಂಗತಿಗಳನ್ನು ಅಲ್ಲಿ ವ್ಯವಸ್ಥಿತವಾಗಿ ದಾಖಲಿಸಿರುತ್ತಾರೆ. ಒಂದು ನಾಟಕ ಕಂಪನಿಯು ಹೊಸ ನಾಟಕದ ಪ್ರಯೋಗವನ್ನು ಎಂದು ಆರಂಭಿಸಿತು? ಎಲ್ಲಿ ಆರಂಭಿಸಿತು? ಅದರಲ್ಲಿ ಯಾವ ಯಾವ ಕಲಾವಿದರು ಭಾಗವಹಿಸಿದ್ದರು? ಸಂಗೀತ ಸಂಯೋಜಿಸಿದವರು ಯಾರು? ಪ್ರೇಕ್ಷಕರ ಪ್ರತಿಕ್ರಿಯೆ ಹೇಗಿತ್ತು ಇತ್ಯಾದಿ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನು ಮರಾಠಿ ರಂಗಭೂಮಿಯ ಚರಿತ್ರೆ ನಿರೂಪಿಸುತ್ತದೆ. ಇದಕ್ಕೆ ಹೋಲಿಸಿದಾಗ ನಮ್ಮದು ಅತ್ಯಂತ ದುರ್ಬಲ ಚರಿತ್ರೆ ಎನಿಸುತ್ತದೆ. ಅಧ್ಯಯನದ ಆಸಕ್ತಿಯಿಂದ ಒಂದೊಂದು ಕಂಪನಿಯ ಚರಿತ್ರೆ ಕಟ್ಟಬೇಕೆಂದು ಹೊರಟವರಿಗೆ ನಿರಾಶೆಯೇ ಎದುರಾಗುತ್ತದೆ. ಈ ಹಿನ್ನೆಲೆಯಲ್ಲಿ ನನ್ನ ಪ್ರಯತ್ನಕ್ಕೆ ಸಿಕ್ಕ ಸಾಮಗ್ರಿಯನ್ನೇ ದೊಡ್ಡದು ಮಾಡಿ ಅಧ್ಯಯನ ನಡೆಸಿರುವೆ. ಸಾಮಗ್ರಿಯ ಇತಿಮಿತಿಗಳೇ ಅಧ್ಯಯನದ ಮಿತಿಗಳಾಗಿರುವುದನ್ನು ನಮ್ರವಾಗಿ ಒಪ್ಪಿಕೊಳ್ಳುವೆ.

# ಅಧ್ಯಾಯ – ಎರಡು

# ಕರ್ನಾಟಕ ವೃತ್ತಿರಂಗಭೂಮಿ: ಚಾರಿತ್ರಿಕ ಹಿನ್ನೆಲೆ

ಭಾರತದಲ್ಲಿ ವೃತ್ತಿರಂಗಭೂಮಿ

ಅ) ಬಂಗಾಳದಲ್ಲಿ ಹೊಸ ನಾಟಕಗಳು

ಆ) ಪಾರಸಿ ನಾಟಕ ಕಂಪನಿಗಳು

ಇ) ಮರಾಠಿ ನಾಟಕ ಕಂಪನಿಗಳು

ಈ) ಭಾವೆ ಪೂರ್ವದ ಕನ್ನಡ–ಮರಾಠಿ ರಂಗಸಂಬಂಧ

ಉ) ಕರ್ನಾಟಕದಲ್ಲಿ ಕಂಪನಿ ನಾಟಕ ಚಟುವಟಿಕೆಗಳು

ಊ) ಮೈಸೂರು ಪ್ರದೇಶದಲ್ಲಿ ನಾಟಕ ಚಟುವಟಿಕೆಗಳು

## ಅಧ್ಯಾಯ – ಎರಡು

## ಕರ್ನಾಟಕ ವೃತ್ತಿರಂಗಭೂಮಿ : ಚಾರಿತ್ರಿಕ ಹಿನ್ನೆಲೆ

**ಪೀಠಿಕೆ :**

ವೃತ್ತಿರಂಗಭೂಮಿ ಎಂಬುದು ಆಧುನಿಕ ರಂಗಭೂಮಿಯ ಕೊಡುಗೆ. ಹತ್ತೊಂಭತ್ತನೆಯ ಶತಮಾನದ ಕೊನೆಯಲ್ಲಿ ಕಾಣಿಸಿಕೊಂಡು ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಇದು ಗಟ್ಟಿಯಾಗಿ ನೆಲೆಯೂರಿತು. ಭಾರತೀಯ ಸಮಾಜ, ಸಂಸ್ಕೃತಿಯಲ್ಲಿ ರಂಗಕಲೆಯೆಂಬುದು ವೃತ್ತಿಯಾಗಿರಲಿಲ್ಲ; ಕುಲಕಸುಬಾಗಿತ್ತು. ಕೆಲವು ನಿರ್ದಿಷ್ಟ ಸಮುದಾಯಗಳಲ್ಲಿ–'ಬಹುರೂಪಿ' ಕಲೆಯಾಗಿ ಅಸ್ತಿತ್ವದಲ್ಲಿತ್ತು. ಈ ಕಲೆಯು ವೃತ್ತಿಯ ಶಿಸ್ತನ್ನು ಮೈಗೂಡಿಸಿಕೊಂಡದ್ದು ಪಾಶ್ಚಿಮಾತ್ಯ ರಂಗಭೂಮಿಯ ಪ್ರಭಾವ ಪ್ರೇರಣೆಯಿಂದ. ಭಾರತದಲ್ಲಿ ನೆಲೆ ನಿಂತ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿಗಳ ಮನರಂಜನೆಗಾಗಿ ಶೇಕ್ಸಪಿಯರ್ ನಾಟಕ ತಂಡಗಳು ಇಂಗ್ಲೆಂಡಿನಿಂದ ಇಲ್ಲಿಗೆ ಆಗಮಿಸಿದವು. ಅವುಗಳನ್ನು ನೋಡಿ ಬಂಗಾಳಿ ಜನ, ಮುಂಬಯಿಯಲ್ಲಿದ್ದ ಪಾರಸಿ ಜನ ತಮ್ಮ ತಮ್ಮ ರೀತಿಯಲ್ಲಿ ಪ್ರತಿಕ್ರಿಯೆ ನೀಡಲು ಪ್ರಾರಂಭಿಸಿದಾಗ ವೃತ್ತಿರಂಗಭೂಮಿಯ ಚಟುವಟಿಕೆಗಳು ಕಾಣಿಸಿಕೊಂಡವು. ಅಲ್ಲಿಂದ ಪಾರಸಿ ರಂಗಕರ್ಮಿಗಳನ್ನು ಅನುಸರಿಸಿ ಮರಾಠಿಗರು, ಕನ್ನಡಿಗರು ವೃತ್ತಿರಂಗಭೂಮಿಯನ್ನು ತಮ್ಮ ತಮ್ಮ ಭಾಷೆಯಲ್ಲಿ ಕಟ್ಟಲು ಮುಂದಾದರು. ಅದರ ಚರಿತ್ರೆಯು 'ನವೋದಯ'ದ ರೋಮಾಂಚನಕಾರಿ ಅಧ್ಯಾಯ. ಇದಕ್ಕೆ ಹಿನ್ನಲೆಯಾಗಿ ವೃತ್ತಿರಂಗಭೂಮಿ ಪೂರ್ವದ ನಾಟಕ–ರಂಗಭೂಮಿ ಕುರಿತ ವಿದ್ವಾಂಸರ ವಿಚಾರಗಳನ್ನು ಅವಲೋಕಿಸೋಣ.

"ಕವಿ ಕಲ್ಪನೆಯ ಸೃಷ್ಟಿಯಾದ 'ಶ್ರವ್ಯಕಾವ್ಯಕ್ಕಿಂತ' ಕಣ್ಣು ತುಂಬುವಂತೆ ಚಿತ್ರಗಳನ್ನು ಕಟ್ಟುವ 'ದೃಶ್ಯ ಕಾವ್ಯ' ವಾದ ನಾಟಕ ಒಂದೇ ಕಾಲಕ್ಕೆ ಭಿನ್ನರುಚಿಗಳ ಜನರನ್ನು ಆಕರ್ಷಿಸಲು ಹೆಚ್ಚು ಶಕ್ತವಾಗಿದೆ. "ಕಾವ್ಯದ ಮಾತುಗಳಿಗೆ ಅಭಿನಯದಿಂದ ಮೂರ್ತ ಸ್ವರೂಪವನ್ನು ಕೊಟ್ಟು ಸಂಗೀತ, ನೃತ್ಯ, ಚಿತ್ರಕಲೆಗಳಿಂದ ರಸತುಂಬಿ 'ಜೀವನ ಚಿತ್ರ' ವನ್ನು ಕಣ್ಣ ಮುಂದೆ ಕಟ್ಟಿ ನಿಲ್ಲಿಸುವ ನಾಟಕ ಸರ್ವರಂಜನೆಯ ಧ್ಯೇಯವನ್ನು ಸಾಧಿಸಿದೆ. ನವ್ಯವೂ, ಸತ್ಯವೂ, ಸಂಪೂರ್ಣವೂ ಆದ ಅನುಭವವನ್ನು ಉಣಿಸುವುದೇ 'ದೃಶ್ಯ ಕಾವ್ಯವಾದ ನಾಟಕದ ಗುರಿ."[1] ಇಂತಹ ಅನುಭವ ಸುಜ್ಞಾನಿಗಳಿಗೂ, ಅಜ್ಞಾನಿಗಳಿಗೂ ಒಮ್ಮೆಲೆ ಆಗಬೇಕು. ಪಂಡಿತರನ್ನು, ಪಾಮರರನ್ನು, ಬೆಳೆದವರನ್ನು, ಎಳೆಯರನ್ನು, ಪುರುಷರನ್ನು, ಮಹಿಳೆಯರನ್ನು ಎಲ್ಲ ರೀತಿಯ ಜನರನ್ನು ಸೆರೆಹಿಡಿಯಲು ಸಮರ್ಥವಾಗಿರುವ ಸಾಧನವೆಂದರೆ, ಈ ನಾಟಕವೇ ಎಂದು ಹೇಳಿ ಕಾಳಿದಾಸ ಕವಿಯು ಸಾಹಿತ್ಯ ಕ್ಷೇತ್ರದಲ್ಲಿ ಅದಕ್ಕೆ ಪ್ರಮುಖ ಪಟ್ಟ ಕಟ್ಟಿದನು.

ನಾಟಕದ ಪ್ರಾಚೀನತೆ ತಿಳಿದುಕೊಳ್ಳಲು ನಾಟ್ಯಕಲೆಯನ್ನು ವಿವರಿಸುವ ಭರತನ ನಾಟ್ಯಶಾಸ್ತ್ರವೊಂದೇ ದೊರೆತಿರುವ ಪ್ರಮಾಣ ಗ್ರಂಥವಾಗಿದೆ. ಇದರಲ್ಲಿ "ನಾಟ್ಯಭಿನ್ನರುಚೇರ್ಜನಸ್ಯ ಬಹುಧಾಪ್ಯಕಂ ಸಮಾರಾಧನಂ" ಎಂಬ ನುಡಿ ನಾಟಕವನ್ನು ಪ್ರತಿನಿಧಿಸುತ್ತದೆ. "ಕಾವ್ಯೇಷು ನಾಟಕಂ ರಮ್ಯಂ" ಎಂಬುದು ಪ್ರಾಚೀನ ಸಂಸ್ಕೃತಿ ಲಾಕ್ಷಣಿಕರು ನಾಟಕಕ್ಕೆ ಕೊಟ್ಟಿರುವ ಮನ್ನಣೆಯಾಗಿದೆ. ಸಂಸ್ಕೃತ ಸಾಹಿತ್ಯದಲ್ಲಿ ನಾಟಕಕ್ಕೆ ಶ್ರೇಷ್ಠವಾದ ಸ್ಥಾನವಿದೆ. ಸಾಹಿತ್ಯ ಸೋಪಾನದಲ್ಲಿ ಅದು ಎಲ್ಲಕ್ಕಿಂತ ಮೇಲಿನ ಮೆಟ್ಟಲು ಎಂದು ನಮ್ಮವರು ಭಾವಿಸಿದ್ದಾರೆ. ಏಕೆಂದರೆ ನಾಟಕದಲ್ಲಿ ಅನೇಕ ಲಲಿತಕಲೆಗಳು ಸಮಂಜಸವಾಗಿ ಸೇರಿ ಒಂದು ಅಪೂರ್ವ ರಮಣೀಯತೆಯನ್ನು ತರುತ್ತವೆ. ಚರಿತ್ರೆಯ ದೃಷ್ಟಿಯಿಂದ ನೋಡಿದರೂ ನಾಟಕವು ಸಾಹಿತ್ಯದ ಗೊಂಚಲಿನಲ್ಲಿ ಅರಳಿದ ದೊಡ್ಡ ಕುಸುಮವೆಂದು ಗೊತ್ತಾಗುತ್ತದೆ"[೨] ಭರತನಿಗಿಂತಲೂ ಪೂರ್ವದಲ್ಲಿ ನಾಟಕದ ಅಸ್ತಿತ್ವ ಗುರುತಿಸಲು ವಿದ್ವಾಂಸರು ತುಂಬ ಪ್ರಯತ್ನ ಮಾಡಿದ್ದಾರೆ.

ನಾಟಕ ಕಲೆಯ ಬಗೆಗೆ ಭರತಮುನಿಯು ರಚಿಸಿದನೆನ್ನುವ 'ನಾಟ್ಯಶಾಸ್ತ್ರ' ವೆಂಬ ಮೂಲ ಗ್ರಂಥವು ಐದನೇ ವೇದವೆಂದೇ ಪರಿಗಣಿತವಾಗಿದೆ. ಈ 'ನಾಟ್ಯವೇದ'ವು ಉಳಿದ ನಾಲ್ಕು ವೇದಗಳ ಉತ್ತಮಾಂಶಗಳ ಮೇಲೆ, ಎಂದರೆ ಋಗ್ವೇದದಿಂದ ನೃತ್ಯ, ಸಾಮವೇದದಿಂದ ಗಾನ, ಯಜುರ್ವೇದದಿಂದ ಅಭಿನಯ ಹಾಗೂ ಅಥರ್ವಣವೇದದ ಅಂಶವಾದ ಭಾವಾಭಿವ್ಯಕ್ತಿ ಇವುಗಳ ನೆಲೆಗಟ್ಟಿನ ಮೇಲೆ ಭಗವಂತನು ಕರುಣೆಯಿಂದ ಕಟ್ಟಿದ 'ಸಮೂಹಶಾಸ್ತ್ರ'ವೆಂದು ಪ್ರಾಚೀನರ ನಂಬಿಕೆ.

ನಾಟಕ ಕಲೆಯನ್ನು ದೇವರೇ ದಾನ ಮಾಡಿದನೆಂಬ ನಂಬಿಕೆಯಿಂದಾಗಿ, ಅದರ ಹುಟ್ಟಿನ ಬಗೆಗೆ ನಿಶ್ಚಿತವಾಗಿ ಹೇಳುವುದು ಕಷ್ಟ. ಆದರೂ ಮೂಲದಲ್ಲಿ ನೃತ್ಯ ಹಾಗೂ ಗೀತಗಳು ನಾಟಕದ ಪ್ರಧಾನ ಅಂಶಗಳಾಗಿದ್ದವೆಂದು ನಂಬಲಾಗಿದೆ. ನಂತರ ಭಾವಾಭಿನಯವನ್ನು ಆಡು ಮಾತುಗಳನ್ನು ನಾಟಕ ತನ್ನಲ್ಲಿ ಅಳವಡಿಸಿಕೊಂಡಿತು. ಇಂದಿಗೂ ಭಾರತೀಯ ರಂಗಭೂಮಿಯಲ್ಲಿ ಅದರ ಮೊದಲ ಘಟ್ಟವೆನಿಸಿದ ಜನಪದ ರಂಗದಲ್ಲಿ ನೃತ್ಯಗೀತಗಳಿಗೆ ಹೆಚ್ಚಿನ ಪ್ರಾಧಾನ್ಯವಿರುವುದು ಕಂಡುಬರುತ್ತದೆ. ಕಾಲಾನುಕ್ರಮದಲ್ಲಿ ವೃತ್ತಿರಂಗ ಹಾಗೂ ವಿಲಾಸೀರಂಗಗಳು ಮೈತಳೆದು ಬಂದಮೇಲೆ ಆಡುಮಾತಿಗೂ ಅಭಿನಯಕ್ಕೂ ಹೆಚ್ಚಿನ ಗಮನ ಕೊಡಲಾಯಿತು. ಹೀಗೆ ನಾಟಕದ ಅಂಶಗಳ ಮೇಲಿನ ಪ್ರಾಧಾನ್ಯ ಅದಲುಬದಲಾದುದರಿಂದ, ಅದರ ರೂಪ ಸ್ವಲ್ಪ ಬೇರೆಯೆನಿಸಿದರೂ ಅದರ ಉದ್ದೇಶ ಮಾತ್ರ ಒಂದೇ ಆಗಿದೆ. ವೇದಗಳ ಧ್ಯೇಯವೂ ಅದೇ "ಬಹುಜನಹಿತಾಯ-ಬಹುಜನ ಸುಖಾಯ"[೩].

ಹರಿವಂಶದಲ್ಲಿ 'ರಾಮಾಯಣ' ಕಾವ್ಯಕಥೆಯನ್ನು ಆಧರಿಸಿ ನಾಟಕವಾಡಿದ ನಟರ ಪ್ರಸ್ತಾಪವಿದೆ. ಹರಿವಂಶವು ೩-೪ ನೇ ಶತಮಾನಕ್ಕಿಂತ ಮುಂಚಿನದು ಇರಲಿಕ್ಕಿಲ್ಲವೆಂಬ ಅನುಮಾನವಿರುವುದರಿಂದ ಅಷ್ಟು ಹೊತ್ತಿಗೆ ನಾಟಕ ರೂಪವೂ ಇದ್ದಿರುವ ಸಂಭವ ಹೆಚ್ಚಾಗಿ ಕಂಡುಬರುತ್ತದೆ. "ಪಾಣಿನಿಗಿಂತ

ಈಚೀನವರಾದ ಪತಂಜಲಿಯು (ಕ್ರಿ.ಶ.ಪೂ ೧೪೦) ತನ್ನ ಮಹಾಭಾಷ್ಯದಲ್ಲಿ ಅವನ ಕಾಲಕ್ಕಾಗಲೇ 'ನಾಟಕವು' ಇತ್ತೆಂಬುದಕ್ಕೆ ಸ್ಪಷ್ಟ ವಿವರಗಳು ದೊರೆಯುತ್ತವೆ. ನಾಟ್ಯಕಲೆಯನ್ನು ಸಮಗ್ರವಾಗಿ ವಿವರಿಸುವ ಮೊಟ್ಟ ಮೊದಲ ಗ್ರಂಥ ಭರತನ 'ನಾಟ್ಯಶಾಸ್ತ್ರ'ವು ನಾಟಕಕ್ಕೆ ದೈವೀ ಮೂಲವನ್ನು ಹೇಳುತ್ತದೆ. ಬ್ರಹ್ಮನೇ ಆ ನಾಟ್ಯವೇದದ ಸೃಷ್ಟಿಕರ್ತ. ಅದರ ಪ್ರಚಾರದ ಕಾರ್ಯವೇ ಭರತನ ಪಾಲಿಗೆ ಬಂದದ್ದು. ನಾಟ್ಯವು ಭರತ ಮತ್ತು ಆತನ ಸಂತತಿಯಿಂದ ಭೂಲೋಕಕ್ಕೆ ಇಳಿದು ಬಂದ ಕಲೆಯಾಗಿದೆ”[೪]. ನಾಟ್ಯವು ಎಲ್ಲಾ ಕಲೆಗಳ ಸಮಗ್ರ ಅಭಿವ್ಯಕ್ತಿಯ ರೂಪ ಎಂದು ಹೇಳಿದ ಭರತನು 'ನಾಟ್ಯಕ್ಕೆ ದೈವಿಕ ಮೂಲವನ್ನು ಹೇಳುವುದರ ಜೊತೆಗೆ ಧರ್ಮ, ಅರ್ಥ, ಕಾಮ ಮೋಕ್ಷಗಳೆಂಬ ಪುರುಷಾರ್ಥಗಳ ಸಾಧನೆಯ ಮಾಧ್ಯಮವೂ ಆಗಿದೆ. ಶ್ರಮಿಕರಿಗೆ ದುಃಖಿತರಿಗೆ ವಿಶ್ರಾಂತ ಕಾರಕವೂ ಆಗಿದೆ ಎಂದು ಹೇಳಿದ್ದಾನೆ.'[೫]

**ದೃಶ್ಯಕಾವ್ಯ :**

ಬೇರೆ ಬೇರೆ ರುಚಿಗಳನ್ನು ಏಕಕಾಲದಲ್ಲಿ ತಣಿಸಬಲ್ಲದು; ಎಲ್ಲ ಬಗೆಯ ಜನರನ್ನು ಒಮ್ಮೆಗೆ ಸೆರೆಹಿಡಿಬಲ್ಲದು” ಎಂಬ ಕಾರಣದಿಂದಲೂ, ಸಾಮೂಹಿಕವಾಗಿ ನೋಡಿದಾಗ 'ದೃಶ್ಯಕಾವ್ಯ'ವಾಗುವ ನಾಟಕವು, ಒಬ್ಬನೇ ಕುಳಿತು ಓದಿ, ನಾಲ್ಕು ಜನ ಕೇಳಿದಾಗ 'ಶ್ರವ್ಯಕಾವ್ಯ'ವಾಗುವ ಕಾರಣದಿಂದ ಒಂದು ದೇಶದ ಸಾಹಿತ್ಯದಲ್ಲಿ ಹಿರಿಮೆಯ ಸ್ಥಾನವನ್ನು ಗಳಿಸಿಕೊಂಡಿತು. ಇಂತಹ ಸರ್ವಾಕರ್ಷಣ ಗುಣ ಇರುವುದು ನಾಟಕವೊಂದರಲ್ಲೇ. ರಂಗಭೂಮಿಯ ಇತಿಹಾಸಕಾರರೂ ವಿಮರ್ಶಕರೂ ಆದ ಅಲರ್ಾಡಿಸ್‌ನಿಕಲ್ ಅವರು ಒಂದು ದೇಶದಲ್ಲಿ ನಾಟಕ ಹಾಗೂ ನಾಟಕ ಸಾಹಿತ್ಯಕ್ಕಿರುವ ಸ್ಥಾನವನ್ನು ಕುರಿತು ವಿಮರ್ಶಿಸುತ್ತ, “ಸಾಹಿತ್ಯದ ಪ್ರಕಾರಗಳಲ್ಲಿ ನಾಟಕ, ಅತ್ಯಂತ ವಿಚಿತ್ರವೂ ಗಹನವೂ ಆದುದು. ನಾಟಕದಲ್ಲಿ ಸಾಮೂಹಿಕ ರಂಜನಾ ಸಾಮರ್ಥ್ಯವಿದೆ; ಒಂದು ನಾಡಿನ ಬಾಹ್ಯಜೀವನ ಹಾಗೂ ಅಂತಃಸತ್ವದ ಚಿತ್ರವಿದೆ; ಸಮಾಜಧರ್ಮದ ವಿವೇಚನೆ ಇದೆ; ಸಮಾಜದಲ್ಲಿನ ವಿಷಮತೆಯನ್ನು ನಿವಾರಿಸುವ ಮಾರ್ಗದ ನಿರೂಪಣೆ ಇದೆ; ಹಾಸ್ಯ ವ್ಯಂಗ್ಯಗಳ ಆಳದಲ್ಲಿ, ಅದು ನೋಟಕನನ್ನೂ ಮುಳುಗಿಸುವಂತೆ, ಕಾವ್ಯಾನುಭವದ ಶಿಖರಕ್ಕೆ ಹತ್ತಿಸಲೂ ಶಕ್ತವಾಗಿದೆ. ಅದರಿಂದ ಮಾನವನ ಬೌದ್ಧಿಕ ಸೃಷ್ಟಿಯಲ್ಲಿ, ನಾಟಕ ಅತ್ಯಂತ ಸ್ವಾರಸ್ಯವಾದುದು”[೬] ಎಂದಿದ್ದಾರೆ.

ಗ್ರೀಸ ಮತ್ತು ಇಂಗ್ಲೆಂಡಿನಂತೆ ಭಾರತವೂ ತನ್ನ ನಾಟಕ ಸಾಹಿತ್ಯದ ಬಗೆಗೆ ಹೆಮ್ಮೆಪಡಬಹುದಾಗಿದೆ. “ಇಂಗ್ಲೆಂಡಿನ ಆಸ್ತಿ ಎಂದರೆ ಅದರ ಸಾಹಿತ್ಯ; ಆ ಸಾಹಿತ್ಯದ ಶಿಖರ ಎಂದರೆ ನಾಟಕ” ಎಂಬ ಆಡುಮಾತು ಬಳಕೆಯಲ್ಲಿದೆ, ಇದೇ ಮಾತನ್ನು ನಮ್ಮ ದೇಶಕ್ಕೆ ಅನ್ವಯಿಸಬಹುದು. ಭಾಸ ಕಾಳಿದಾಸರಿಂದ ಮೊದಲುಗೊಂಡು ಸಂಸ್ಕೃತ ರಂಗದ ನಾಟಕಕಾರರ ಕೃತಿಗಳು ಸಾವಿರಾರು ವರ್ಷಗಳು ಸಂದು ಹೋದರೂ, ಇಂದಿಗೂ ನಿತ್ಯನೂತನವಾಗಿ–ಉಳಿದಿವೆ. ಹೀಗೆ ಕಾಲವನ್ನು ಮೆಟ್ಟಿನಿಂತಿರುವುದರಿಂದಲೇ ಭಾರತೀಯ ನಾಟಕ, ರಾಷ್ಟ್ರೀಯ ಸಾಹಿತ್ಯದ ಶೃಂಗವಾಗಿ ಉಳಿದಿದ್ದು.

ನಾಟಕವನ್ನು ಸೃಷ್ಟಿಸಿದ ಬ್ರಹ್ಮನು "ನಾಟಕವೆಂದರೆ ಕೇವಲ ಪ್ರಚಾರ ಸಾಧನವಲ್ಲ ಮೂರು ಲೋಕಗಳ ಪ್ರತಿಬಿಂಬ ಅದು ಧಾರ್ಮಿಕ ಪ್ರವೃತ್ತಿಯವರಿಗೆ ಅದು ಧರ್ಮ ಮಾರ್ಗವನ್ನು ಬಿಂಬಿಸುತ್ತದೆ. ವಿಲಾಸಿಗಳಿಗೆ ದಿವ್ಯಪ್ರೇಮದ ಮಹತಿಯನ್ನು, ಪಂಡಿತರಿಗೆ ವಿಮರ್ಶಾವಿಧಾನವನ್ನು, ನೊಂದವರಿಗೆ ಸಾಂತ್ವನವನ್ನು ನೀಡುತ್ತದೆ. ನಾಟಕದಲ್ಲಿ ಅಲ್ಲದೆ, ಮತ್ತೆಲ್ಲಿ ಹೀಗೆ, ಮನರಂಜನೆಯೊಂದಿಗೆ ಜಿಜ್ಞಾಸೆ, ಆಕರ್ಷಣೆಯೊಂದಿಗೆ ಸುಜ್ಞಾನ ಹಾಗೂ ಸೌಂದರ್ಯದೊಂದಿಗೆ ಶೀಲ ಸಿಕ್ಕಿತು?" ಹೀಗೆಂದು ಕೇಳಿ ಸೃಷ್ಟಿಕರ್ತನು ದಾನವರ ಮನವೊಪ್ಪಿಸಿದನೆಂದು ನಾಟ್ಯಶಾಸ್ತ್ರ ಹೇಳುತ್ತದೆ[೭]. ಇದು ಜಗತ್ತಿನ ಪ್ರತಿಯೊಂದು ನಾಟಕಕ್ಕೆ ಅನ್ವಯಿಸುವ ಮಾತು.

ನಾಟಕ ಪ್ರತಿಯೊಬ್ಬನಿಗೆ ಅವನವನ ಆಂತರಿಕ ಸಾಂಸ್ಕೃತಿಕ ಹಂತಕ್ಕೆ ತಕ್ಕಂತಹ ಪ್ರತಿಫಲವನ್ನು ಕೊಡುತ್ತದೆ. "ಒಂದು ಪುಸ್ತಕ ಮಾಡುವದಕ್ಕಿಂತ ನೂರುಪಟ್ಟು ಹೆಚ್ಚಿನ ಸಾಧನೆಯನ್ನು ನಾಟಕ ಮಾಡಬಲ್ಲುದಾಗಿದೆ. ವಿಚಾರವಂತನಿಗೆ ಬದುಕಿನ ರಹಸ್ಯವನ್ನು, ಸಾಮಾನ್ಯನಿಗೆ ಜೀವನತತ್ವವನ್ನು, ಕಲಾವಿದನಿಗೆ ಕಲ್ಪನಾ ಸೃಷ್ಟಿಯ ವೈಭವವನ್ನು, ತಾಮಸಿಗೆ ಭಾಷೆಯ ಬೆಳಕು ಬೆಡಗುಗಳನ್ನು, ಅರಸಿಕನಿಗೆ ಬಾಳಿನ ವಿನೋದವನ್ನು ಅದು ಮೂಡಿಸುತ್ತದೆ". ಎಂದು ಹೆನ್ರಿ ಅರ್ವಿಂಗ್ ನುಡಿದ ಮಾತು ಗಮನಾರ್ಹವಾಗಿದೆ. ಈ ಎಲ್ಲ ಶೈಕ್ಷಣಿಕ ಹಾಗೂ ಮನರಂಜಕ ಅಂಶಗಳ ಕಾರಣದಿಂದಾಗಿ ಪ್ರಾಚೀನ ಕಾಲದಿಂದಲೂ ನಾಟಕವೂ 'ಕಾವ್ಯೇಷು ನಾಟಕಂ ರಮ್ಯಂ' ಎಂಬ ಕೀರ್ತಿಹೊತ್ತು, ಒಂದು ದೇಶದ ಸಾಹಿತ್ಯದಲ್ಲಿ ಹಿರಿಮೆಯ ಸ್ಥಾನವನ್ನು ಗಳಿಸಿಕೊಂಡಿದೆ.

ಭಾರತೀಯನ ದೃಷ್ಟಿಯಲ್ಲಿ ಪ್ರಾಪಂಚಿಕ ಜೀವನವು ಪಾರಮಾರ್ಥಕ್ಕೆ ಸಾಧನವಾಗಬೇಕು. ಎಂದೇ ಜೀವನದಲ್ಲಿ ಧರ್ಮಕ್ಕೆ, ನೀತಿಗೆ ಹೆಚ್ಚಿನ ಪ್ರಾಧಾನ್ಯ. ಜನತೆಯನ್ನು ಇಂತಹ 'ಧರ್ಮಜೀವನ'ಕ್ಕೆ ಅಣಿಗೊಳಿಸುವುದೇ ನಾಟಕದ ಧ್ಯೇಯವೆಂದು ಪ್ರಾಚೀನ ಭಾರತೀಯರ ನಂಬಿಕೆ. ನಮ್ಮ ಸಂಸ್ಕೃತಿಯ ಉದಾತ್ತ ತತ್ವಗಳನ್ನು (ಪಂಡಿತರ ಸ್ವತ್ತಾಗಿದ್ದ) ವೇದಾಗಮ ಪುರಾಣಗಳ ಸಾರಸಂಗ್ರಹವನ್ನು ಮನರಂಜನೆಯ ಮೂಲಕ ಜನರಿಗೆ ತಿಳಿಸಿಕೊಡುವುದೇ ನಾಟಕದ ಗುರಿ. ಈ ದೃಷ್ಟಿಯಿಂದ ರಂಗಕಲೆಯು ಜನತೆಯ ವಿದ್ಯಾಪೀಠ. ಹಾಗೆಯೇ ಅಭಿನಯಕ್ಕೆ ಮುಖ್ಯವಾದ ರಂಗಸಜ್ಜಿಕೆ ಬಹಳ ಪವಿತ್ರವಾದುದು. ಜನತೆಯಲ್ಲಿ ಉದಾತ್ತ ಭಾವನೆಗಳನ್ನು ಉದ್ದೀಪನಗೊಳಿಸಿ ಅಲ್ಲಿ ಸಲ್ಲುವ ಸಲುವಾಗಿ. ಇಲ್ಲಿಯೂ ಸಲ್ಲುವ ರೀತಿಯಲ್ಲಿ, ಜನ ಬಾಳುವಂತೆ ಮಾಡುವುದು ಅದರ ಧ್ಯೇಯ. ಹೀಗೆ ಜನತೆಗೆ ನೀತಿ ದರ್ಶನ ಮಾಡಿಸಲು ಶಕ್ತವಾಗಬೇಕಾದರೆ ರಂಗಭೂಮಿಯು ತನ್ನ ಪಾವಿತ್ರ್ಯವನ್ನು ಅತ್ಯಂತ ಎಚ್ಚರಿಕೆಯಿಂದ ಕಾಯ್ದುಕೊಳ್ಳಬೇಕೆಂಬುದು ಪ್ರಾಚೀನ ಭಾರತೀಯನ ದೃಷ್ಟಿಯಲ್ಲಿ ನಿರ್ವಿವಾದ ಮಾತು.

ನಾಟಕ ಪೌರಾಣಿಕವಾಗಲಿ, ಐತಿಹಾಸಿಕವಾಗಲಿ, ಸಾಮಾಜಿಕವಾಗಲಿ, ಅದರ ರಚನೆ ಗದ್ಯದಲ್ಲಿಯೇ ಇರಲಿ, ಪದ್ಯದಲ್ಲಿಯೇ ಇರಲಿ, ಅದರ ಗುರಿ ಮಾತ್ರ ಎಂದೆಂದಿಗೂ ಒಂದೇ; ನೋಟಕನ ಮನಸ್ಸನ್ನು

ರಂಜಿಸಿ ಆತನಿಗೆ ಬದುಕಿನ ದರ್ಶನವನ್ನು ನೀಡುವುದು. ಹೀಗೆ ಜೀವನದರ್ಶನ, ಮನರಂಜನೆ ಈ ಎರಡರ ಸಮತೋಲನವನ್ನು ತನ್ನ ಕೃತಿಯಲ್ಲಿ ಸಾಧಿಸುವದಕ್ಕಾಗಿ, ನಾಟಕಕಾರ ಅನೇಕ ಕಟ್ಟುಪಾಡುಗಳನ್ನು ಅನುಸರಿಸಬೇಕಾಯಿತು. ಗ್ರೀಕ್ ನಾಟಕಗಳನ್ನು ಬಂಧಿಸಿದ್ದ 'ಕಾಲ', ಸ್ಥಳ ಹಾಗೂ ಕ್ರಿಯೆಗಳ 'ಐಕ್ಯ'ವು ಇಂದು ಸಡಿಲವಾಗಿದ್ದರೂ, ನಾಟಕದ ಗುರಿಯು ಅಂದೂ ಇಂದೂ ಒಂದೇ ಆಗಿದೆ. ಎಂದರೆ 'ಪರಿಣಾಮದ ಐಕ್ಯಕ್ಕೆ' (Unity of Impression) ಅಂದಿನ ಮಹತ್ವವೇ ಇಂದಿಗೂ ಇದೆ.

ನಾಟಕದ ಪರಿಣಾಮವು ಗಾಢವೂ ಸರ್ವಕಾಲೀಕವೂ ಆಗಬೇಕಾದರೆ ಅದರ ಕಥೆಯಲ್ಲಿ ಸತ್ವವಿರಬೇಕು; ಬೆಳವಣಿಗೆ ಏಕಮುಖವಾಗಿರಬೇಕು; ಪ್ರದರ್ಶನ ಚೇತೋಹಾರಿಯಾಗಿ ಇರಬೇಕು. ಇಲ್ಲಿ ನಾಟಕಕಾರನಿಗೆ ರಂಗಭೂಮಿಯ ನಿಕಟ ಪರಿಚಯ ಇರಬೇಕಾದುದು ಅವಶ್ಯಕ. ಸ್ವಲ್ಪ ಕಾಲದಲ್ಲಿಯೇ ಅಧಿಕವಾದ ಪರಿಣಾಮವನ್ನು ಪ್ರೇಕ್ಷಕನ ಮೇಲೆ ಮಾಡಬೇಕಾದರೆ, ಕಥೆ, ಗೀತೆ, ಮಾತು, ಪಾತ್ರ ವಿವೇಚನೆ, ಪರಿಪ್ಲುತ ವಿಚಾರಗಳನ್ನು ಸರಿತೂಗಿಸಿ ನಾಟಕ ರಚನೆಯಲ್ಲಿ ಹಾಸುಹೊಕ್ಕಾಗಿ ಹೆಣೆಯುವುದಲ್ಲದೆ, ನಾಟಕಕಾರ ತನ್ನ ರಂಗಮಂದಿರದ ಸಾಧ್ಯಾಸಾಧ್ಯತೆಗಳನ್ನು ಅರಿತುಕೊಳ್ಳುವುದು ಅವಶ್ಯಕ.

**ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಾಟಕ :**

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಾಟಕ ಸಾಹಿತ್ಯದ ರಚನೆ, ನಾಟಕಗಳ ಬಗ್ಗೆ, ಜನರ ಅಭಿರುಚಿ ಕಲೆಗಳ ಬಗ್ಗೆ, ಅವರ ಅಭಿಮಾನ ಆಸಕ್ತಿ ಇವೆಲ್ಲ ಪ್ರಶ್ನೆಗಳಿಗೆ ಉತ್ತರ ದೊರಕಿಸಲು ವಿವೇಚಿಸುವುದಾದರೆ ನಾಟಕ ಸಾಹಿತ್ಯದ ಪ್ರಾಚೀನತೆಯನ್ನು ಹುಡುಕುವುದು ಅವಶ್ಯವೆನಿಸುತ್ತದೆ. ಕನ್ನಡ ಸಾಹಿತ್ಯವು ಸುಮಾರು ಎರಡು ಸಾವಿರ ವರ್ಷಗಳ ಸುದೀರ್ಘ ಇತಿಹಾಸವನ್ನು ಹೊಂದಿರುವುದು ನಮಗೆ ಕಂಡುಬರುತ್ತದೆ. ಕನ್ನಡ ಭಾಷೆ ಸಾವಿರಾರು ವರ್ಷಗಳ ಹಿಂದೆ ಉಜ್ವಲವಾಗಿ ವಿರಾಜಿಸಿದ ನಿದರ್ಶನಗಳು ಶಾಸನಗಳಲ್ಲಿ, ಅನ್ಯ ಭಾಷೆಯ ಗ್ರಂಥಗಳಲ್ಲಿ ದೊರೆಯುತ್ತವೆ. ಕನ್ನಡ ಸಾಹಿತ್ಯದ ಪ್ರಾಚೀನತೆ ನಿಖರವಾದ ಪ್ರಮಾಣೀಕೃತ ದಾಖಲೆ ಕ್ರಿ.ಶ. ೪೫೦ ರ ಹಲ್ಮಿಡಿ ಶಾಸನದಿಂದಲೇ ಪ್ರಾರಂಭವಾಗುತ್ತದೆ. ಕನ್ನಡ ಭಾಷೆಯ ಮೇಲೆ ಬೆಳಕು ಚೆಲ್ಲುವಲ್ಲಿ ಈ ಶಾಸನ ಬಹಳ ಪ್ರಮುಖವಾದುದು.

ಕನ್ನಡ ಭಾಷೆಗೆ ಇನ್ನೂ ಹೆಚ್ಚಿನ ಮಾಹಿತಿಯನ್ನು ಅದರ ಗಡಿ ವಿಸ್ತಾರ, ಕನ್ನಡದ ಜನತೆಯ ಸ್ವಭಾವ ಗುಣಲಕ್ಷಣ, ಸಾಹಿತ್ಯವನ್ನು ಬಹುಸೂಕ್ಷ್ಮವಾಗಿ ತಿಳಿಸಿಕೊಟ್ಟ ಇನ್ನೊಂದು ಮಹತ್ವದ ಉಪಲಬ್ಧ ಕೃತಿಯೆಂದರೆ ಕ್ರಿ.ಶ. ೮೫೭ ರ 'ಕವಿರಾಜ ಮಾರ್ಗ'. ಇದರಲ್ಲಿ ಕನ್ನಡದ ಸಮಗ್ರತೆ, ವಿಸ್ತಾರವನ್ನು ನಿಖರವಾಗಿ ತಿಳಿದುಕೊಳ್ಳಲು ಸಾಧ್ಯವಾಗಿದೆ. ಈ ಕೃತಿ ಕಾವ್ಯ, ಭಾಷೆ, ಅಲಂಕಾರಿಕ ಗ್ರಂಥವಾಗುವುದರ ಜೊತೆಗೆ ಕವಿ, ಸಾಹಿತಿಗಳಿಗೆ ರಾಜಮಾರ್ಗವನ್ನು ತೋರಿಸಿತೆಂದು ಹೇಳಬಹುದು. ಕವಿರಾಜ ಮಾರ್ಗಕಾರನಾದ ಶ್ರೀವಿಜಯನು, ವಿಮಲ, ಉದಯ, ನಾಗಾರ್ಜುನ, ಜಯಬಂಧು, ದುರ್ವಿನೀತ ಮೊದಲಾದ ಕವಿಗಳನ್ನು ಹೆಸರಿಸಿದ್ದಾನೆ. ದುರ್ವನಿತನ ಬಹುಮುಖ ಪಾಂಡಿತ್ಯವನ್ನು ವರ್ಣಿಸುವ ನಲ್ಲಾದ

ತಾಮ್ರ ಶಾಸನವು ಹೀಗೆ ಹೇಳುತ್ತದೆ. "ಅನೇಕ ಕಾವ್ಯ ಕಥಾ ನಾಟಕ ಪ್ರಣಯನ ಪ್ರರೂಢ ಪಾಟವೇನ........ ಅರಿನರಿಪತಿ ಶ್ರೀ ದುರ್ವಿನೀತ ನಾಮವೇನ"[೮] ಈ ಶಾಸನದ ಆಧಾರದಿಂದ ದುರ್ವಿನೀತನೂ ನಾಟಕಕಾರನಾಗಿದ್ದಿರಬಹುದೆಂದು ಹೇಳಬಹುದು.

ಆದಿಕವಿ ಪಂಪನು ನಾಟಕ ಕುರಿತಾಗಿ ತನ್ನ ಆದಿಪುರಾಣದ ಏಳನೆಯ ಆಶ್ವಾಸದಲ್ಲಿ ಹೀಗೆ ಹೇಳಿದ್ದಾನೆ,

**"ತಾನು ಮಾನಂದ ನಾಟಕಮನಾಡಲ್ ಬಗೆದು**
**ಕೃತಾನುಕರಣಮೆ ನಾಟಕ ಮಪ್ಪುದ ಱಂ**
**ಭಗವಜ್ಜನ್ಮಾಭಿಷೇಕ ಸಂಬಂಧಿಯಾಗೆ**
**ತನ್ನ ಪೊಸತೆ ಸಮೆದ ಸಮವತಾರ ರೂಪಮು**
**ವಂ.......... ತಾಂಡವಮನಾಡಲು**
**ದ್ಯೋಗಂಗೆಯ್ದು ಮಂಗಲಂಕಾರ ಕೃತನಾಗಿ ನಾಟ್ಯ**
**ವೇದಾವತಾರಮನೆ ಪೋಲ್ತು ರಂಗಂಬೊಕ್ಕು"**[೯]

ಈ ಮೇಲಿನ ಪದ್ಯವನ್ನು ನೋಡಲಾಗಿ ನಾಟಕ ಪ್ರಯೋಗ ಕನ್ನಡ ಸಾಹಿತ್ಯದಲ್ಲಿ ಬಳಕೆಯಲ್ಲಿತ್ತೆಂಬುದು ತಿಳಿದುಬರುತ್ತದೆ. ರನ್ನನ ಗದಾಯುದ್ಧದಲ್ಲಿ ನಾಟಕಾದಿ ರೂಪ ಕಂಡುಬರುತ್ತದೆ. ಕುಮಾರವ್ಯಾಸನ 'ಭಾರತಕಥಾಮಂಜರಿ'ಯಲ್ಲಿ ಆದಿಪರ್ವದ ಸಂಧಿ-೭ ರಲ್ಲಿ...... ಅಂಧಭೂಪನ ಕೊರಳು ಕುಸಿದುದು ನುಡಿಯ ನಾಟಕ ಹರ್ಷಭಾರದಲಿ "ಹಾಗೂ ೧೯ ನೇ ಸಂಧಿಯ ಕರ್ಣಪರ್ವದಲ್ಲಿ...... ಗೆಯ್ಗೆಳೆಂದಸುರಾರಿ ಹೊಗಳಲು ಹೊಯ್ಗಳಿಪ ಹೊಸ ನಾಟಕವನಭಿನಯಿಸಿ ಹೆಣಗಿದರು" ಎಂಬಂತಹ ಉದಾಹರಣೆಗಳನ್ನು ನೋಡಿದಾಗ ಕುಮಾರವ್ಯಾಸನ ಕಾಲಕ್ಕಾಗಲೇ ನಾಟಕಗಳು ಇದ್ದವೆಂದು ತಿಳಿದುಬರುತ್ತದೆ. ಕ್ರಿ.ಶ. ೧೫೦೮ ರ ಸುಮಾರಿನಲ್ಲಿ ಕೃಷ್ಣದೇವರಾಯನ ಕಾಲಾವಧಿಯಲ್ಲಿ ನಾಟಕಗಳಿಗೆ ವಿಶೇಷ ಮನ್ನಣೆ ಕೊಡುತ್ತಿದ್ದರು. ವಸಂತೋತ್ಸವ ಸಮಯದಲ್ಲಿ ಸಮಸ್ತ ಪ್ರಜೆಗಳ ಮುಂದೆ ಸ್ವತಃ ರಾಜನೆ ಬರೆದ 'ಜಾಂಬವತಿ ಕಲ್ಯಾಣ' ನಾಟಕವನ್ನು ಅಭಿನಯಿಸುತ್ತಿದ್ದರು. ರಾಜನು ನಟವರ್ಗದವರಿಗೆ ಭೂಮಿಯನ್ನು ಬಳುವಳಿಯಾಗಿ ಕೊಟ್ಟ ಅನೇಕ ಉದಾಹರಣೆಗಳು ದೊರಕುತ್ತವೆ. ರಾಜರು ಕಲೆಗೆ ಹೆಚ್ಚಿನ ಒತ್ತು ನೀಡಿದ್ದರೆಂಬುದು ಇದರಿಂದ ಗೊತ್ತಾಗುತ್ತದೆ.

ರತ್ನಾಕರವರ್ಣಿ (೧೫೫೭) ಯ 'ಭರತೇಶ ವೈಭವ'ದ ಪೂರ್ವ ನಾಟಕ ಉತ್ತರ ನಾಟಕಗಳ ಸಂಧಿಗಳಲ್ಲಿ ನಾಟ್ಯ-ನಾಟ್ಯಶಾಲೆಗಳ ವಿಸ್ತೃತವರ್ಣನೆಯನ್ನು ಕೊಟ್ಟಿದ್ದಾನೆ. ಭಟ್ಟಾಕಳಂಕನು (೧೬೦೪) ತನ್ನ ಕಾಲದಲ್ಲಿ ನಾಟಕಗಳು ಇದ್ದುವೆಂದು ಹೇಳುತ್ತಾನೆ. "ಶಬ್ದಾಗಮಯುಕ್ತ್ಯಾಗಮ ಪರವನಾಗಮ

ವಿಷಯಾಣಾನಾಂ ಕಥಾ ಸಾವ್ಯ ನಾಟಕಾಲಂಕಾರ......" ಎಂದಿರುವುದರಿಂದ ನಾಟಕಗಳು ಇದ್ದುವೆಂಬುದಕ್ಕೆ ಸ್ಪಷ್ಟ ಚಿತ್ರಣ ಕೊಟ್ಟಂತಾಗುತ್ತದೆ.[೧೦]

ಮೊಟ್ಟಮೊದಲು ಗ್ರಂಥರೂಪದಲ್ಲಿ ದೊರೆತ ನಾಟಕ ಕೃತಿಯೆಂದರೆ ಚಿಕ್ಕದೇವರಾಯ ಅರಸನ ಆಸ್ಥಾನಕವಿಯಾದ (೧೮೬೦) ಸಿಂಗರಾರ್ಯ ವಿರಚಿತ 'ಮಿತ್ರವಿಂದಾ ಗೋವಿಂದ ಅನಂತರದಲ್ಲಿ ನಾಟಕಗಳು ಒಂದರ ಮೇಲೊಂದು ರಚನೆಗೊಂಡವು. ಆದರೂ ಈ ಸಂದರ್ಭದಲ್ಲಿ ನಮ್ಮ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಉಳಿದೆಲ್ಲ ಸಾಹಿತ್ಯ ಪ್ರಕಾರಗಳಂತೆ ನಾಟಕ ಸಾಹಿತ್ಯವು ಬಹಳಷ್ಟು ಬೆಳೆಯಲಿಲ್ಲ ಎಂಬುದು ಚಿಂತನೆ ಮಾಡುವ ವಿಷಯ ಆದಾಗ್ಯೂ ರತ್ನಾಕರವರ್ಣಿಯ ನಾಟ್ಯಶಾಲೆಯ ವರ್ಣನೆ ಹಾಗೂ ಹೊಯ್ಸಳರ ವಿಷ್ಣುವರ್ಧನನ ರಾಣಿ ಸಹಧರ್ಮಿಣಿ ಶಾಂತಲಾದೇವಿಯ ನಾಟ್ಯಪ್ರಿಯತೆ ಕನ್ನಡಿಗರ ಕಲಾಭಿಮಾನದ ಹೆಗ್ಗುರುತುಗಳಾಗಿವೆ.

"ನಾಟಕ ಪ್ರಕಾರಗಳಾದ ಬಯಲಾಟ, ಸೂತ್ರದಗೊಂಬೆ, ಯಕ್ಷಗಾನ, ಸಣ್ಣಾಟ ಇವೆಲ್ಲವುಗಳಿಗೆ ನಾಟಕಕಾರರು ಸಾಹಿತ್ಯವನ್ನು ರಚಿಸಿದರು. ಆದರೆ ಇವುಗಳಿಗೆ ಪಂಡಿತರ ಮುದ್ರೆ ಬೀಳಲಿಲ್ಲ. ನಾಟಕಗಳು ಕೇವಲ ಜನಸಾಮಾನ್ಯರ ಸೊತ್ತೆಂಬ ಭಾವನೆ ವಿದ್ವಜ್ಜನರಲ್ಲಿ ಮೂಡಿರಬೇಕು. ಹೀಗಾಗಿ ಆ ಕಾಲದಲ್ಲಿ ನಾಟಕ ಸಾಹಿತ್ಯ ಬೆಳೆಯಲಿಕ್ಕೆ ಸಾಧ್ಯವಾಗಿರಲಿಕ್ಕಿಲ್ಲ ಎಂಬ ಸಂಶಯ ನಮಗಾಗದೆ ಇರದು."[೧೧]

ಕನ್ನಡ ನಾಟಕಗಳಲ್ಲಿ ಇದುವರೆಗೆ ದೊರೆತಿರುವ ತುಂಬ ಹಳೆಯದಾದ ನಾಟಕವೆಂದರೆ ಮೈಸೂರಿನ ದೊರೆ ಚಿಕ್ಕದೇವರಾಜರ (೧೬೭೨-೧೭೦೪) ಆಸ್ಥಾನದಲ್ಲಿದ್ದ ಸಿಂಗರಾರ್ಯ ಕವಿ ರಚಿಸಿದ 'ಮಿತ್ರವಿಂದಾ ಗೋವಿಂದಾ' ಎಂಬುದು ಸುಮಾರು ೧೬೮೦ ರಲ್ಲಿ ರಚಿತವಾದ ಈ ಕೃತಿ, ಶ್ರೀ ಹರ್ಷನ 'ರತ್ನಾವಳಿ' ಎಂಬ ಸಂಸ್ಕೃತ ನಾಟಕದ ಕನ್ನಡರೂಪ. ನಾಟಕದ ಭಾಷೆ ಹಳಗನ್ನಡ. ಸಂಭಾಷಣೆಯೆಲ್ಲ ಗದ್ಯದಲ್ಲಿಯೇ ಇದೆಯಾದರೂ ಅಲ್ಲಲ್ಲಿ ಸಂದರ್ಭೋಚಿತವಾಗಿ ಕಂದಪದ್ಯಗಳು, ಅಕ್ಷರಗಣ ವೃತ್ತಗಳು ಇವೆ. ನಾಲ್ಕು ಅಂಕಗಳ ನಾಟಕ ಇದು. ಕವಿಯು ಇದೊಂದು ಸ್ವತಂತ್ರ ಕೃತಿಯೆನಿಸುವಂತೆ ಕೆಲವೊಂದು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾನೆ.

ಸಿಂಗರಾರ್ಯ ತನ್ನ ಆಶ್ರಯದಾತನಾದ ಚಿಕ್ಕದೇವರಾಜನ ವೀರ ವೈಭವಗಳನ್ನು ತನ್ನ ನಾಟಕದಲ್ಲಿ ಅನ್ವಯಿಸಿ, ಕಥಾನಾಯಕನಲ್ಲಿ ಆಶ್ರಯದಾತನನ್ನೆ ಕಂಡುಕೊಂಡನೆಂಬ ಹೇಳಿಕೆಯಿದೆ. ಏನೇ ಆದರೂ ಸಹ ಅದು ಕನ್ನಡ ನಾಟಕ ಚರಿತ್ರೆಯಲ್ಲಿ ಮುಖ್ಯವಾದ ಒಂದು ಮೈಲುಗಲ್ಲಾಗಿ ನಿಂತಿದೆ ಎಂದು ಹೇಳಬಹುದು.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ 'ನಾಟಕ' ಎಂಬ ಪದ ಮತ್ತೆ ಮತ್ತೆ ಬರುತ್ತದೆ. ಇಂಥ ಉಲ್ಲೇಖಗಳಿಗೆ ಶಾಸನಗಳ ಸಾಕ್ಷ್ಯವೂ ದೊರೆಯುತ್ತದೆ. ಗೋವಿಂದ ವೈದ್ಯ, ರತ್ನಾಕರವರ್ಣಿಗಳ ಕೃತಿಗಳಲ್ಲಿ ಈ ಪದ ಬಳಕೆ ಅಡಿಗಡಿಗೂ ಬರುತ್ತದೆ. ಅದರ ವರ್ಣನೆಯೂ ಅಲ್ಲಲ್ಲಿ ಕಾಣಿಸುತ್ತದೆ.

**"ಮೆರೆವ ತಾರೆಗಳ ಸಮೂಹದೊಡನೆ ಬಹ**

**ಮಿರುಪ ಶಾಕಾ ಚಂದ್ರನಂತೆ**

**ತರುಣಿ ರನ್ನೆಯರ ಮೊತ್ತದಲಿ ನಾಟಕ ಶಾಲೆ**

**ಗರಸ ನೃತಂದನರ್ತಿಯಲಿ"**[೧೨]

ಈ ಮೇಲಿನ ಪದ್ಯದಲ್ಲಿ ಮೈಸೂರಿನ ಕಂಠೀರವ ನರಸರಾಜರ (೧೬೩೮-೧೬೫೯) ಅರಮನೆಯಲ್ಲಿ ಹರವಾದ 'ನಾಟಕಶಾಲೆ' ಇದ್ದಿತೆಂದು ನಾಟಕಕ್ಕೆ ಅವರು ಕೊಟ್ಟ ಪ್ರಾಧಾನ್ಯತೆಯನ್ನು ಗೋವಿಂದ ವೈದ್ಯ ಕವಿ ಕಾವ್ಯದಲ್ಲಿ ವಿವರಿಸಿದ್ದಾನೆ.

೧೭ನೇ ಶತಮಾನದ ಆದಿಭಾಗದಲ್ಲಿದ್ದ ಭಟ್ಟಾಕಳಂಕನು ತನ್ನ ಶಬ್ದಾನುಶಾಸನದಲ್ಲಿ

**"ಶಬ್ದಾಗಮ ಯುಕ್ತಾಗಮ ಪರಮಾ**

**ಗಮ ವಿಷಯಾಣಾಂ ತಥಾ**

**ಕಾವ್ಯ ನಾಟಕಾಲಂಕಾರ ಕಲಾಶಾಸ್ತ್ರ**

**ವಿಷಯಾಣಾಂ ಚ ಬಹೂನಾಂ**

**ಗ್ರಂಥಾನಾಮಪಿ ಭಾಷಾಕೃತನಾ**

**ಮಪಲಭ್ಯಮಾನತ್ವಾತ್"**[೧೩]

ಎಂದಾಗ 'ಭಾಷಾಕೃತಾನಾಂ' ಎಂಬ ಮಾತಿನಲ್ಲಿ ಕನ್ನಡ ನುಡಿಯಲ್ಲಿಯೇ ಇದ್ದ ನಾಟಕ ಎಂಬ ಅರ್ಥವನ್ನು ಸಂಶೋಧಕರು ಊಹಿಸಿದ್ದಾರೆ.

ಕುಮಾರವ್ಯಾಸನಲ್ಲಿ 'ನಾಟಕ' ಎಂಬ ಪದ ಅನೇಕ ಕಡೆ ಬಂದಿದೆ. 'ಬಸವ ಪುರಾಣ'ದ ಭೀಮಕವಿಯು ಶೃಂಗಾರಗೊಂಡು, ಒಡವೆಗಳಿಂದ ಅಲಂಕೃತಳಾಗಿ 'ನಾಟಕಕ್ಕಳವಟ್ಟು ರೀತಿಯೊಳಪ್ಪಿ' ನಡೆತಂದ ಚದುರೆ ಸೋಮಲದೇವಿಯನ್ನು ಬಣ್ಣಿಸಿದ್ದಾನೆ 'ಶೃಂಗಾರ ರತ್ನಾಕರದ' ಕವಿ ಕಾಮದೇವನೂ 'ಪೇಳ್ವಭಿನಯಿಸಿ ನಾಟಕಂಗಳನಂತುಂ ಪದೆದಲ್ಲದೆ ಬರ್ಕುಮೆ? ಎಂದು ನಾಟಕದ ಮಾತು ತೆಗೆಯುತ್ತಾನೆ.' 'ವಿಜಯ ಸುರತ್ಕಲಂಕರಣಮಾಗೆ ಮಲ್ಲಿಜಿನೇಂದ್ರ ದೇಹವನ್ನು' ಕಟ್ಟಿಸಿದ ನಾಗಚಂದ್ರನು (ಕ್ರಿ.ಶ ಸುಮಾರು ೧೧೪೦) "ಸರ್ವಾಂಗ ಸುಂದರಿ ವಿದ್ಯಾನತಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀ ರಂಗದೊಳ್" ಎಂದು ಪ್ರಾರ್ಥಿಸಿದ್ದಾನೆ. ಪಂಚತಂತ್ರದ ದುರ್ಗಸಿಂಹನು ರಾಣಿಯರಾದ ಮಹಾದೇವಿ, ರೂಪಾದೇವಿಯರು, ಸೀತೆ-ರಾಮರಾಣಿ, 'ಕೃತಕ ನಾಟಕಮನಾಡಿದ' ರೀತಿಯನ್ನು ತಿಳಿಸುತ್ತಾನೆ. ಅಜಿತ ಪುರಾಣದ ಕರ್ತೃವಾದ ರನ್ನ, "ಕುಳಿಶಧರಂ ಪೊಗಳುಮ್ಮಿ ಮನಂಗೊಳೆ ಮಾಡಿದನೈಂದ್ರಮೆಂಬ ನಾಟಕ ವಿಧಿಯಂ" ಎಂದು ಐಂದ್ರ ಎಂಬ ಹೆಸರಿನ 'ನಾಟಕ ವಿಧಿಯ' ಮಾತನ್ನೆತ್ತಿದ್ದಾನೆ.

ಶ್ರೀ ವಿಜಯ 'ವಿರಚಿತ' 'ಕವಿರಾಜ ಮಾರ್ಗದ' ಮೊದಲನೆಯ ಆಶ್ವಾಸದ ಆರನೆಯ ಪದ್ಯದಲ್ಲಿ 'ನಾಟಕ'ದ ಮಾತು ಈ ಮುಂದಿನಂತಿದೆ.

**ವ್ಯಾಕರಣ ಕಾವ್ಯ ನಾಟಕ**

**ಲೋಕ ಕಳಾಸಮಯ ಮಾದಳಂ ಕೃತಿಗಳೊಳಂ।**

**ವ್ಯಾಕುಳ ಸಲ್ಲದನೇಕ ವಿ**

**ವೇಕ ಬೃಹಸ್ಪತಿಯ ನಗರಮಂ ಪುಗುತರ್ಪ್ಪಂ॥**

ಈ ಎಲ್ಲರಿಂದಾಗಿ 'ನಾಟಕ'ವೆಂಬ ಹೆಸರಿನ ಮನರಂಜನೆಯೊಂದು ಕನ್ನಡ ನಾಡಿನಲ್ಲಿ ಸುಮಾರು ಹತ್ತನೆಯ ಶತಮಾನದಿಂದಾದರೂ ಇದ್ದೀತೆಂದು ನಂಬಬಹುದಾಗಿದೆ.

ಹೀಗೆ ಗೋವಿಂದ ವೈದ್ಯ ಹಾಗೂ ರತ್ನಾಕರವರ್ಣಿ ತಮ್ಮ ಕಾವ್ಯಗಳಲ್ಲಿ 'ನಾಟಕ' ಎಂಬ ಪದವನ್ನು ಕಥಾನೃತ್ಯದ ಅರ್ಥದಲ್ಲಿ ಬಳಸಿದ್ದಾರೆ. ಅವರು ವರ್ಣಿಸಿದ 'ನಾಟಕ'ಗಳು ವಾಸ್ತವವಾಗಿ ಅಭಿನಯ ಪ್ರಧಾನವಾದ ನೃತ್ಯಪ್ರದರ್ಶನಗಳು. ಹದಿನಾಲ್ಕನೆಯ ಶತಮಾನದಲ್ಲಿದ್ದ ಅಭಿನವ ಮಂಗರಾಜನ 'ಅಭಿನವಾಭಿದಾನ' (ಕ್ರಿ.ಶ. ೧೩೭೮) ಎಂಬ ಅರ್ಥಕೋಶದಲ್ಲಿ 'ನಾಟಕ' ಎಂಬ ಪದಕ್ಕೆ ಸ್ಪಷ್ಟವಾಗಿ ಇದೇ ಅರ್ಥವಿದೆ.

**"ನೃತ್ಯದೊಳು ಹಸ್ತಾಂಗ ದೃಷ್ಟಿಗತಿ ಪದ್ಧತಿಯೊಳಾಡೆ ನಾಟಕ ಮೆನಿಕ್ಕುಂ"**

(ಅಭಿನವಾಭಿದಾನ ೧೯೫೫; ಮಟ ೨೫)

ಎಂದರೆ, ಹಸ್ತಾಭಿನಯ (ಮುದ್ರೆ) ನೇತ್ರಾಭಿನಯಗಳು ಪ್ರಧಾನವಾಗಿದ್ದ ವಿಶಿಷ್ಟವಾದ ಒಂದು ನೃತ್ಯ ಪದ್ಧತಿಯೇ–ಅಂದಿನ 'ನಾಟಕ'.

'ಅಭಿನವಾಭಿದಾನ'ಕ್ಕೆ ಸ್ವಲ್ಪ ಕಾಲಕ್ಕೆ ಹಿಂದೆ ಭೀಮಕವಿಯು ರಚಿಸಿದ 'ಬಸವಪುರಾಣ' (೧೩೬೯) ದಲ್ಲಿ ನಾಟಕವಾಡಿದ ಸೋಮಲದೇವಿಯ ಅಲಂಕಾರ ವರ್ಣಿಕೆಗಳು ಆಕೆ ನರ್ತಕಿ ಎಂದೇ ನಿರ್ದೇಶಿಸುತ್ತವೆ.

**ಇಟ್ಟ ಜಡೆ ಬೊಲ್ಲಹವಮರ್ದಿರೆ**

**ತೊಟ್ಟ ಕಂಚುಕಮಂ ದುಕೂಲವ**

**ನುಟ್ಟು ಚಲ್ಲಣಮಂ ರಚಿಸಿ ಮಣಿಖಚಿತ ಸಿಂಜನಿಯ**

**ಕಟ್ಟಿಕೊಂಡು ಬೆಡಂಗಡರೆ ನೆರೆ**

**ದಿಟ್ಟ ನೀನೀ ನಾಟಕಕ್ಕಳ**

**ವಟ್ಟು ರೀತಿಯೊಳೊಪ್ಪಿ ಸೋಮಲದೇವಿ ನಡೆ ತಾರೆ** (ಬಸವ ಪುರಾಣ xii:42)

ಅಭಿನವಮಂಗರಾಜನ ಅರ್ಥವಿವರಣೆಯೇ ಭೀಮಕವಿಯು ವರ್ಣಿಸಿದ 'ನಾಟಕ' ದಲ್ಲಿ ವಿಸ್ತಾರಗೊಂಡಿದೆ. ಮಂಗರಾಜನಿಗಿಂತ ಪ್ರಾಚೀನರಾದ ಕವಿಕಾಮದೇವ ಹಾಗೂ ಆದಿಪಂಪರ ಕೃತಿಗಳಲ್ಲಿಯ 'ನಾಟಕ'ಗಳಿಗೂ ಇದೇ ಅರ್ಥ ಅನ್ವಯಿಸುವಂತಿದೆ. ಹನ್ನೆರಡನೆಯ ಶತಮಾನದಲ್ಲಿದ್ದ ಕವಿ ಕಾಮದೇವನು ತನ್ನ 'ಸಂಗೀತ ರತ್ನಾಕರ'ದ ಪ್ರಶಂಸಾಪದ್ಯದಲ್ಲಿ, ಆಸಕ್ತರೆಲ್ಲರೂ ಈ ಕಾವ್ಯವನ್ನೋದಿ ಸಫಲರಾಗಬೇಕೆನ್ನುವಾಗ 'ನಾಟಕ'ದಲ್ಲಿ ಅಭಿನಯದ ಮೇಲೆಯೇ ನಿರ್ದಿಷ್ಟವಾದ ಸ್ವರಭಾರವನಿಟ್ಟಿದ್ದಾನೆಂದು ಖಚಿತವಾಗುತ್ತದೆ.

ಕವಿ ಕಾಮದೇವನಿಗಿಂತ ಪ್ರಾಚೀನ ಕವಿಯಾದ ಆದಿಪಂಪ, ತನ್ನ ಆದಿಪುರಾಣದ ಏಳನೆಯ ಆಶ್ವಾಸದಲ್ಲಿ ಪ್ರಾಸಂಗಿಕವಾಗಿ, ತನ್ನ ಕಾಲದಲ್ಲಿ 'ನಾಟಕ' ಎಂಬ ಪದಕ್ಕಿದ್ದ ಅರ್ಥವನ್ನು ಹೀಗೆ ಹೊಳೆಯಿಸುತ್ತಾನೆ....

**"ತಾನುಮಾನಂದ ನಾಟಕೆ ಮಾಡಲ್ವಗೆದು**

**ಕೃತಾನುಕರಣಮೆ ನಾಟಕಮಪ್ಪುದರಿಂ, ಭಹವಜ್ಜನ್ಮಾಭಿಷೇಕ ಸಂಬಂಧಿಯಾಗೆ...."**

ಈ ಅನುಕರಣ ಅಭಿನಯದಲ್ಲಿ ಮಾತ್ರ ಇದೆಯೋ ಅಥವಾ ಮಾತಿನ ಧಾಟಿಯನ್ನು ಒಳಗೊಂಡಿದೆಯೋ ಎಂಬುದನ್ನು ನಿರ್ದಿಷ್ಟವಾಗಿ ಹೇಳುವುದು ಸಾಧ್ಯವಿಲ್ಲವೆಂದರೂ, ಕವಿಯು ಕೊಟ್ಟ 'ನಾಟಕ'ದ ಮತ್ತೊಂದು ವರ್ಣನೆಯನ್ನು ಓದಿದಾಗ, ಆತನ ಕಾಲದ 'ನಾಟಕ'ಗಳು ಆಡುಮಾತನ್ನು ಅಳವಡಿಸಿಕೊಂಡಿರಲಿಲ್ಲವೆಂಬುದನ್ನು ಸ್ಪಷ್ಟಪಡಿಸುತ್ತದೆ. 'ನಾಟಕ'ದ ಆ ವರ್ಣನೆ ಬರುವುದು, ಪುರದೇವನನ್ನು ಮೆಚ್ಚಿಸಲು ಬಂದ ದೇವಕನ್ನೆಯಾದ ನೀಲಾಂಜನೆಯ ನೃತ್ಯವೈಭವವನ್ನು ಚಿತ್ರಿಸುವಾಗ, ಅದು ಆದಿಪುರಾಣದ ಒಂಭತ್ತನೆಯ ಆಶ್ವಾಸದಲ್ಲಿ ಹೀಗೆ ಬಂದಿದೆ.

**"ಕೋಟತೆರದಿಂದಮೆಸವೀ ನಾಟಕಮಂ ತೋರೆ ಮಾಣ್ದಳಿಲ್ಲಳ್**

**ಬಗೆಯೊಳ್ ನಾಟುವಿನ ಮಮರಿ ಸಂಸ್ಕೃತಿ ನಾಟಕಮುಮನೆ**

**ನಗೆ ನೆರೆ ತೋರಿದಳೀಗಳ್.....[೧೪]"**

ಹೀಗೆ ಮೊದಲು ಪರಿಶೀಲಿಸಿದಂತೆ 'ನಾಟಕ' ಎಂಬ ಮಾತಿಗೆ, ಅಭಿನವ ಮಂಗರಾಜನು ಕೊಟ್ಟ ಅರ್ಥವಿವರಣೆಯೇ ಆತನಿಗಿಂತ ನಾನ್ನೂರು ವರ್ಷಗಳ ಹಿಂದಿನ 'ನಾಟಕ'ಕ್ಕೂ ಅನ್ವಯವಾಗುತ್ತದೆ. ನಮ್ಮ ಪ್ರಾಚೀನ ಕಾವ್ಯಗಳಲ್ಲಿ 'ನಾಟಕ' ಎಂದು ವರ್ಣಿತವಾದುದೆಲ್ಲ ಅಭಿನಯಪ್ರಧಾನವಾದ ಕಥಾನೃತ್ಯಗಳು ಎಂದು ಒಪ್ಪುವಂತಾಗುತ್ತದೆ. ಅದರಿಂದ ಕನ್ನಡನಾಡಿನ ಪ್ರಾಚೀನ ರಂಗಭೂಮಿಯ 'ನಾಟಕ'ವು ಇಂದಿನ ಕಥಕ್ಕಳಿಯಂತೆ, ಭಾವಾಭಿನಯ ಹಾಗೂ ಗೀತ ಪ್ರಧಾನವಾದ ಕಥಾನೃತ್ಯವಾಗಿರಬೇಕು. ರತ್ನಾಕರವರ್ಣಿಯು ಚಿತ್ರಿಸಿದ ನಾಟಕದ ಪ್ರದರ್ಶನಕ್ಕೂ ಇಂದಿಗೂ ಕರಾವಳಿಯ ಭವ್ಯಕಲೆಯಾಗಿ ಉಳಿದಿರುವ ಯಕ್ಷಗಾನ ಪ್ರದರ್ಶನಕ್ಕೂ, ಸಂಬಂಧದ ಎಳೆಗಳಿವೆ. 'ಉತ್ತರ ನಾಟಕ ಸಂಧಿ'ಯಲ್ಲಿ ಬರುವ

ನಾಟ್ಯವರ್ಣನೆಯಲ್ಲಿ ಹಂತಹಂತವಾಗಿ ಜಾರುವ ಪರದೆ ಕೆಳಗಿಳಿದ ಮೇಲೆ ನಾಟ್ಯಕನ್ನಿಕೆಯರು ಪ್ರೇಕ್ಷಕರಿಗೆ ತೋರಿಬಂದು ತಮ್ಮ ಬೊಗಸೆಗಳಿಂದ ಹೂವೆರಚಿ, ನೃತ್ಯ ನಾಟಕವನ್ನು ಆರಂಭಿಸುತ್ತಾರೆ. ಹಂತಹಂತವಾಗಿ ಪರದೆ ಇಳಿಸುವ ಅಥವಾ ಓಸರಿಸುವ ಈ ಸಂಪ್ರದಾಯ ಕರಾವಳಿಯ ಯಕ್ಷಗಾನದಲ್ಲಿ ಇಂದಿಗೂ ಉಳಿದುಬಂದಿದೆಯೆಂಬುದು ಗಮನಾರ್ಹ. ಅಂದಿನ ರಾಜರ ಆಸ್ಥಾನಗಳಲ್ಲಿ, ಸಂಕೇತ ಪ್ರಧಾನವಾದ ನಾಟಕ ಪ್ರಯೋಗಗಳು ಹೆಚ್ಚು ಪ್ರಿಯವಾಗಿದ್ದಿರಬೇಕು. ಕಣ್ಮನ ತಣಿಸಿ ಮನರಂಜನೆ ನೀಡುವಲ್ಲಿಯೂ ಇದಕ್ಕೆ ಹೆಚ್ಚು ಪ್ರೋತ್ಸಾಹವನ್ನು ಅಂದಿನವರು ನೀಡಿ ಗೌರವಿಸಿರುವದು ನಮಗೆ ಕಂಡುಬರುತ್ತದೆ. ಅದಲ್ಲದೆ ಇಂದೂ ಸಹ ಮುಂದುವರೆದುಕೊಂಡು ಬಂದಿರುವುದು ಅದರ ಮಹತಿಯನ್ನು ಎತ್ತಿ ತೋರಿಸುತ್ತದೆ. ಒಟ್ಟಾರೆ 'ಮಿತ್ರವಿಂದಾ-ಗೋವಿಂದ' ನಾಟಕಕ್ಕೂ ಮೊದಲು ಹಿಂದಿನ ಕಾಲದಿಂದ ಕೆಲವೊಂದು ಸಂದರ್ಭಗಳಲ್ಲಿ ಸಂಸ್ಕೃತ ನಾಟಕಗಳನ್ನು ಅಭಿನಯಿಸಲಾಗುತ್ತಿದ್ದಿತು ಎನ್ನಲು ಆಧಾರಗಳಿವೆ. "ವಿಜಯನಗರದ ಕೃಷ್ಣದೇವರಾಯರೇ ಸಂಸ್ಕೃತದಲ್ಲಿ ರಚಿಸಿದ 'ಜಾಂಬವತೀ ಕಲ್ಯಾಣ'ವೆಂಬ ನಾಟಕ, ವಿರುಪಾಕ್ಷದೇವರ ಚೈತ್ರೋತ್ಸವದ ಸಂದರ್ಭದಲ್ಲಿ, ನೆರೆದ ಜನತೆಯ ಸಲುವಾಗಿ ರಾಜರ ಸಮ್ಮುಖದಲ್ಲಿ ಪ್ರದರ್ಶಿತವಾಯಿತೆಂದು ಸಂಶೋಧಕ ಸಾಲತೊರೆಯವರು ಆಧಾರಪೂರ್ವಕವಾಗಿ ಉಲ್ಲೇಖಿಸಿದ್ದಾರೆ. ಜೋತಿರೇಶ್ವರ ಕವಿ ವೇಬರಾಚಾರ್ಯರು ರಚಿಸಿದ ಎರಡು ಅಂಕಗಳ "ಧೂರ್ತಸಮಾಗಮ ಪ್ರಹಸನ'ವೂ ಅಂದಿನ ಜನಮನವನ್ನು ರಂಜಿಸಿದ ಸಂಸ್ಕೃತದ ನಗೆ ನಾಟಕ. ಇದು ವಿಜಯನಗರದಲ್ಲಿ ಸಾಳ್ವನರಸಿಂಹ ರಾಯನ ಕಾಲದಲ್ಲಿ ಪ್ರದರ್ಶಿತಗೊಂಡಿತೆಂದು ಸಾಲತೊಲೆಯವರ ಮತ". (Social and Political life in Vijaynagar Empire ಸಂಪುಟ-೨, ಪುಟ: ೪-೧೫)[೧೫].

ಹನ್ನೊಂದನೆಯ ಶತಮಾನದಲ್ಲಿ ದುರ್ಗಸಿಂಹನು ತನ್ನ ಕನ್ನಡ ಪಂಚತಂತ್ರಗಳಲ್ಲಿ ಕೊಟ್ಟ ಒಂದೆರಡು ಸೂಚನೆಗಳಿಂದಾಗಿಯೂ, ಆತನ ಕಾಲದಲ್ಲಿ ನಾಟಕದ ಬಗೆಗೆ ಜನರು ವಿಶೇಷ ಬಲವನ್ನು ಕೊಟ್ಟಿದ್ದರೆಂಬುದು ಗೊತ್ತಾಗುತ್ತದೆ. ಹಾಗಾಗಿ ಕನ್ನಡದಲ್ಲಿ ನಾಟಕಗಳು ಇದ್ದಿರಬೇಕು ಎಂಬ ಭಾವನೆ ಬರುತ್ತದೆ. "ಪಂಚತಂತ್ರದ ಎರಡನೆಯ ಅಧ್ಯಾಯದಲ್ಲಿ ಅಜಿತನ ಕಥೆ ಹೇಳುವ ಸಂದರ್ಭದಲ್ಲಿ "ಇತ್ತಲ್ ಮಹದೇವಿಯುಂ ರೂಪಾದೇವಿಯುಮೆಂಬರಿರ್ವರಸಿಯರಂ ವಿನೋದಾರ್ಥದಿಂ ಸೀತೆಯುಂ ರಾಮಾನುಮಾಗಿ ಕೃತಕ ನಾಟಕಮನಾಡಿ"......[೧೬] ಎಂದು ದುರ್ಗಸಿಂಹನು ಹೇಳುವ ವಾಕ್ಯದಲ್ಲಿ ಅಂತಃಪುರದಲ್ಲಿ ರಾಣಿಯರು ವಿನೋದಕ್ಕಾಗಿ ಆಡಿದ "ಕೃತಕನಾಟಕ' ಆತನ ಕಾಲದ ಜನಕ್ಕೆ ನಾಟಕದ ಬಗೆಗೆ ಇದ್ದ ನಿಕಟವಾದ ಪರಿಚಯವನ್ನು ಸೂಚಿಸುತ್ತದೆ. ಆದರೆ ಅವರ ನಾಟಕ ಗೀತೆಯದೋ, ಮಾತಿನದೋ, ನೃತ್ಯವೋ ನಾಟಕವೋ ಎಂದು ಹೇಳಲು ಬರುವಂತಿಲ್ಲವಾದರೂ ಅಂದಿನ ಕನ್ನಡ ನಾಡಿನಲ್ಲಿ ನಾಟಕವೂ ಜನಕ್ಕೆ ಪ್ರಿಯವಾಗಿತ್ತು ಎಂಬುದು ಸತ್ಯ. ಇವೆಲ್ಲವನ್ನೂ ಗಮನಿಸಲಾಗಿ

ಕನ್ನಡರೂಪದ ನಾಟಕಗಳು ಅಂದು ಸಹ ಪ್ರಚಾರದಲ್ಲಿ ಇದ್ದಿರಬಹುದು ಎಂದು ಅನೇಕ ಸಂಶೋಧಕರ ಅಭಿಪ್ರಾಯವಾಗಿದೆ.

ಹೀಗೆ ಕನ್ನಡ ನಾಟಕವು ಪ್ರಾಚೀನಕಾಲದಲ್ಲಿ ಈ ನೆಲದ ಸಂಸ್ಕೃತಿಯಲ್ಲಿ ಆಳವಾದ ಬೇರುಬಿಟ್ಟು ಪುಷ್ಟಿಗೊಂಡು ಎರಡು ಕವಲಾಗಿ ಬೆಳೆಯಿತೆನ್ನಬೇಕು. ಮೊದಲನೆಯ ಕವಲು ರಾಜರ ರಾಜಸ್ಥಾನದಲ್ಲಿ. ರಾಜರ ಆಶ್ರಯದಲ್ಲಿ ಕಸಿಗೊಂಡ, ವಿಶೇಷವಾಗಿ ಸಂಕೇತ ಪ್ರಧಾನವಾದ ನೃತ್ಯನಾಟಕ. ಇನ್ನೊಂದು ಕವಲು ಜನತೆಯ ಆಸರೆ ಪಡೆದು, ಇಂದಿನ ಯಕ್ಷಗಾನದ ಮೂಲರೂಪವಾದ ನೃತ್ಯ ಗೀತ ಪ್ರಧಾನವಾದ 'ಆಟ'ಗಳನ್ನು ಬೆಳೆಯಿಸಿತು. ದಕ್ಷಿಣ ಭಾರತದ ಪ್ರಾಚೀನ ದ್ರಾವಿಡ ದೇಶದಲ್ಲಿ, ಅದರ ಕೇಂದ್ರ ಸ್ಥಾನವಾದ ಕನ್ನಡ ನಾಡಿನಲ್ಲಿ ನಾಟಕ ರೂಪ ಕಡೆಪಕ್ಷ ಕ್ರಿಸ್ತಶಕದ ಮೊದಲ ವರ್ಷಗಳಿಂದ ಬೆಳೆಯಿತೆಂಬುದೂ, ರಾಜರ ಆಸ್ಥಾನಗಳ ಶ್ರೀಮಂತರ ಹಾಗೂ ಬೀದಿಯ ಬಡವರ ಮನಸ್ಸನ್ನು ರಂಜಿಸಿ ಅವರಿಗೆ ತಿಳಿವನ್ನು ಮಾಡಲು ಶ್ರಮಿಸಿತೆಂಬುದೂ ಒಪ್ಪುವಂತಹ ಮಾತಾಗಿದೆ.

ಮಹಾರಾಜರ ಪ್ರೋತ್ಸಾಹದಿಂದ ವಿದ್ವಾಂಸರೂ, ರೂಪವಂತರೂ ಸೇರಿ ಕಲೋಪಾಸನೆಗಾಗಿ ಅರಮನೆಗಳಲ್ಲಿ ನಾಟಕಗಳನ್ನು ಆಡಲು ಪ್ರಾರಂಭಿಸಿದರು. ನಾಟಕಗಳು ನಮಗೆ ಗ್ರಂಥರೂಪವಾಗಿ ದೊರೆಯದಿದ್ದರೂ ಅದಕ್ಕೂ ಹಿಂದೆ ಕನ್ನಡ ರಂಗಭೂಮಿ ಜನಸಾಮಾನ್ಯರ ಸ್ವತ್ತಾಗಿ ಬದುಕಿಯೇ ಇತ್ತು. ಆಗಿನ ಕಾಲದ ನಾಟಕಗಳು ಜನತೆಯ ಬಾಯಲ್ಲಿ ಭಾಗವತರ, ದೊಂಬಿದಾಸರ ಬಾಯಿಪಾಠವಾಗಿ ಇದ್ದುಕೊಂಡು ರಂಗದಲ್ಲಿ ಪ್ರದರ್ಶಿತವಾಗುತಿದ್ದವು. ಕ್ರಿ ಶ ೧೫೦೦ ರಲ್ಲಿ ಬರೆದ ನಿಜಗುಣ ಶಿವಯೋಗಿಗಳ 'ವಿವೇಕ ಚಿಂತಾಮಣಿ' ಯ ನಾಲ್ಕನೆ ಪ್ರಕರಣದಲ್ಲಿ ನಾಟಕದಲ್ಲಿ ದಿನದಿನಕ್ಕಭಿನಯಿಸಲ್ತಕ್ಕ ರಸಭಾವ ಸಂವಿಧಾನ ಆಶ್ರಯಗಳೆಂಬ ಚತುರ್ವಿದ ಪ್ರಬಂಧಾಂಶಗಳಂ...... ಎಂಬ ವರ್ಣನೆ ಬರುತ್ತದೆ. ಕ್ರಿ.ಶ. ೧೪೩೦ ರ ಸುಮಾರಿನಲ್ಲಿ ಕುಮಾರವ್ಯಾಸನು ತನ್ನ ಭಾರತದಲ್ಲಿ 'ನಾಡಾಡಿಗಳ ನಾಟಕವದೇ' ಎಂದು ಹೇಳಿರುವುದು ಅಂದು ಪ್ರಚಾರದಲ್ಲಿದ್ದ ನಾಟಕಗಳನ್ನೇ ಉದ್ದೇಶಿಸಿ ಬರೆದಂತಿದೆ.

ಕ್ರಿ.ಶ. ೧೦೪೨ ರ ಸುಮಾರಿನಲ್ಲಿ ರಚಿತವಾಗಿರಬಹುದಾದ ನಾಗವರ್ಮನ ಕರ್ನಾಟಕ ಕಾವ್ಯಾವಲೋಕದಲ್ಲಿ ಉದಾಹರಣೆಯಾಗಿ ಹರ್ಷನ 'ನಾಗಾನಂದ' ನಾಟಕದಿಂದ ಅಲ್ಲದೆ ಕಾಳಿದಾಸನ 'ವಿಕ್ರಮೋರ್ವಶೀಯ' ನಾಟಕದಿಂದ ಉದಾಹರಣೆಯ ಪದ್ಯ ದೃಷ್ಟಾಂತವಾಗಿ ಬಂದಿವೆ. ಅಂದ ಮೇಲೆ ಆಗಲೇ ಕನ್ನಡ ನಾಟಕಗಳ ಅನುವಾದಗಳು ಇದ್ದುವು. ಆಗ ಕನ್ನಡ ನಾಟಕಗಳು ಅಸ್ತಿತ್ವದಲ್ಲಿದ್ದವೆಂದು ಹೇಳಬಹುದು. ಇಷ್ಟೊಂದು ಪ್ರಾಚೀನ ಪರಂಪರೆಯನ್ನು ಉಳಿಸಿಕೊಂಡು ಬಂದ ನಾಟಕ ಸಾಹಿತ್ಯ ಹಂತ ಹಂತವಾಗಿ ಕನ್ನಡ ಸಾಹಿತ್ಯದಲ್ಲಿ ವಿಶೇಷವಾಗಿ ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ತನ್ನ ಪ್ರಬಲತೆ, ವಿಶಿಷ್ಟತೆ ಮೆರೆದ ಮಹತ್ವದ ಸಾಹಿತ್ಯ ಪ್ರಕಾರವಾಗಿ ಇಂದಿಗೂ ತನ್ನ ಮೌಲ್ಯವನ್ನು, ಗಟ್ಟಿತನವನ್ನು ಉಳಿಸಿಕೊಂಡು ಬಂದಿದೆ ಎಂದು ಹೇಳಬಹುದು.

## ಭಾರತದಲ್ಲಿ ವೃತ್ತಿರಂಗಭೂಮಿ

### ಅ. ಬಂಗಾಳದಲ್ಲಿ ಹೊಸ ನಾಟಕಗಳು:

ಕರ್ನಾಟಕದಲ್ಲಿ ಆಧುನಿಕ ರಂಗಭೂಮಿಯ ಪ್ರವೇಶವು ವೃತ್ತಿರಂಗಭೂಮಿಯ ಮೂಲಕವೇ ಆಗುತ್ತದೆ. ಜನಪದ ಮತ್ತು ಸಂಸ್ಕೃತ ರಂಗಭೂಮಿಗಳ ಶ್ರೀಮಂತ ಪರಂಪರೆ ಇರುವ ಭಾರತದಲ್ಲಿ ಆಧುನಿಕತೆಯೆಂಬುದು ತಲೆದೋರಿದ್ದು ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ. ಮೊದಲು ಆಧುನಿಕವೆನಿಸುವ ರಂಗಚಟುವಟಿಕೆಗಳು ಬಂಗಾಳದಲ್ಲಿ ಪ್ರಾರಂಭವಾದವು. ಇದಕ್ಕೆ ಮುಖ್ಯ ಕಾರಣ ಇಂಗ್ಲೀಷ ನಾಟಕಗಳ ಪ್ರದರ್ಶನ. ವ್ಯಾಪಾರಕ್ಕೆಂದು ಬಂದು ಕಲಕತ್ತೆಯಲ್ಲಿ 'ಈಸ್ಟ ಇಂಡಿಯಾ ಕಂಪನಿ' ಸ್ಥಾಪಿಸಿದ ಇಂಗ್ಲೀಷರು ಬಿಡುವಿನ ವೇಳೆಯ ಮನರಂಜನೆಗಾಗಿ ಇಂಗ್ಲೀಷ ನಾಟಕಗಳನ್ನು ನೋಡುವುದಕ್ಕಾಗಿ ತಮ್ಮ ದೇಶದಿಂದ ನಾಟಕ ತಂಡಗಳನ್ನು ಕರೆಸಿದರು. ನಾಟಕಗಳ ಪ್ರದರ್ಶನಕ್ಕಾಗಿ ರಂಗಮಂದಿರಗಳನ್ನು ಕಟ್ಟಿಸಿದರು. ಇಂಥ ಕಟ್ಟಿದ ರಂಗಮಂದಿರದಲ್ಲಿ ನಡೆಯುತ್ತಿದ್ದ ನಾಟಕ ಪ್ರದರ್ಶನಗಳು ಕಲಕತ್ತೆಯಲ್ಲಿಯ ಜನರಿಗೆ ಕುತೂಹಲವನ್ನುಂಟು ಮಾಡಿದವು. ಈ ಮೊದಲು ಇಂಗ್ಲೀಷ ಭಾಷೆ, ವೇಷಕ್ಕೆ ಮರುಳಾಗಿ ಅವರ ಅನುಕರಣೆಗೆ ತೊಡಗಿದ್ದ ಬಂಗಾಲಿಗಳಿಗೆ ಈ ನಾಟಕಗಳು ರಂಗಪರಿಕರಗಳಿಂದ, ವೇಷ ಭೂಷಣಗಳಿಂದ, ರಂಗಮಂದಿರದಲ್ಲಿ ಪ್ರದರ್ಶನಗೊಳ್ಳುವ ಪದ್ಧತಿಯಿಂದ ವಿಶೇಷವೆನಿಸಿದವು, ಆಕರ್ಷಣೀಯವೆನಿಸಿದವು. ಕಲಕತ್ತೆಯ ಲಾಲಬಜಾರ ರಸ್ತೆಯಲ್ಲಿ 'ದಿ ಷೋ ಹೌಸ' ಹೆಸರಿನ ಥೇಟರ್ ತಲೆಯೆತ್ತಿತು. ಇದನ್ನು ನೋಡಿ ನಗರದ ವ್ಯಾಪಾರಿಗಳು ಹಣ ಕೂಡಿಸಿ 'ಕಲಕತ್ತಾ ಥಿಯೇಟರ್' ಎಂಬ ರಂಗಮಂದಿರ ಕಟ್ಟಿಸಿದರು. ಇವೆರಡೂ ರಂಗಮಂದಿರಗಳಲ್ಲಿ ಇಂಗ್ಲೀಷ ನಾಟಕಗಳ ಪ್ರದರ್ಶನ ನಡೆಯುತ್ತಿತ್ತು. ನಾಟಕ ನೋಡುವವರು ಇಂಗ್ಲೀಷ ಅಧಿಕಾರಿಗಳು ಮತ್ತು ಬಂಗಾಳಿ ಶ್ರೀಮಂತರು. ಇತರ ಸಾಮಾನ್ಯ ಮತ್ತು ಮಧ್ಯಮ ವರ್ಗದ ಜನರಿಗೆ ಇಲ್ಲಿ ನಾಟಕಗಳನ್ನು ನೋಡಲು ಅವಕಾಶವಿರಲಿಲ್ಲ. ಇಂಗ್ಲೀಷ ನಾಟಕಗಳನ್ನು ನೋಡುವ ಅದಮ್ಯ ಕುತೂಹಲವಿದ್ದರೂ ನೋಡಲಾಗದ ಬಂಗಾಳಿ ಜನರಿಗಾಗಿ ನಾಟಕ ಬರೆಯಿಸಿ ಆಡಿಸಲು ಪ್ರಯತ್ನಪಟ್ಟವನು ಒಬ್ಬ ರಶಿಯನ್ ಸಾಹಿತಿ ಹೆಸರು ಹಿರೆಶಿಮ ಲೆಬೆಡಾಫ್. ಈತನು ೧೭೯೫ರಲ್ಲಿ 'ಡಿಸ್‌ಗಾಯಿಸ್' ಮತ್ತು 'ಲವ್ ಈಸ್ ಬೆಸ್ಟ ಡಾಕ್ಟರ್' ಎಂಬ ನಾಟಕಗಳನ್ನು ಗೋಕುಲದಾಸ ಎಂಬ ಶಿಕ್ಷಕರಿಂದ ಬಂಗಾಳಿಗೆ ಅನುವಾದವಾಗಲು ಕಾರಣನಾದನು ಮತ್ತು ಕಟ್ಟಿದ ರಂಗಮಂದಿರದಲ್ಲಿ ಅವುಗಳನ್ನು ಪ್ರದರ್ಶಿಸಲು ಏರ್ಪಾಟು ಮಾಡಿದನು. ೨೭-೧೧-೧೭೯೫ ರಂದು ನಾಟಕಗಳು ಪ್ರದರ್ಶನವಾಗಿ ಬಂಗಾಳಿ ಜನಸಾಮಾನ್ಯರ ಪ್ರಶಂಸೆಗೆ ಪಾತ್ರವಾದವು. ಭಾರತೀಯ ಭಾಷೆಯಲ್ಲಿ ಮೊಟ್ಟ ಮೊದಲು ಪ್ರಯೋಗಗೊಂಡ ನಾಟಕಗಳು ಎಂಬ ಕಾರಣಕ್ಕೆ( ೨೭-೧೧-೧೭೯೫( ಈ ದಿನವನ್ನು ಆಧುನಿಕ ಭಾರತೀಯ ರಂಗಭೂಮಿಯ ಜನ್ಮದಿನವೆಂದು ಹೇಳಲಾಗುವುದು. ಇದಾದ ಮೇಲೆ ಕ್ರಮೇಣವಾಗಿ 'ಬಂಗಾಳಿ ಆಧುನಿಕ ರಂಗಭೂಮಿ' ಅಸ್ತಿತ್ವಕ್ಕೆ ಬರತೊಡಗಿತು. ೧೮೩೧ ರಲ್ಲಿ ಭವಭೂತಿಯ

‘ಉತ್ತರರಾಮ ಚರಿತೆ’ ನಾಟಕವು ಬಂಗಾಳಿಗೆ ಭಾಷಾಂತರವಾಗಿ ‘ದಿ ಹಿಂದೂ ಥೇಟರ್’ದಲ್ಲಿ ಪ್ರಯೋಗವಾಯಿತು. ಎರಡು ವರ್ಷಗಳ ನಂತರ ಭಾರತಚಂದ್ರ ಅವರ ‘ವಿದ್ಯಾಸುಂದರ’ ನಾಟಕವು ‘ಶ್ಯಾಮ್ ಬಜಾರ ಥೇಟರ್’ದಲ್ಲಿ ಪ್ರಯೋಗವಾಯಿತು ಈ ನಾಟಕವು ಸುಮಾರು ೨ ಲಕ್ಷ ರೂಪಾಯಿ ವೆಚ್ಚದಲ್ಲಿ ನಿರ್ಮಾಣವಾದ ಭವ್ಯ ರಂಗಸಜ್ಜಿಕೆಯಲ್ಲಿ ಪ್ರದರ್ಶನವಾಯಿತು ಇಲ್ಲಿಂದಲೆ ಬಂಗಾಳಿ ಆಧುನಿಕ ರಂಗಚಟುವಟಿಕೆಗಳಿಗೆ ಹೊಸ ಚಾಲನೆ ಸಿಕ್ಕಿತೆಂದು ಇತಿಹಾಸ ವಿವರಿಸುತ್ತದೆ.

ರಂಗಭೂಮಿಯು ಮನರಂಜನೆಯ ಹೊಸ ಮಾಧ್ಯಮವಾಗಿ ಬಂಗಾಳಿಯಲ್ಲಿ ಕ್ರಿಯಾಶೀಲವಾಗುತ್ತಿರುವಂತೆಯೇ ಪ್ರೇಕ್ಷಕರ ಪ್ರವೇಶ ಒಂದು ಸಮಸ್ಯೆಯಾಗಿ ತಲೆದೋರಿತು. ಪ್ರೇಕ್ಷಕರ ದಟ್ಟಣೆ ತಪ್ಪಿಸುವುದಕ್ಕಾಗಿ ‘ಗೌರವ ಪಾಸ್’ ವಿತರಿಸುವ ಪದ್ಧತಿ ಜಾರಿಗೆ ಬಂದಿತು. ನಾಟಕ ಪ್ರದರ್ಶಿಸುವ ತಂಡಕ್ಕೆ, ಕಲಾವಿದರಿಗೆ ಪರಿಚಯವಿದ್ದವರಿಗೆ ಮಾತ್ರ ನಾಟಕ ನೋಡಲು ಅವಕಾಶ ಸಿಗತೊಡಗಿತು. ಈ ಕ್ರಮದಿಂದಾಗಿ ಸಾಮಾನ್ಯ ಪ್ರೇಕ್ಷನು ರಂಗಮಂದಿರದ ಹೊರಗೆ ಉಳಿದನು. ಇದು ಕೂಡ ಒಂದಿಷ್ಟು ಕಿರಿಕಿರಿಯಾಯಿತು. ಈ ಸಮಸ್ಯೆಯನ್ನು ಮನಗಂಡು ಗಿರೀಶಚಂದ್ರ ಘೋಷರು ನಾಟಕ ಪ್ರದರ್ಶನವನ್ನು ಶಿಸ್ತಿಗೆ ಒಳಪಡಿಸುವುದಕ್ಕಾಗಿ ೧೮೭೨ ರಲ್ಲಿ ‘ರಾಷ್ಟ್ರೀಯ ರಂಗಭೂಮಿ’ ಹೆಸರಿನ ತಂಡವನ್ನು ಹುಟ್ಟು ಹಾಕಿದರು. ಇದಕ್ಕೆ ಮುಂಬಯಿಯಲ್ಲಿದ್ದ ಪಾರಸಿ ಜನರ ರಂಗಚಟುವಟಿಕೆಗಳು ಪ್ರೇರಣೆಯಾದವು. ಬಡವ ಬಲ್ಲಿದ ಎಂಬ ಭೇದವಿಲ್ಲದೆ ದುಡ್ಡು ಕೊಟ್ಟು, ಟಿಕೇಟು ಪಡೆದು ನಾಟಕ ನೋಡಲು ಬರುವವರಿಗೆ ‘ರಾಷ್ಟ್ರೀಯ ರಂಗಭೂಮಿಯ’ಯಲ್ಲಿ ಅವಕಾಶ ಸಿಕ್ಕಿತು. ಬಹುಶಃ ಇದುವೇ ಬಂಗಾಳಿ ವೃತ್ತಿರಂಗಭೂಮಿಯ ಮೊದಲ ಸಂಸ್ಥೆಯೆನ್ನಬಹುದು. ಸುಸಜ್ಜಿತ ರಂಗಮಂದಿರ, ಆಕರ್ಷಕ ರಂಗಪರಿಕರಗಳು, ನಿಯಮಿತ ಅವಧಿಯ ಪ್ರದರ್ಶನಗಳು, ಅನುಭವಿ ರಂಗಕರ್ಮಿ ಕಲಾವಿದರ ಸಂಘಟನೆ, ಅವರ ಯೋಗ್ಯತೆಗೆ ತಕ್ಕಂತೆ ಸಂಬಳ-ಇಂಥ ಶಿಸ್ತುಬದ್ಧ ವ್ಯವಹಾರಿಕ ಚಟುವಟಿಕೆಗಳಿಂದ ಬಂಗಾಳದಲ್ಲಿಯ ಆಧುನಿಕ ರಂಗಭೂಮಿಯು ವೃತ್ತಿರಂಗಭೂಮಿಯಾಗಿ ಬೆಳೆಯತೊಡಗಿತು. ದಿ ಸ್ಯಾನ್‌ಸೌಚಿ, ದಿ ಚೌರಂಗಿ ಥೇಟರ, ಓರಿಯೆಂಟಲ್ ಥೇಟರ್, ಬೆಂಗಾಲ್ ಥೇಟರ್, ಗೇರಿಪ್ ಕ್ಲಬ್ ಇತ್ಯಾದಿ ರಂಗಮಂದಿರಗಳು ಬಂಗಾಳಿ ರಂಗಭೂಮಿಯ ಬೆಳವಣಿಗೆಗೆ ಸ್ಫೂರ್ತಿ ಕೇಂದ್ರಗಳಾದವು. ರಾಮನಾರಾಯಣ ತಾರಕರತ್ನ, ಮೈಕಲ್ ಮಧುಸೂದನದತ್ತ, ಅಪರೇಶ ಮುಖರ್ಜಿ, ಜ್ಯೋತೀಂದ್ರನಾಥ ಠಾಕೂರ್, ರವೀಂದ್ರನಾಥ ಠಾಕೂರ್, ಮನಮೋಹನ ಘೋಷ್ ಮೊದಲಾದ ಸಾಹಿತಿಗಳು ನಾಟಕಗಳನ್ನು ಬರೆದರು. ಭುವನಮೋಹನಯೋಗಿ, ಕೇಶವಚಂದ್ರ ಗಂಗೂಲಿಯಂಥ ಪೋಷಕರು ಧಾರಾಳವಾಗಿ ಹಣ ಖರ್ಚು ಮಾಡಿದರು. ಇವರೆಲ್ಲರ ಪ್ರಯತ್ನದಿಂದ ಬಂಗಾಳಿ ರಂಗಭೂಮಿ ವೈಭವದ ಹಾದಿ ಹಿಡಿಯಿತು.

## ಆ. ಪಾರಸಿ ನಾಟಕ ಕಂಪನಿಗಳು:

ಇಂಗ್ಲೀಷ ನಾಟಕಗಳ ಪ್ರಭಾವದಿಂದಾಗಿ ಬಂಗಾಳಿ ರಂಗಭೂಮಿಯಲ್ಲಿ ಆರಂಭವಾದ ಆಧುನಿಕ ಚಟುವಟಿಕೆಗಳು ಮುಂದೆ ಮಹಾರಾಷ್ಟ್ರಕ್ಕೆ ವಿಸ್ತಾರವಾದವು. ಮಹಾರಾಷ್ಟ್ರದ ಕೇಂದ್ರ ಸ್ಥಳವಾದ ಮುಂಬಯಿಯಲ್ಲಿದ್ದ ಪಾರಸಿಗಳು ಹೊಸ ರಂಗಚಟುವಟಿಕೆಗಳ ಆಕರ್ಷಣೆಯನ್ನು ಅರಿತು ಅದನ್ನೊಂದು ಉದ್ಯೋಗ ಮಾಡಿಕೊಳ್ಳಲು ಮುಂದಾದರು. ಪಾರಸಿ ಜನರು ಅತ್ಯಂತ ಬುದ್ಧಿವಂತರು ಮತ್ತು ವ್ಯಾಪಾರಿ ಮನೋಭಾವದವರು. ಬಂಗಾಳದಲ್ಲಿ ನಡೆದಿದ್ದ ರಂಗಚಟುವಟಿಕೆಗಳನ್ನು ಸೂಕ್ಷ್ಮವಾಗಿ ಗಮನಿಸಿ ಅವುಗಳನ್ನು ಮುಂಬಯಿಯಲ್ಲಿಯೂ ಪ್ರಾರಂಭಿಸಿದರು. ಮುಂಬಯಿಯಲ್ಲಿದ್ದ ಇಂಗ್ಲೀಷ ಅಧಿಕಾರಿಗಳ ಮನರಂಜನೆಗಾಗಿ ಎಲಿಫಿನ್‌ಸ್ಟನ್ ಕಾಲೇಜಿನಲ್ಲಿದ್ದ ಪಾರಸಿ ವಿದ್ಯಾರ್ಥಿಗಳು ಒಂದು ತಂಡ ಕಟ್ಟಿಕೊಂಡು ಶೇಕ್ಸಪಿಯರ್‌ನ ನಾಟಕಗಳನ್ನು ಆಡಿದರು. ಇದಕ್ಕೆ ಉತ್ತಮ ಪ್ರತಿಕ್ರಿಯೆ ಸಿಗಲು ಪಾರಸಿ ತರುಣರು ನಾಟಕ ಕಲೆಯನ್ನು ಲಾಭದಾಯಕ ಉದ್ಯೋಗ ಮಾಡಿಕೊಳ್ಳಲು ಸಂಘಟಿತರಾದರು. ಪಾರಸಿಗಳ ರಂಗಕೌಶಲ್ಯದ ಬಗ್ಗೆ ಯಾಜ್ಞಿಕರು ಹೀಗೆ ಬರೆದಿರುವರು. 'ಪಾರಸಿಗಳು ರಂಗಕಲೆಯಲ್ಲಿ ತುಂಬಾ ಪ್ರವೀಣರು ಅಲ್ಲದೆ ರಂಗಕಲಾಕೌಶಲ್ಯದ ಸಂಪನ್ಮೂಲರಾಗಿದ್ದರು. ವೈಭವಪೂರ್ಣ ರಂಗಸಜ್ಜಿಕೆಗಾಗಿ ಧಾರಾಳವಾಗಿ ಹಣ ವೆಚ್ಚ ಮಾಡಲು ಎಂದೂ ಹಿಂದೆ ಮುಂದೆ ನೋಡಿದವರಲ್ಲ. ಅಲ್ಲದೆ ಪರ್ಶಿಯನ್, ಸಂಸ್ಕೃತ ಭಾಷೆಗಳಲ್ಲಿಯ ದಂತಕಥೆ, ಮಹಾಕಾವ್ಯಗಳನ್ನು, ಇಂಗ್ಲೀಷ ಕಥೆ- ಕಾದಂಬರಿ-ಪ್ರಹಸನಗಳನ್ನು, ಮಧ್ಯಕಾಲೀನ ಐತಿಹ್ಯಗಳನ್ನು ಹಾಗೂ ಬೇರೆ ಬೇರೆ ಸಾಮಾಜಿಕ ಸಮಸ್ಯೆಗಳನ್ನು ಬಳಸಿ ಕಥಾವಸ್ತುವಿನ ಬಗೆಗೆ ವಿಚಾರಕ್ಕೆ ಹೊಳೆದ ಏನೆಲ್ಲ ಸಾಧ್ಯತೆಗಳನ್ನು ಸೂರೆಗೈದು ರಂಗದ ಮೇಲೆ ನಾಟಕಗಳ ವ್ಯಾಪಕವಾದ ಹೊಸ ಲೋಕವನ್ನೇ ತೆರೆದರು. ಭಾರತದ ತುಂಬ ಸಂಚರಿಸುವುದರ ಮೂಲಕ ವೈಭವಪೂರ್ಣ ದೃಶ್ಯ ಹಾಗೂ ವೈವಿಧ್ಯಪೂರ್ಣ ಅಭಿನಯಗಳು ಸಮಸಮವಾಗಿ ಪ್ರದರ್ಶನಗೊಳ್ಳಬೇಕಾದ ವಿಧಾನಗಳನ್ನು ಪ್ರಚಾರಪಡಿಸಿದರು.'[೧೭] ಪಾರಸಿ ಜನರ ಉದ್ಯಮಶೀಲತೆಯಿಂದ ರಂಗಭೂಮಿ ಉದ್ಯಮವಾಗಿ ಪರಿಣಮಿಸಿತು. ಬಂಡವಾಳ ಹೂಡುವುದು, ಕಲಾವಿದರನ್ನು ಸಂಘಟಿಸುವುದು, ಭವ್ಯ ಮತ್ತು ಆಕರ್ಷಕ ರಂಗಸಜ್ಜಿಕೆ ನಿರ್ಮಿಸುವುದು, ರಂಗತಂತ್ರದ ಮೂಲಕ ಚಮತ್ಕಾರಗಳನ್ನು ತೋರಿಸುವುದು, ನಾಟಕಗಳನ್ನಾಡಿ ಲಾಭ ಗಳಿಸಲು ಊರಿಂದೂರಿಗೆ ಸಂಚರಿಸುವುದು–ಇಂಥ ಚಟುವಟಿಕೆಗಳಿಂದ ರಂಗಕಲಾವಿದರ ಗುಂಪೊಂದು 'ನಾಟಕ ಕಂಪನಿ' ಎಂಬ ಅನ್ವರ್ಥಕ ಹೆಸರನ್ನು ಪಡೆಯಿತು. ಓಲ್ಡ ಪಾರ್ಸಿ ಥಿಯೇಟ್ರಿಕಲ್ ಕಂಪನಿ, ಕ್ಯಾರಾಥಿಯನ್ ಕಂಪನಿ, ದಿ ಅಲೆಕ್ಸಾಂಡ್ರಾ ಕಂಪನಿ, – ಈ ಕಂಪನಿಗಳು ಭಾರತದ ತುಂಬ ಸಂಚರಿಸಿ ನಾಟಕಗಳನ್ನು ಆಡಿದವು. ಆಯಾ ಪ್ರದೇಶದಲ್ಲಿಯ ಆಧುನಿಕ ರಂಗಚಟುವಟಿಕೆಗಳಿಗೆ ಪ್ರೇರಣೆಯಾದವು.

ಭಾರತೀಯ ಆಧುನಿಕ ವೃತ್ತಿರಂಗಭೂಮಿಯ ಪ್ರಾರಂಭ ಹಾಗೂ ಪ್ರಗತಿಯ ಶ್ರೇಯಸ್ಸೆಲ್ಲ ಪಾರ್ಸಿಗಳಿಗೇ ಸಲ್ಲಬೇಕು. ಹಾಗೆಯೆ ಅದರ ಇಳಿಮುಖದ ಅಪಯಶಸ್ಸು ಕೂಡ ಅವರಿಗೆ ಸಲ್ಲುತ್ತದೆ. ಪಾರ್ಸಿಗಳಿಗೆ ಧನಸಂಪಾದನೆಯೇ ಮುಖ್ಯವಾಗಿದ್ದರಿಂದ ರಂಗಕಲೆಯ ಸೇವೆ ಗೌಣವಾಯ್ತು. ಪ್ರೇಕ್ಷಕರನ್ನು ಆಕರ್ಷಿಸಲು ಹೊರಟ ಇವರ ವ್ಯವಹಾರಿಕ ನಿಲುವಿಗೆ ರಂಗಭೂಮಿಯು ಬಣ್ಣ-ಬೆಳಕುಗಳ ಮಾಯಾಲೋಕವಾಗಿ ಪರಿಣಮಿಸಿತು. ನಾಟಕವು ನೃತ್ಯ-ಸಂಗೀತ-ಅಭಿನಯ ಮತ್ತು ಮಾತಿನ ಮೂಲಕ ಸಾಧಿಸುವ ಕಲಾಕೃತಿ ಎಂಬುದು ಸಿದ್ಧಗೊಳ್ಳದೆ ನಾಟಕದ ಅಂತರಂಗ ಪ್ರೇಕ್ಷಕರನ್ನು ಸ್ಪಂದಿಸಲಿಲ್ಲ. 'ಈ ಕಂಪನಿಗಳು ಒಂದು ಬಗೆಯ ವಾಸ್ತವತೆಯನ್ನು ರಂಗದ ಮೇಲೆ ಪ್ರದರ್ಶಿಸಲು ಹಠ ತೊಟ್ಟಂತಿದ್ದವು. ಈ ಮಾತು ಇಂದು ಸಾಮಾಜಿಕ ನಾಟಕಗಳ ಈ ಕಾಲದಲ್ಲಿ ಸ್ವಲ್ಪ ವಿಚಿತ್ರವೆಂದು ತೋರಬಹುದಾರೂ ನಿಜವಾಗಿದೆ. ನಾಟಕವು ಪೌರಾಣಿಕವಾಗಿದ್ದು ಅತಿವಾಸ್ತವ ಘಟನೆಗಳಿಂದ ತುಂಬಿಕೊಂಡಷ್ಟು ಪ್ರದರ್ಶನದ ವಾಸ್ತವತೆಗೆ ಆಹ್ವಾನವಾಗುತ್ತಿತ್ತು. 'ಅಭಿಮನ್ಯುವಧೆ' ಪ್ರಸಂಗದಲ್ಲಿ ಜಯದ್ರಥನ ರುಂಡ ಪ್ರೇಕ್ಷಕರ ಕಣ್ಣಿಗೆ ಕಾಣುವಂತೆ ಅವನ ತಂದೆಯ ಕೈಯಲ್ಲಿ ಹೋಗಿ ಬೀಳುವುದನ್ನೆ ತೋರಿಸಲಾಗುತ್ತಿತ್ತಂತೆ. ನಾಟಕ ಆಧುನೀಕರಣದ ಪ್ರಮುಖ ಅಂಶವೆಂದರೆ ಅತಿವಾಸ್ತವದ ವಾಸ್ತವೀಕರಣವಾಗಿದೆ. ಸಂಕೇತ ಕಲೆಯನ್ನು ಆಶ್ರಯಿಸಿದ ರಂಗಭೂಮಿಯಲ್ಲಿ ಇಂಥ ಚಮತ್ಕಾರಗಳಿಗೆ ಅವಕಾಶವಿರುವದಿಲ್ಲ. ನಾಟಕದ ಶಬ್ದ ಮತ್ತು ನಟರ ರಂಗಕ್ರಿಯೆ ಇವುಗಳ ಸಮನ್ವಯದಲ್ಲಿ ರಂಗಭೂಮಿ ಸೃಷ್ಟಿಯಾಗಬೇಕು. ಆದರೆ ಈ ಕಂಪನಿಗಳು ಯಾಂತ್ರಿಕ ಚಮತ್ಕಾರಗಳ ಮೂಲಕವಾಗಿ ಸೃಷ್ಟಿಸಲು ಪ್ರಯತ್ನಿಸಿದವು'[೧೮] ಇವುಗಳ ಆಕರ್ಷಣೆಯಿಂದಾಗಿಯೇ ಮಹಾರಾಷ್ಟ್ರ, ಕರ್ನಾಟಕದಲ್ಲಿ ವೃತ್ತಿರಂಗಭೂಮಿ ಅವತರಿಸಿತು. ರಂಗಭೂಮಿಯ ವೈಭವ ಪರಂಪರೆ ಪ್ರಾರಂಭವಾಯಿತು. ಬಾಲಿವಾಲಾ ಅವರ ಕಂಪನಿಯ 'ಇಂದ್ರಸಭಾ' ನಾಟಕವು ಕರ್ನಾಟಕದಲ್ಲಿ ತುಂಬ ಜನಪ್ರಿಯವಾಗಿತ್ತು.

**ಇ. ಮರಾಠಿ ನಾಟಕ ಕಂಪನಿಗಳು:**

ಕರ್ನಾಟಕ ಮತ್ತು ಮಹಾರಾಷ್ಟ್ರ ರಂಗಭೂಮಿಗಳ ಸಂಬಂಧಕ್ಕೆ ದೀರ್ಘವಾದ ಇತಿಹಾಸವಿದೆ. ಕರ್ನಾಟಕ ಜನಪದ ರಂಗಭೂಮಿಯಿಂದ ಪ್ರೇರಣೆ ಪಡೆದು ಮರಾಠಿ ಆಧುನಿಕ ರಂಗಭೂಮಿ ಅಸ್ತಿತ್ವಕ್ಕೆ ಬಂದರೆ ಮರಾಠಿ ವೃತ್ತಿರಂಗಭೂಮಿಯಿಂದ ಪ್ರೇರಣೆ ಪಡೆದು ಕರ್ನಾಟಕ ವೃತ್ತಿರಂಗಭೂಮಿ ಅವತರಿಸಿತು. ಕನ್ನಡ ಕರಾವಳಿ ಪ್ರದೇಶದ ಕರ್ಕಿ ಭಾಗವತ ಮೇಳವು ೧೮೪೩ರಲ್ಲಿ ಸಾಂಗಲಿ ಸಂಸ್ಥಾನಕ್ಕೆ ಭೇಟಿ ನೀಡಿ ದೊರೆ ಚಿಂತಾಮಣರಾವ ಪಟವರ್ಧನರ ಆಸ್ಥಾನದಲ್ಲಿ 'ದಶಾವತಾರ' ಆಟವನ್ನು ಪ್ರದರ್ಶಿಸಿತು. ಇದನ್ನು ನೋಡಿ ಮೆಚ್ಚಿಕೊಂಡ ಪಟವರ್ಧನರು ಆಸ್ಥಾನದಲ್ಲಿ ಕರಣಿಕರಾಗಿದ್ದ ವಿಷ್ಣುದಾಸ ಭಾವೆ ಅವರಿಗೆ ಮರಾಠಿಯಲ್ಲಿ ಅಂಥ ನಾಟಕವನ್ನು ಬರೆಯಲು ಹೇಳಿದರು. ಭಾವೆ, ನಾಟಕ, ಸಂಗೀತ, ಸಾಹಿತ್ಯಕಲೆಗಳಲ್ಲಿ ಚತುರರಾಗಿದ್ದರು. ಕುಶಲ ಕಲಾವಿದರೂ ಆಗಿದ್ದರು. ದೊರೆಯ ಆಜ್ಞೆಯ ಮೇರೆಗೆ ಅವರ

'ಸೀತಾಸ್ವಯಂವರ' ನಾಟಕವನ್ನು ರಚಿಸಿದರು. ಸ್ವತ: ತಾವೇ ನಿರ್ದೇಶಿಸಿ ಪ್ರಯೋಗಿಸಿದರು. ಚಿಂತಾಮಣರಾವ ಪಟವರ್ಧನ ಹಾಗೂ ಸಾಂಗಲಿ ಸಂಸ್ಥಾನದ ರಸಿಕರು ನಾಟಕ ನೋಡಿ ಮೆಚ್ಚಿಕೊಂಡರು. ಈ ನಾಟಕದಿಂದಲೇ ಮರಾಠಿ ರಂಗಭೂಮಿಯ ಉದ್ಘಾಟನೆ ಆಯಿತೆಂದು ಅಲ್ಲಿಯ ವಿದ್ವಾಂಸರ ಅಭಿಪ್ರಾಯ.

ಭಾವೆ ಅವರು ತಮ್ಮ ನಾಟಕಕ್ಕೆ ದೊರೆತ ಪ್ರೇರಣೆಯನ್ನು ಮುಕ್ತ ಮನಸ್ಸಿನಿಂದ ಕೊಂಡಾಡಿದ್ದಾರೆ. ನಾಟಕದ ಆರಂಭದಲ್ಲಿ ಬರುವ ಗಣಸ್ತುತಿಯಲ್ಲಿ ಅವರು 'ಕರನಾಟಕ ನಾಟಕ ಕರಿ ಅಸಿ ಈಶ ಆಜ್ಞೆ ವಾಟೆ ಮಮ ಗಜಾನನ' ಎಂದು ಗಣೇಶನನ್ನು ಸ್ತುತಿಸಿದ್ದಾರೆ. ಈ ಸ್ತುತಿ ಅವರ ಇತರ ನಾಟಕಗಳಲ್ಲಿಯೂ ಬರುತ್ತದೆ. ಕನ್ನಡ ರಂಗಭೂಮಿಯ ಬಗೆಗೆ ಭಾವೆ ಅವರಿಗಿದ್ದ ಗೌರವ ಭಾವನೆ ೧೮೮೫ ರಲ್ಲಿ ಬದಲಾದುದು ಕಂಡುಬರುತ್ತದೆ. ಅದೇ ವರ್ಷ ಪ್ರಕಟವಾದ ಅವರ 'ನಾಟ್ಯ ಕವಿತಾ ಸಂಗ್ರಹ' ಎಂಬ ಕೃತಿಯಲ್ಲಿ ಕನ್ನಡ ರಂಗಭೂಮಿಯ ಬಗೆಗೆ ತಾತ್ಸಾರದಿಂದ ಬರೆದಿದ್ದಾರೆ. ಅದರಲ್ಲಿ 'ಸೀತಾ ಸ್ವಯಂವರ' ನಾಟಕದ ಜನನ ವೃತ್ತಾಂತ ಬರೆಯುತ್ತಾ 'ಕರ್ನಾಟಕದಲ್ಲಿ ಕೆಲವು ನಾಟಕಗಳು ಜರುಗುತ್ತಿದ್ದವು. ಆದರೆ ಅವುಗಳಲ್ಲಿ ಮನರಂಜನೆ ಎಂಬುದು ಎಳ್ಳಷ್ಟು ಇರಲಿಲ್ಲ. ಪಾತ್ರಗಳ ವೇಷ ತೀರ ಕಳಪೆ ಆಗಿತ್ತು. ಹಾಡಲು ಬರಲಿ ಬಿಡಲಿ ಪಾತ್ರಧಾರಿಗಳೆಲ್ಲ ಹಾಡಿ ಕುಣಿಯಲೇಬೇಕು. ಈ ಆಟಗಳು ಹಳ್ಳಿಯ ಹುಂಬರಿಗೆ ಮಾತ್ರ ರಂಜಿಸುತ್ತಿದ್ದವು. ಆದರೆ ನಗರದ ಸುಸಂಸ್ಕೃತ ಜನರಿಗೆ ಆನಂದದ ಬರಲು ಕಿರಿ ಕಿರಿ ಎನಿಸುತ್ತಿದ್ದವು.[೨೯] ಕನ್ನಡ ಭಾಗವತ ಆಟಗಳು ಅಸ್ತವ್ಯಸ್ತ ಹಾಗೂ ಭೀಭತ್ಸವಾಗಿದ್ದವೆಂದು ಭಾವೆ ಬರೆದಿರುವರು.

೧೮೮೫ ರಲ್ಲಿ ಭಾವೆ ಅವರ ನಿಲುವು ಬದಲಾಯಿತು. ತತ್ಪೂರ್ವದಲ್ಲಿ ಕನ್ನಡ ರಂಗಭೂಮಿಯ ಬಗೆಗೆ ಗೌರವಭಾವನೆಯನ್ನೇ ಅವರು ವ್ಯಕ್ತಪಡಿಸಿರುವರು. ಚಿಂತಾಮಣರಾವ ಪಟವರ್ಧನ ಅವರು ರಂಗಭೂಮಿಯ ರಸಿಕರಾಗಿದ್ದರು. ಅವರು ಕನ್ನಡ ಬಯಲಾಟಗಳನ್ನು ಅವಕಾಶ ಸಿಕ್ಕಾಗಗೆಲ್ಲಾ ನೋಡಿ ಸಂತೋಷಪಡುತ್ತಿದ್ದರೆನ್ನಲು ಅವರ ದಿನಚರಿಯ ಪುಟಗಳೇ ಸಾಕ್ಷಿ ನುಡಿಯುತ್ತವೆ. ಕನ್ನಡ ರಂಗಭೂಮಿಯ (ದಶಾವತಾರ ಆಟಗಳ) ರಸಿಕರಾಗಿದ್ದ ಭಾವೆ ಅವರು 'ಕನ್ನಡ ಬಯಲಾಟವನ್ನು ಸುಧಾರಿಸಿ ಮರಾಠಿಯಲ್ಲಿ ನಾಟಕ ಬರೆಯಲು ಸೂಚಿಸಿದರು' ಎಂದು ಹೇಳುವ ಭಾವೆ ಅವರ ನಿಲುವನ್ನು ಮರಾಠಿ ರಂಗಭೂಮಿಯ ಇತಿಹಾಸ ಬರೆದ ಶ್ರೀ. ನಾ. ಬನಹಟ್ಟಿ ಅವರು ಪ್ರಶ್ನಿಸಿದ್ದಾರೆ. ಇಷ್ಟೊಂದು ಅವಾಸ್ತವ, ಭೀಭತ್ಸದಾಯಕವಾಗಿದ್ದ ನಾಟಕ ಮರಾಠಿಯಲ್ಲಿ ರೂಪುಗೊಳ್ಳಬೇಕೆಂಬ ಬುದ್ಧಿ ಶ್ರೀಮಂತರಿಗೆ ಹೇಗೆ ಹೊಳೆಯಿತೋ? ಉತ್ತಮಾಂಶಗಳಿಲ್ಲದ ಕಥೆಯನ್ನು ತಮ್ಮ ಭಾಷೆಯಲ್ಲಿ ಬರಬೇಕೆಂದು ಏಕೆ ವಿಚಾರಿಸಿದರೋ?[೩೦] ಎಂದು ಅನುಮಾನ ವ್ಯಕ್ತಪಡಿಸಿರುವರು. ಕನ್ನಡ ಬಯಲಾಟದಲ್ಲಿರುವ ಅತಿರೇಕಗಳನ್ನು ಕಡಿಮೆ ಮಾಡಿ ಅವುಗಳಲ್ಲಿ ಸುಧಾರಣೆ ತಂದಿರಬಹುದು. ಆದರೆ ರಸಿಕರ ಮನಸ್ಸನ್ನು ಗೆಲ್ಲುವ, ಸ್ವೀಕೃತ ಅಂಶ ಮೂಲದಲ್ಲಿ ಇರಲೇಬೇಕು ಎಂದು ಬನಹಟ್ಟಿ ಅವರು ಅಭಿಪ್ರಾಯಪಡುತ್ತಾರೆ.

ಅವರ ಚಿಂತನೆ ಸರಿಯಾದದ್ದು. ಕೂಡ ಭಾವೆ ಅವರು ತಮ್ಮ ಪ್ರಯತ್ನಕ್ಕೆ ಮೆಚ್ಚುಗೆ ದೊರೆಯಲೆಂದು ಈ ರೀತಿ ಬರೆದಿರಬಹುದೇ? ಎಂಬ ಸಂದೇಹ ಕೂಡ ಅವರು ವ್ಯಕ್ತಪಡಿಸಿದ್ದಾರೆ.

ವಿಷ್ಣುಪಂತ ಭಾವೆ ಅವರನ್ನು 'ಮರಾಠಿ ರಂಗಭೂಮಿಯ ಪಿತಾಮಹ' ಎಂದು ಕರೆಯುತ್ತಾರೆ ಭಾವೆ 'ಸಾಂಗಲಿಕರ ನಾಟಕ ಮಂಡಳಿ' ಕಟ್ಟಿದರು. ಮಹಾರಾಷ್ಟ್ರದ ಪ್ರಮುಖ ಪಟ್ಟಣಗಳಲ್ಲಿ ನಾಟಕಗಳನ್ನಾಡಿದರು. ಆ ಮೇಲೆ ಕರ್ನಾಟಕಕ್ಕೂ ಅವರ ಕಂಪನಿ ಬಂದಿತು. ಈ ಸಂದರ್ಭದಲ್ಲಿ ಕೂಡ ಸಾಂಗಲಿ ಸಂಸ್ಥಾನಿಕರು ಕನ್ನಡದ ಭಾಗವತ ಆಟಗಳನ್ನು ನೋಡುತ್ತಿದ್ದರು. ಅವರು ಬರೆದಿದ್ದ ದಿನಚರಿಯ ಪುಟಗಳಲ್ಲಿ ಅಂಥ ಉಲ್ಲೇಖಗಳಿವೆ. 'ಭ-೧೩ ರಬೀಲಾವಲ ಫಾಲ್ಗುಣ ಕು॥ ೧೫ ಸೋಮವಾರ ಬಿದರಳ್ಳಿ-ರಾತ್ರಿ ರಾಮಾವತಾರಿ ಆಟವನ್ನು ಧರ್ಮಶಾಲೆಯಲ್ಲಿ ಪ್ರದರ್ಶಿಸಲಾಯಿತು. ರಾತ್ರಿ ಹತ್ತು ಗಂಟೆಯವರೆಗೆ ಸಾಗಿತು. 'ಭ-೧೬ ರಬೀಲಾವಲ ಫಾಲ್ಗುಣ ವದ್ಯ ದ್ವಿತಿಯ ಗುರುವಾರ ಮುಕ್ಕಾಂ ಇಟಗಿ ಸಿರಟ್ಟಿ ತುಂಗಭದ್ರಾ ತೀರ. ರಾತ್ರಿ ಇಟಗಿಯಲ್ಲಿ 'ರಾಮಾವತಾರಿ ಆಟವಾಡಿದರು'.

ಇಂಥ ಅನೇಕ ಉಲ್ಲೇಖಗಳು ಶ್ರೀಮಂತರ ದಿನಚರಿಯಲ್ಲಿ ದೊರೆಯುತ್ತವೆ.[೨೧] ಪಟವರ್ಧನ ಸರಕಾರರಿಗೆ ಕನ್ನಡ ಬಯಲಾಟಗಳ ಬಗೆಗಿದ್ದ ಪ್ರೀತಿ. ಅಭಿಮಾನ ಮೇಲಿನ ಉಲ್ಲೇಖಗಳಿಂದ ತಿಳಿದು ಬರುತ್ತದೆ. ಅವರು ಗದಗ, ಕೊಪ್ಪಳ ಮುಂತಾದ ಭಾಗಗಳಿಗೆ ಪ್ರವಾಸಕ್ಕೆ ಹೋದಾಗ ಅಲ್ಲಿಯ ಹಳ್ಳಿಗಳಲ್ಲಿ ಮುಕ್ಕಾಂ ಮಾಡಿದಾಗ ಬಯಲಾಟಗಳನ್ನು ನೋಡುತ್ತಿದ್ದರು. ನೋಡಿ ಮೆಚ್ಚಿಕೊಂಡು ಬಹುಮಾನ ಕೊಡುತ್ತಿದ್ದರು. ಭಾವೆ ಅವರ 'ಸೀತಾ ಸ್ವಯಂವರ' ದಶಾವತಾರಿ ಆಟಗಳನ್ನೇ ಹೋಲುತ್ತಿತ್ತೆಂದು, ಮರಾಠಿ ರಂಗಭೂಮಿಯ ಆರಂಭದ ನಾಟಕಗಳು ಕರ್ನಾಟಕ ಯಕ್ಷಗಾನಗಳ ಸುಧಾರಿತ ಆವೃತ್ತಿಯಂತಿದ್ದವೆಂದು ಮರಾಠಿ ರಂಗಭೂಮಿಯ ಇತಿಹಾಸ ಹೇಳುತ್ತದೆ.[೨೨]

**ಈ. ಭಾವೆ ಪೂರ್ವದ ಕನ್ನಡ-ಮರಾಠಿ ರಂಗಸಂಬಂಧ**

೧೮೪೨ ರಲ್ಲಿ ಮೊದಲ ಸಲ ಕರ್ನಾಟಕ ಭಾಗವತ ತಂಡ ಸಾಂಗಲಿಗೆ ಬಂದಿತ್ತೆಂಬ ಅರ್ಥ ಭಾವೆಯವರ ಪ್ರಸ್ತಾವನೆಯಲ್ಲಿದೆ. ಆದರೆ ಭಾವೆಯವರಿಗಿಂತ ಮೊದಲು ಎಷ್ಟೋ ವರ್ಷಗಳ ಹಿಂದೆಯೇ ಮಹಾರಾಷ್ಟ್ರದಲ್ಲಿ ಕನ್ನಡ ನಾಟಕಗಳು ಅಸ್ತಿತ್ವದಲ್ಲಿದ್ದವೆಂಬುದನ್ನು ಗುರುತಿಸಿದಾಗ ಕರ್ನಾಟಕ-ಮಹಾರಾಷ್ಟ್ರಗಳ ರಂಗಸಂಬಂಧಕ್ಕೆ ಇನ್ನೂ ಹೆಚ್ಚಿನ ಪ್ರಾಚೀನತೆ ಒದಗುತ್ತದೆ. 'ಭಾಷಾ ದೃಷ್ಟಿಯಿಂದ ಶಕೆ ಸುಮಾರು ೫೦೦ ರಲ್ಲಿ ಪ್ರಾಕೃತ-ಕಡಿಮೆಯಾಗಿ ಮರಾಠಿ ಸಿದ್ದಗೊಳ್ಳತೊಡಗಿತ್ತು. ಮುಂದೆ ಹದಿಮೂರನೆಯ ಶತಮಾನಕ್ಕೆ ಪ್ರಸಿದ್ಧಿ ಪಡೆಯಿತು. ಆರನೆಯ ಶತಮಾನದ ಸುಮಾರಿಗೆ ಮಹಾರಾಷ್ಟ್ರದಲ್ಲಿ ಮರಾಠಿ ಭಾಷೆಯು ಅಸ್ತಿತ್ವಕ್ಕೆ ಬರತೊಡಗಿದ್ದರೂ ಅವರನ್ನಾಳುವ ಅರಸರು ಮರಾಠಿಗರಾಗಿರಲಿಲ್ಲ. ದಕ್ಷಿಣದವರಾಗಿದ್ದರು. ಅವರ ಸಂಸ್ಕೃತಿಯ ಗಾಢ ಪ್ರಭಾವ ಈ ಸಮಾಜದ ಮೇಲಾಯಿತು. ಆದುದರಿಂದಲೇ ಮಹಾರಾಷ್ಟ್ರ ಅಥವಾ ದಕ್ಷಿಣ ಪ್ರದೇಶಗಳ ಜನಪದ ರಂಗಭೂಮಿಗಳಲ್ಲಿ ಕೇವಲ

ಮೇಲ್ನೋಟದ ಸಾಮ್ಯವಿರದೆ ಅದು ಅಂತರಿಕವಾದುದಾಗಿದೆ. ಕಾರಣ ದಕ್ಷಿಣಾತ್ಯ ಸಂಸ್ಕೃತಿ ಒಂದೇ ರೂಪವಾಗಿ ಬೆಳೆಯಿತು. ಈ ದೃಷ್ಟಿಯಿಂದ ೧೮೪೩ ರಲ್ಲಿ ರಚಿತವಾದ ವಿಷ್ಣುದಾಸ ಭಾವೆಯವರ 'ಸೀತಾಸ್ವಯಂವರ'ವು ಕೇವಲ ಭಾಷಾಭಿನ್ನತೆಯಿಂದ ಮಾತ್ರ ಮರಾಠಿಯ ಮೊದಲ ನಾಟಕವೆಂಬುದನ್ನು ಸಿದ್ಧಪಡಿಸುತ್ತದೆ. ಭಾವೆಯವರಿಗಿಂತ ೧೫೯ ವರ್ಷಗಳ ಮೊದಲೇ ತಂಜಾವರದ ಭೋಸಲೆ ರಾಜರು ಮರಾಠಿಯಲ್ಲಿ ಹಲವಾರು ನಾಟಕಗಳನ್ನು ರಚಿಸಿದ್ದಾರೆ. ಇವುಗಳನ್ನೇ ಮರಾಠಿಯ ಮೊದಲ ನಾಟಕಗಳೆಂದು ಪರಿಗಣಿಸಬಾರದೇಕೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇದಕ್ಕೆ ಶ್ರೀ. ನಾ ಬನಹಟ್ಟಿಯವರು "ತಂಜಾವರ ಮಹಾರಾಷ್ಟ್ರದಿಂದ ಬಹುದೂರದ ನಗರ ಇಲ್ಲಿಯ ನಾಟಕ ಪರಂಪರೆ ಶಿವರಾಯ ಭೋಸಲೆಯವರೊಂದಿಗೆ ನಿಂತಿತು. ಇವು ರಾಜಾಶ್ರಯದ ನಾಟಕಗಳಾಗಿದ್ದು ಸಾಮಾನ್ಯರಿಂದ ದೂರವಿದ್ದವು. ಆದ್ದರಿಂದ ಇವು ಮಹಾರಾಷ್ಟ್ರಕ್ಕೆ ತಲುಪಲಿಲ್ಲ"[೨೬] ಎನ್ನುತ್ತಾರೆ. ಆದರೆ ಈ ತಂಜಾವರ ನಾಟಕಗಳ ಮೇಲೂ ಕನ್ನಡ ಯಕ್ಷಗಾನಗಳ ಪ್ರಭಾವವಾಗಿದ್ದುದನ್ನು ಗಮನಿಸಿದಾಗ ಕರ್ನಾಟಕ ಜನಪದ ರಂಗಭೂಮಿಗಿರುವ ಸುಧೀರ್ಘ ಮತ್ತು ಸಮೃದ್ಧ ಪರಂಪರೆಯ ಅರಿವಾಗುತ್ತದೆ. ಪ್ರಾಚೀನ ಕಾಲದಿಂದಲೂ ಕರ್ನಾಟಕದ ಯಕ್ಷಗಾನ ಮೇಳಗಳು ಅತ್ಯುತ್ತಮ ಪ್ರದರ್ಶನಗಳಿಂದ ಜನಪ್ರಿಯವಾಗಿದ್ದವು. ಇವುಗಳ ಖ್ಯಾತ ನೆರೆ ರಾಜ್ಯಗಳಿಗೂ, ದೂರದ ರಾಜ್ಯಗಳಿಗೂ ಹಬ್ಬಿತ್ತು. ಗೋವಾ ಮಹಾರಾಷ್ಟ್ರ, ಆಂಧ್ರಪ್ರದೇಶಗಳಲ್ಲೆಲ್ಲ ಸಂಚರಿಸುತ್ತಿದ್ದ ಈ ಮೇಳಗಳು ಆಮಂತ್ರಿತ ಸಂಸ್ಥೆಗಳಿಗೆ ಹೋಗಿ ಪ್ರದರ್ಶನಗಳನ್ನು ನೀಡುತ್ತಿದ್ದವು. ನೃತ್ಯ ಸಂಗೀತಾದಿ ಕಲೆಗಳ ಪ್ರೋತ್ಸಾಹಕರಾಗಿದ್ದ ತಂಜಾವರದ ಭೋಸಲೆ ರಾಜರು ಕೂಡ ಈ ಯಕ್ಷಗಾನಗಳನ್ನು ನೋಡಿಯೇ ತಮ್ಮ ಆಸ್ಥಾನ ರಂಗಭೂಮಿಗಾಗಿ ಮರಾಠಿಯಲ್ಲಿ ನಾಟಕಗಳನ್ನು ರಚಿಸಿದರೆನ್ನಲು ಆಧಾರವಿದೆ. ಶಹಾಜಿ ಬೋಸಲೆ (೧೬೮೪-೧೭೧೨) ಬರೆದ ನಾಟಕಗಳ ಪೈಕಿ ಹತ್ತು ಮಾತ್ರ ಉಪಲಬ್ಧವಿವೆ....... ಶಹಾಜಿ ತನ್ನ ನಾಟಕಗಳಲ್ಲಿ ಭರತನ ನಾಟ್ಯಶಾಸ್ತ್ರ, ಯಕ್ಷಗಾನ, ದಶಾವತಾರಗಳ ಅಂಶಗಳನ್ನೂ ಬಳಸಿದ್ದು ನಮಗೆ ಕಾಣುತ್ತದೆ.[೨೭]

ಮರಾಠಿ ರಂಗಪರಂಪರೆಗೆ ಕರ್ನಾಟಕದ ರಂಗಭೂಮಿಯೆ ಕಾರಣವೆಂಬುದು ಸುಸ್ಪಷ್ಟವಾದರೂ ಅದು ಯಾವ ಮಾರ್ಗವಾಗಿ ಮಹಾರಾಷ್ಟ್ರವನ್ನು ಪ್ರವೇಶಿಸಿತು? ಮತ್ತು ಹೇಗೆ ಪ್ರಸಾರವಾಯಿತು? ಎಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಕ್ರಿ.ಶ. ೧೭೧೮ ರ ವೇಳೆಗೆ ಕರ್ನಾಟಕದ ಯಕ್ಷಗಾನ ಗೋವಾದ ಮೂಲಕ ಮಹಾರಾಷ್ಟ್ರಕ್ಕೆ ಪರಿಚಿತವಾಯಿತೆಂದು ಜನಾರ್ಧನ ವಿ. ಕಾಮತರು ಹೇಳುತ್ತಾರೆ.[೨೮] ಅದರ ಹಿನ್ನಲೆ ಹೀಗಿದೆ. ಗೋವಾದಲ್ಲಿಯ ಆಡಿವರೆ ಗ್ರಾಮದ ಶ್ಯಾಮಜಿ ನಾಯಕ ಕಾಳೆ ಎಂಬ ಶಾಂಡಿಲ್ಯಗೋತ್ರದ ಬ್ರಾಹ್ಮಣ ಕ್ರಿ.ಶ. ೧೭೧೮ರಲ್ಲಿ ಕರ್ನಾಟಕ ಪ್ರದೇಶದಲ್ಲಿ ಕೀರ್ತನಕಾರನಾಗಿದ್ದ ಅಲ್ಲಿಂದ ಬರುವಾಗ ಈತ ಅಲ್ಲಿಯ ದಶಾವತಾರ ನಾಟಕವನ್ನು ತನ್ನೊಡನೆ ತಂದನು. ಅಲ್ಲದೆ ಅದನ್ನು ಅಲ್ಲಿಯ ಜನರಿಗೆ 'ಹೊಸ ಮಾದರಿ' ಎಂದು ಪ್ರದರ್ಶಿಸಿದ. ಇವನ ಒಬ್ಬ ಜೊತೆಗಾರ ಶಿವರಾಮ ನಾಯಕ ಗೋಡಬೋಲೆ ಕೂಡ ಕರ್ನಾಟಕದಿಂದಲೇ ಬಂದ ಕೀರ್ತನಕಾರ. ಇಬ್ಬರೂ ಆಡಿವರೆ ಗ್ರಾಮಕ್ಕೆ ಬಂದು

ನೆಲಸಿದ ಮೇಲೆ 'ತಮಾಸಗಿರದ' ಲಿಂಗಾಯಿತ ಪೂಜಾರಿಗಳಿಗೆ (ಗುರವ) ಭಾವೇಶ್ವರ ಮಂದಿರದಲ್ಲಿ ದಶಾವತಾರ ನಾಟಕವನ್ನು ಕಲಿಸಿ ಆಡಿಸಿದರು. ಅಲ್ಲಿಂದ ಈ ಪೂಜಾರಿಗಳು ಇವತ್ತಿಗೂ ಈ ಆಟವನ್ನು ಆಡುತ್ತಾರೆ. ಶ್ಯಾಮಜಿ ನಾಯಕ ಕಾಳೆಯವರು ದಶಾವತಾರ ಪ್ರದರ್ಶನದ ಜನಪ್ರಿಯತೆ ಕುರಿತಾದ ದಾಖಲೆಯೊಂದು ದೊರಕಿದ್ದು ಮೇಲಿನ ಅಭಿಪ್ರಾಯವನ್ನು ದೃಢೀಕರಿಸುತ್ತದೆ. ೧೭೩೬ ರ ಕಾಲಾವಧಿಯಲ್ಲಿ ಆಂಗ್ರೆ ದರಬಾರದ ಶ್ರೀ ಸಂಭಾಜಿ ಆಂಗ್ರೆಯವರ ರಾಜಮುದ್ರೆ ಧರಿಸಿದ ಈ ದಾಖಲೆಯು ವಿವಾಹ ಆಮಂತ್ರಣ ಪತ್ರವಾಗಿದೆ. ಶ್ರೀ ಸಂಭಾಜಿಯವರ ಪುತ್ರ ರಾಜೇಶ್ರೀ ಫಕೀರಜಿ ಆಂಗ್ಲೆ ಇವರ ವಿವಾಹ ಸಮಾರಂಭಕ್ಕೆ ಶ್ಯಾಮಜಿ ನಾಯಕ ಕಾಳೆಯವರು ಪರಿವಾರ ಸಮೇತ ಆಗಮಿಸಿ ಪ್ರದರ್ಶನ ನೀಡಬೇಕೆಂಬುದೇ ಇದರ ವಿಷಯ. ಈ ಆಧಾರಗಳ ಹಿನ್ನೆಲೆಯಲ್ಲಿ ಕರ್ನಾಟಕದ ಯಕ್ಷಗಾನ ಮೊದಲು ಗೋವಾ, ಅನಂತರ ಮಹಾರಾಷ್ಟ್ರಕ್ಕೆ ಪ್ರವೇಶಿಸಿತೆಂದು ಹೇಳಲು ಬರುತ್ತದೆ.

ಹೀಗೆ ಕರ್ನಾಟಕ ಜನಪದ ರಂಗಭೂಮಿಯಿಂದ ಬಹಳಷ್ಟು ಅಂಶಗಳನ್ನು ಸ್ವೀಕರಿಸಿಕೊಂಡು ಮೈದಾಳಿದ ಮರಾಠಿ ರಂಗಭೂಮಿ ವಿಶೇಷವಾಗಿ 'ಸಾಂಗಲಿಕರ ನಾಟಕ ಮಂಡಳಿ'ಯು ಮುಂಬಯಿ ವಾಸ್ತವ್ಯದಲ್ಲಿ ಪಾರ್ಸಿ ಕಂಪನಿಗಳ ಪ್ರಭಾವಕ್ಕೆ ಸಿಕ್ಕು ಕಂಪನಿ ಸ್ವರೂಪ ಪಡೆಯಿತು. ಭಾವೆ ನಂತರದಲ್ಲಿ ತ್ರಿಲೋಕೆಯವರ ಮತ್ತು ಅಣ್ಣಾಸಾಹೇಬ ಕಿರ್ಲೋಸ್ಕರವರ ಪ್ರಯತ್ನದಿಂದ ಜನಪ್ರಿಯ ಮತ್ತು ಜನಾದರಣೀಯ ಕಲಾಕೃತಿಯಾಗಿ ಬೆಳೆಯಿತು. ೧೮೮೨ ರಲ್ಲಿ ಕಿರ್ಲೋಸ್ಕರರ 'ಸಂಗೀತ ಸೌಭದ್ರ' ನಾಟಕದಿಂದ ಮರಾಠಿ ರಂಗಭೂಮಿ ಸಾಹಿತ್ಯಕ್ಕೆ ಹೊಸ ತಿರುವು ಒದಗಿತು. ವಿನಾಯಕ ಜನಾರ್ಧನ ಕೀರ್ತನೆ, ಶ್ರೀಪಾದ ಕೃಷ್ಣ ಕೊಲ್ಹಟಕರ, ಗೋವಿಂದ ಬಲ್ಲಾಳ ದೇವಳ, ರಾಮ ಗಣೇಶ ಗಡಕರಿ, ಕೃಷ್ಣಾಜಿ ಪ್ರಭಾಕರ ಖಾಡಿಲ್ಕರ್, ಮಾಮಾ ವರೇರಕರ್, ಪಿ. ಕೆ. ಅತ್ರೆ, ಹರಿ ನಾರಾಯಣ ಆಪಟೆ ಮುಂತಾದವರ ರಂಗಕೃತಿಗಳಿಂದ ಮರಾಠಿ ರಂಗಭೂಮಿಯ ಕೀರ್ತಿ ಶಿಖರಕ್ಕೇರಿತು.

ಈಚಲಕರಂಜಿಕರ ನಾಟಕ ಮಂಡಳಿ, ಕೊಲ್ಹಾಪೂರಕರ ನಾಟಕ ಮಂಡಳಿ, ಶಾಹೂನಗರವಾಸಿ ನಾಟಕ ಮಂಡಳಿ, ಬಲವಂತ ಸಂಗೀತ ನಾಟಕ ಮಂಡಳಿ, ಯಶವಂತ ಸಂಗೀತ ನಾಟಕ ಮಂಡಳಿ, ಲೋಕಮಾನ್ಯ ನಾಟಕ ಮಂಡಳಿ–ಹೀಗೆ ಅನೇಕ ನಾಟಕ ಕಂಪನಿಗಳು ಮಹಾರಾಷ್ಟ್ರದಲ್ಲಿ ಅಸ್ತಿತ್ವಕ್ಕೆ ಬಂದವು. ಅವು ಸಂಗೀತ ಅಭಿನಯಗಳ ಪ್ರಬುದ್ಧ ಪ್ರದರ್ಶನದಿಂದ ಜನರ ಮನಸ್ಸನ್ನು ಸೂರೆಗೊಂಡವು. ಈ ಕಂಪನಿಗಳು ಕರ್ನಾಟಕದ ಉತ್ತರ ಭಾಗಕ್ಕೆ ಮೇಲಿಂದ ಮೇಲೆ ಬಂದು. ತಿಂಗಳುಗಟ್ಟಲೆ ವಾಸ್ತವ್ಯ ಮಾಡುತ್ತಿದ್ದವು. ಈ ಕಂಪನಿಗಳ ನಾಟಕಗಳನ್ನು ನೋಡಿ 'ಇದ್ದರ ಇರಬೇಕು ಇಂಥ ನಾಟಕಗಳು' ಎಂದು ಜನ ಮೆಚ್ಚಿ ಮಾತನಾಡುತ್ತಿದ್ದರು. ಬಾಲಗಂಧರ್ವ, ಗಣಪತರಾವ್ ಬೋಡಸ, ಮಾಸ್ತರ್ ಕೃಷ್ಣಾ, ಕೇಶವರಾವ ಭೋಸಲೆ, ಗೋವಿಂದರಾವ ಟೇಂಬೆ ಮುಂತಾದ ಮಹಾನ್ ಕಲಾವಿದರ ಕಲಾಕೌಶಲ್ಯವನ್ನು

ನಾವೂ ಅನುಕರಿಸಬೇಕು ಎಂದು ನಮ್ಮವರು ಪ್ರಯತ್ನಿಸುತ್ತಿದ್ದರು. ಇಂಥ ಪರಿಸರದಲ್ಲಿಯೇ ವಾಮನರಾವ ಮಾಸ್ತರರ ರಂಗಭೂಮಿಯ ವ್ಯಕ್ತಿತ್ವ ರೂಪಗೊಂಡಿತು.

**ಉ. ಕರ್ನಾಟಕದಲ್ಲಿ ಕಂಪನಿ ನಾಟಕ ಚಟುವಟಿಕೆಗಳು:**

ಜನಪದ ರಂಗಭೂಮಿಯ ಶ್ರೀಮಂತ ಪರಂಪರೆಯುಳ್ಳ ಕರ್ನಾಕದಲ್ಲಿ ಆಧುನಿಕ ರಂಗಭೂಮಿಯ ಬಹು ಮುಖ್ಯಪ್ರಕಾರವಾದ ಕಂಪನಿ ನಾಟಕ ಚಟುವಟಿಕೆಗಳು ತುಸು ತಡವಾಗಿಯೇ ಆರಂಭವಾದವು. ರಂಗಭೂಮಿಯ ಹೊಸತನವನ್ನು ಬರಮಾಡಿಕೊಳ್ಳವುದಕ್ಕಿಂತ ಬೇರೆ ಸಂಗತಿಗಳೇ ಕಂಪನಿ ನಾಟಕ ಚಟುವಟಿಕೆಗಳಿಗೆ ಮುಖ್ಯ ಪ್ರೇರಣೆಯಾಗಿದ್ದವು. ದೇಶದಲ್ಲಿ ಸ್ವಾತಂತ್ರ್ಯ ಚಳುವಳಿ ಹರಳುಗಟ್ಟುತ್ತಿದ್ದ ಕಾಲದಲ್ಲಿಯೇ ಈ ಪ್ರದೇಶದಲ್ಲಿ ನಾಡುನುಡಿಯ ಅಭಿಮಾನ ಜಾಗೃತಗೊಳ್ಳುತ್ತಿತು. ಇದರ ಹಿಂದೆ ಲೋಕಮಾನ್ಯ ತಿಲಕರ ಸ್ವರಾಜ್ಯ ಚಳುವಳಿಯ ಸಂದೇಶವೂ ಗುಪ್ತಗಾಮಿನಿಯಾಗಿ ಕೆಲಸ ಮಾಡುತ್ತಿತ್ತು. ತಿಲಕರು ಜನಜಾಗೃತಿಗಾಗಿ ನಾಟಕ ಮಾಧ್ಯಮವನ್ನು ಪರಿಣಾಮಕಾರಿಯಾಗಿ ಬಳಸಬೇಕೆಂದು ಮಹಾರಾಷ್ಟ್ರದ ಜನರಿಗೆ ಕರೆ ಕೊಟ್ಟಿದ್ದರು. ಅದರ ಪರಿಣಾಮವಾಗಿ ಅಲ್ಲಿಯ ಅನೇಕ ಕಂಪನಿಗಳು ದೇಶಸೇವೆಯ ದೀಕ್ಷೆ ತೊಟ್ಟು ಕಾರ್ಯಪ್ರವೃತ್ತವಾಗಿದ್ದವು. ಅಣ್ಣಾಸಾಹೇಬ ಕಿರ್ಲೋಸ್ಕರ ಅವರ ನಾಟಕ ಮಂಡಳಿಗೆ ತಿಲಕರೇ ಮಾರ್ಗದರ್ಶಕರಾಗಿದ್ದರು. ಸಾಂಗಲಿಕರ ನಾಟಕ ಮಂಡಳಿ, ಕಿರ್ಲೋಸ್ಕರ ನಾಟಕ ಮಂಡಳಿಗಳು ನಾಟಕಗಳನ್ನಾಡುತ್ತಾ ಕರ್ನಾಟಕದ ಉತ್ತರ ಭಾಗವನ್ನು ಪ್ರವೇಶಿಸಿದವು. ಕನ್ನಡಿಗರು ಮರಾಠಿ ನಾಟಕಗಳ ಹೊಸತನಕ್ಕೆ ಮರುಳಾಗಿ ಕನ್ನಡ ರಂಗಭೂಮಿಯ ಬಗ್ಗೆ ಉದಾಸೀನ ಮನೋಭಾವ ತಾಳಿದರು, ಅಂದಿನ ಈ ಚಿತ್ರವು ಶಾಂತಕವಿಗಳ 'ನಾಟಕಾವಲೋಕನ' ಪದ್ಯದಲ್ಲಿ ಪ್ರಕಟವಾಗಿದೆ.

**ಎಲ್ಲಿ ನೋಡಲು ಕನ್ನಡದ ಭಾಷೆಯಟ್ಟಿಯದ**
**ರಲ್ಲಿಲ್ಲ ಮೃದು ಶಬ್ದವಿಲ್ಲ ಭಾಷಾಸರಣಿ**
**ಯಿಲ್ಲವೈ ಸ್ವಾರಸ್ಯವಿಲ್ಲ ನಾಟಕವಿಲ್ಲ ನಟ ನಟಿಗಳಿಲ್ಲವಿನ್ನು**
**ಇಲ್ಲವವು ಮುಂದಾಗುವ ಆಶೆ ಕೂಡ ಇಲ್ಲ**
**ವಿಲ್ಲವೆಂದೀ ಧಾರವಾಡ ಸೀಮೆಯ ಜನರು**
**ಸೊಲ್ಲಿಸುವ ಕಾಲದಲಿ ಕರ್ನಾಟಕ ನಾಟಕ ಪುಟ್ಟಿದುದು ಕೃತಪುರದೊಳು**

ಕನ್ನಡದ ನೆಲದಲ್ಲಿ ಕನ್ನಡವೇ ಪರಕೀಯವಾಗಿತ್ತು. ಪೇಶವೆಗಳ ಆಡಳಿತದಿಂದ ಮರಾಠಿ ಭಾಷೆ ಎಲ್ಲಡೆ ತನ್ನ ಹೆಚ್ಚುಗಾರಿಕೆ ಸಾಧಿಸಿತ್ತು. ಅಂದು ಈ ಉತ್ತರ ಕರ್ನಾಟಕ ಎಂಬ ಪ್ರದೇಶವು 'ದಕ್ಷಿಣ ಮಹಾರಾಷ್ಟ್ರ' ಎಂದೂ ಮರಾಠಿಗರಿಂದ ಕರೆಯಿಸಿಕೊಳ್ಳುತ್ತಿತ್ತು. ಮುದುವೀಡು ಕೃಷ್ಣರಾಯರು ಬರೆದಂತೆ 'ಓದಿದರೆ ಮರಾಠಿ ಪತ್ರಿಕೆಗಳನ್ನೆ ಓದಬೇಕು. ನೋಡಿದರೆ ಮರಾಠಿ ನಾಟಕಗಳನ್ನೆ ನೋಡಬೇಕು. ಕೇಳಿದರೆ

ಮರಾಠಿ ಹಿಂದೂಸ್ತಾನೀ ಸಂಗೀತವನ್ನೇ ಕೇಳಬೇಕು,[೨೬] ಇಂಥ ಪರಿಸ್ಥಿತಿಯಲ್ಲಿ ನಾಡುನುಡಿಗೆ ಬಲವಾದ ಪೆಟ್ಟು ಬಿದ್ದಿತು. ಮರಾಠೀ ನಾಟಕಗಳ ಆಕರ್ಷಣೆಯ ಎದುರು ಈ ನೆಲದ ಜನರಿಂದ ರಂಗಪ್ರದರ್ಶನಗಳೂ ಆಕರ್ಷಣೆ ಕಳೆದುಕೊಂಡವು. ಈ ಪ್ರದೇಶದ ಸಾಂಸ್ಕೃತಿಕ ಬದುಕಿನ ಈ ನಿರಾಶಾದಾಯಕ ಸನ್ನಿವೇಶವು ನಾಡುನುಡಿಯ ಅಭಿಮಾನವಿದ್ದ ಶಾಂತಕವಿಗಳಿಗೆ ನಿಜಕ್ಕೂ ಸವಾಲಾಗಿ ಪರಿಣಮಿಸಿರಬೇಕು.

**ಕೃತಪುರದೊಳಿರ್ದಾಗ ಕನ್ನಡ ನುಡಿಯ ದು**
**ಸ್ಥಿತಿಯ ನಾಟಕ ನಟನದಿಂ ಕಳೆಯಬೇಕೆಂದು**
**ಸತತಮಲ್ಲಿಯ ಜನಕೆ ಪೇಳ್ದೆವದರಿಂ ಸ್ಫೂರ್ತಿಗೊಂಡವರ ಬಯಕೆಯಂತೆ**
**ಅತಿಶಯಾನಂದದಿಂದತ್ಯ ವಸರವ ಮಾಡಿ**
**ಪ್ರಥಮದೊಳುಷಾಹರಣ ನಾಟಕವ ರಚಿಸಿ ಪ**
**ದ್ಧತಿಯಂತೆ ನಟನವಂ ಕಲಿಸಿದೆವು ನಾಟಕವು ರಂಗಸ್ಥಳಕ್ಕೆ ಬಂದುದು**

ಕನ್ನಡ ನುಡಿಗೆ ಒದಗಿದ್ದ ದುಃಸ್ಥಿತಿಯನ್ನು ನಾಟಕದ ಮೂಲಕವೇ ನಿವಾರಿಸಲು ಶಾಂತಕವಿಗಳು ಪಣ ತೊಟ್ಟರು. ಗದುಗಿನ ಆಂಗ್ಲೋ ವರ್ನ್ಯಾಕುಲರ್ ಶಾಲೆಯಲ್ಲಿ ಶಿಕ್ಷಕರಾಗಿದ್ದ ಅವರು ಅಲ್ಲಿಯ ಜನರಿಗೆ ತಿಳಿಹೇಳಿ. ಅವರಲ್ಲಿ ಕನ್ನಡಾಭಿಮಾನ ಹುಟ್ಟಿಸಿ ಅಭಿನಯದಲ್ಲಿ ಆಸಕ್ತಿ ಇದ್ದವರನ್ನು ಕೂಡಿಸಿ ಮೊದಲಿಗೆ 'ಉಷಾಕಿರಣ' ನಾಟಕ ಬರೆದು ನಿರ್ದೇಶಿಸಿದರು. ಹೀಗೆ ಅವರ ಕನ್ನಡಾಭಿಮಾನದ ಫಲವಾಗಿ 'ಉಷಾಕಿರಣ' ನಾಟಕವು ರಂಗದ ಮೇಲೆ ಪ್ರಯೋಗವಾಯಿತು. 'ಕೃತಪುರ ಕರ್ನಾಟಕ ನಾಟಕ ಮಂಡಳಿ' ತಲೆಯೆತ್ತಿತು. ಇದು ೧೮೭೭ ರ ಸುಮಾರು ಜರುಗಿದ ಘಟನೆ. ಆದರೆ ಇದಕ್ಕೂ ಮೊದಲು ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲೂಕಿನ ಹಲಸಿ ಗ್ರಾಮದಲ್ಲಿ 'ನಾಟಕ ಮಂಡಳಿ'ಯೊಂದು ಪ್ರಾರಂಭವಾಗಿದ್ದುದರ ಉಲ್ಲೇಖ ರಂಗಭೂಮಿ ಚರಿತ್ರೆಯಲ್ಲಿದೆ. ಪಾಂಘ್ರಿ ಆಚಾರ್ಯರರ ನೇತೃತ್ವ ಅಗಳಗಟ್ಟಿ ಶ್ರೀನಿವಾಸ ಕವಿಯ ನಾಟಕಗಳು ತಾಟಗಿ ಹನುಮಂತಾಚಾರ್, ಸಂಡಿಗಿ ಮಂಡಗಿಯಂಥ ಕಲಾವಿದರನ್ನು ಕೂಡಿಸಿಕೊಂಡು ಈ ಮಂಡಳಿ ೧೮೭೫ ರಲ್ಲಿಯೇ ಆರಂಭವಾಗಿರಬೇಕು ಎಂಬುದು ಮುದುವೀಡು ಕೃಷ್ಣರಾಯರ ಅಭಿಪ್ರಾಯ[೨೭]. ಐತಿಹಾಸಿಕವಾಗಿ ಈ ಮಂಡಳಿ ಮೊದಲು ಹುಟ್ಟಿದ್ದರೂ ಇದು ಪ್ರಚಾರಕ್ಕೆ ಬರುವ ಮೊದಲೇ ಭಾಷಾಭಿಮಾನದಿಂದ ಪ್ರೇರಿತರಾಗಿ ಶಾಂತಕವಿಗಳು ಕಟ್ಟಿದ್ದ 'ಕೃತಪುರ ಕರ್ನಾಟಕ ನಾಟಕ ಮಂಡಳಿ' ತನ್ನ ಪ್ರದರ್ಶನಗಳಿಂದ ಪ್ರಸಿದ್ಧಿಗೆ ಬಂದಿತು.

ಕರ್ನಾಟಕದ ಮೊದಲ ಕಂಪನಿಗಳೆಂದು ಗುರುತಿಸುವ ಹಲಸಿ ನಾಟಕ ಮಂಡಳಿಯಾಗಲಿ, ಶಾಂತಕವಿಗಳ ಕೃತಪುರ ನಾಟಕ ಮಂಡಳಿಯಾಗಲಿ ನಿಜವಾದ ಅರ್ಥದಲ್ಲಿ 'ನಾಟಕ ಕಂಪನಿ'ಗಳಾಗಿರಲಿಲ್ಲವೆಂದು ಶ್ರೀರಂಗರು ಅಭಿಪ್ರಾಯಪಡುತ್ತಾರೆ. "ಬೇರೆ ಬೇರೆ ಹುದ್ದೆಗಳಲ್ಲಿರುವ

ಸುಶಿಕ್ಷಿತರು, ಪಂಡಿತರು ಇಲ್ಲಿ ನಟರಾಗಿದ್ದರು. ಇನ್ನೊಂದು ಸಾಮಾನ್ಯವಾಗಿ ನಮ್ಮ ವ್ಯವಸಾಯ ರಂಗಭೂಮಿಯಲ್ಲಿ ಕಂಡುಬರುವ ರಂಗಸಜ್ಜಿಕೆ ಇದರಲ್ಲಿರಲಿಲ್ಲ. ಮೂರನೆಯದಾಗಿ ಸೂತ್ರಧಾರ–ನಟಿಯರಿಂದ ಪ್ರಾರಂಭವಾಗುವ ನಾಟಕಗಳ ಬದಲು ಇಲ್ಲಿ ಜನಪದ ಪದ್ಧತಿಯ ವಿದೂಷಕನಂತಹ ಪಾತ್ರವಿದ್ದಿತು. ಆದ್ದರಿಂದ ಇದನ್ನು ಕನ್ನಡ ವ್ಯವಸಾಯ ರಂಗಭೂಮಿಯ ಪ್ರಾರಂಭವೆಂದು ಹೇಳಲಾಗದು."[೨೮] ಶ್ರೀ ರಂಗರ ಈ ಮಾತು ಅಂದಿನ ರಂಗಭೂಮಿಯ ಸ್ವರೂಪದ ದೃಷ್ಟಿಯಿಂದ ನಿಜವಾದರೂ ಇತಿಹಾಸದ ದೃಷ್ಟಿಯಿಂದ ಸಮಂಜಸವೆನಿಸದು. ೧೮೭೦ರ ದಶಕದಲ್ಲಿಯ ರಂಗಭೂಮಿಯನ್ನು ವ್ಯವಸಾಯ ರಂಗಭೂಮಿಯ ಪ್ರಯೋಗಿಕ ಘಟ್ಟವೆಂದು ಹೇಳಬಹುದು. ಈ ಅವಧಿಯಲ್ಲಿ ಪೂರ್ಣ ಪ್ರಮಾಣದ ನಾಟಕ ಕಂಪನಿಗಳು ಇರಲಿಲ್ಲ. ಯಾವುದೇ ಒಂದು ಕಲೆಯ ಆವಿಷ್ಕಾರವು ಹಂತ ಹಂತಕ್ಕೆ ಸಂಭವಿಸುವಂತಹದ್ದು. ಹಾಗೆಂದು ಮೊದಲ ಹಂತದ ಪ್ರಯತ್ನವನ್ನು ಪರಿಗಣಿಸದೆ ಮುಂದಕ್ಕೆ ಹೋಗಲಾಗದು ಅದರಿಂದ ಇತಿಹಾಸದ ಚಿತ್ರವೂ ಪೂರ್ಣವಾಗುವುದಿಲ್ಲ.

ಮರಾಠೀ ನಾಟಕಗಳ ಸೆಳೆತಕ್ಕೆ ಸಿಕ್ಕ ಮುಗ್ಧ ಪ್ರೇಕ್ಷಕರನ್ನು ಕನ್ನಡ ನಾಟಕಗಳತ್ತ ಹೊರಳಿಸಿ, ಅವುಗಳ ಬಗೆಗೆ ಕುತೂಹಲ ಕೆರಳಿಸಿದ ಕೃತಪುರ ನಾಟಕ ಮಂಡಳಿಯ ಪ್ರದರ್ಶನಗಳು, ಹಲಸಿ ಮಂಡಳಿಯ ಪ್ರದರ್ಶನಗಳು ಕಂಪನಿ ನಾಟಕ ಕಲೆಗೆ ಗಟ್ಟಿ ನೆಲಗಟ್ಟನ್ನು ಹಾಕಿದ್ದು ಮರೆಯಲಾಗದು. ಶಾಂತಕವಿಗಳ 'ಉಷಾಹರಣ' ನಾಟಕಕ್ಕೆ ದೊರೆತ ಪ್ರತಿಕ್ರಿಯೆ ಅವರದ್ದೆ ಆದ ಷಟ್ಪದಿಯಿಂದ ತಿಳಿಯಬಹುದು.

**ಚೆಲುವ ರೂಪಗಳಿಹವು ಚೆಂದ ಬೇಸಗಳಿಹವು**

**ಲಲಿತ ಭಾಷಣವಿಹುದು ತಿಳಿಗಾನವೂ ಇಹುದು**

**ಬೆಳೆದ ಭಕುತರ ಮಹಿಮೆಯಿದಿಹುದು ಹರಿಹರಗಾಥ ಲೀಲಾ ಮಾಯೆಯು**

**ಭಳಿರೆಯಿಹಪರವೆಮಗೆ ಸಾಧಿಸುವವು ಒಂದಿರುಳ**

**ಗಳಿಯಲಿವರಾಡುವರೆ ನೋಡುವೆವುಯೆಂದು ಜನ**

**ರುಲಿಗಮದು ಮಚ್ಯೋಮಮತೋ ಮೆಚ್ಚೊ ಕನ್ನಡ ಭಾಷೆಯ ಅಭಿಮಾನದುಕ್ಕೊ**

ಪ್ರೇಕ್ಷಕರ ಈ ಪ್ರತಿಕ್ರಿಯೆ ಕಂಪನಿ ನಾಟಕದ ಆಗಮನವನ್ನು ಸೂಚಿಸುವಂತಿದೆ. ಮರಾಠೀ ನಾಟಕಗಳಾದರೂ ಕನ್ನಡ ಜನಪದ ರಂಗಭೂಮಿಯಿಂದಲೇ ಪ್ರೇರಣೆ ಪಡೆದು ಹುಟ್ಟಿದ್ದವು. ಅದನ್ನು ಬಲ್ಲವರಾಗಿದ್ದ ಶಾಂತಕವಿಗಳು ನಮ್ಮ ಪರಂಪರೆಯ ಬಯಲಾಟಗಳ ಸ್ವರೂಪವನ್ನು ಆಧುನಿಕತೆಗೆ ಹೊರಳಿಸಿದರು. ನಾಟಕದ ಹೆಸರಿನಿಂದ ಹೊಸ ರಂಗಕೃತಿಯನ್ನು ರಚಿಸಿದರು. ನಮ್ಮ ಕಂಪನಿ ನಾಟಕಗಳು ಹೊರಗೆ ಪಾಶ್ಚಾತ್ಯರ ಅನುಕರಣೆಯಂತೆ ಕಂಡರೂ ಒಳಗೆ ಮಾತ್ರ ದೇಸೀಯ ಸತ್ವ ಸ್ವರೂಪದಿಂದಲೇ

ತುಂಬಿಕೊಂಡಿದ್ದವು. ನಮ್ಮ ಬಯಲಾಟಗಳು ಪ್ರೋಸೀನಿಯಂ ಥೇಟರ್‌ದ ವೇಷ ಭೂಷಣಗಳನ್ನು ಹೇಗೆ ಧಾರಣ ಮಾಡಿದವು ಎಂಬುದು ಕುತೂಹಲದ ಅಧ್ಯಯನವಾಗಿದೆ.[೨೯]

ನಾಡು-ನುಡಿ ಕಟ್ಟಬೇಕೆಂಬ ಒತ್ತಾಸೆಯಿಂದ ಹುಟ್ಟಿಕೊಂಡಿದ್ದ ವೃತ್ತಿರಂಗಭೂಮಿಯ ಪೂರ್ಣ ಸ್ವರೂಪದಲ್ಲಿ ವೃತ್ತಿಯ ಶಿಸ್ತನ್ನು ಅಳವಡಿಸಿಕೊಂಡದ್ದು ಕ್ರಿ.ಶ. ೧೯೦೦ ರ ಸುಮಾರು. ಈ ಸ್ವರೂಪದ ಮೊದಲ ನಾಟಕ ಕಂಪನಿಯೆಂದರೆ ಶಿವಮೂರ್ತಿಸ್ವಾಮಿ ಕಣಬರಗಿಮಠರು ಸ್ಥಾಪಿಸಿದ 'ಶ್ರೀ ಕಾಡಸಿದ್ಧೇಶ್ವರ ಸಂಗೀತ ನಾಟಕ ಮಂಡಳಿ'. ಆಗಲೇ ಶಾಂತಕವಿಗಳ ನಾಟಕ ಮಂಡಳಿ, ಹಲಸಿ ನಾಟಕ ಮಂಡಳಿಗಳು ಆಗಿ ಹೋಗಿದ್ದರೂ ಮರಾಠಿ ನಾಟಕ ಕಂಪನಿಗಳ ಸರಿಸಾಟಿಯಾಗಿ ನಿಲ್ಲುವ ನಾಟಕ ಕಂಪನಿಗಳು ಕರ್ನಾಟಕದಲ್ಲಿ ಇನ್ನೂ ಹುಟ್ಟಿರಲಿಲ್ಲ. ಅಲ್ಲದೇ ಪ್ರೇಕ್ಷಕರಾದರೂ ಮರಾಠಿ ನಾಟಕಗಳ ಮೋಹಜಾಲದಿಂದ ಇನ್ನೂ ಬಿಡಿಸಿಕೊಂಡಿರಲಿಲ್ಲ. ಈ ದೃಷ್ಟಿಯಿಂದ ಎಲ್ಲದರಲ್ಲೂ ಮರಾಠಿ ನಾಟಕ ಕಂಪನಿಗಳನ್ನು ಹೋಲುವಂಥ ಮತ್ತು ಕರ್ನಾಟಕ ವೃತ್ತಿರಂಗಭೂಮಿಗೆ ಭದ್ರ ಬುನಾದಿ ಹಾಕುವಂಥ ಪ್ರಯತ್ನ ಕೊಣ್ಣೂರ ಶ್ರೀ ಕಾಡಸಿದ್ಧೇಶ್ವರ ನಾಟಕ ಮಂಡಳಿಯಿಂದ ನಡೆಯಿತು. ಶಿವಮೂರ್ತಿಸ್ವಾಮಿಗಳು ಬೆಳಗಾವಿ ಹತ್ತಿರದ ಕಣಬರಗಿ ಗ್ರಾಮದವರು. ಗೋಕಾಕ ಹತ್ತಿರದ ಗೋಕಾಕ ಫಾಲ್ಸದ ಹತ್ತಿಗಿರಣಿಯಲ್ಲಿ ಮ್ಯಾನೇಜರ್ ಆಗಿ ಕಾರ್ಯನಿರ್ವಹಿಸುತ್ತಿದ್ದರು. ಇವರು ನಾಟಕ ಕಲೆಯ ಅಭಿಮಾನಿಗಳು, ರಸಜ್ಞರು, ಬೆಳಗಾವಿ ಪ್ರದೇಶದ ಆಟ, ಬಯಲಾಟ, ಶ್ರೀಕೃಷ್ಣ ಪಾರಿಜಾತ ಕಲೆಗಳನ್ನು ನೋಡಿ ತುಂಬ ಪ್ರಭಾವಿತರಾಗಿದ್ದರು, ಮಿಲ್ಲಿನ ಕೆಲಸದ ನಿಮಿತ್ತ ಮುಂಬಯಿಗೆ ಹೋಗಿ ಬರುತ್ತಿದ್ದರು. ಅಲ್ಲಿ ನಡೆಯುತ್ತಿದ್ದ ಪಾರಸಿ, ಮರಾಠಿ ನಾಟಕಗಳನ್ನು ನೋಡುತ್ತಿದ್ದರು. ಕನ್ನಡ ಬಯಲಾಟಗಳನ್ನು ಮತ್ತು ಪಾರಸಿ, ಮರಾಠಿ ನಾಟಕಗಳನ್ನು ನೋಡಿದ ಅನುಭವದ ಹಿನ್ನಲೆಯಲ್ಲಿ ಅವರು ನಾಟಕ ಕಂಪನಿ ಕಟ್ಟುವ ಕನಸು ಕಂಡರು. ಕೈಯಲ್ಲಿ ಸಾಕಷ್ಟು ಹಣವಿದ್ದುದರಿಂದ ಕಂಪನಿಯನ್ನು ಸಂಘಟಿಸುವಾಗ ಪ್ರಸಿದ್ಧ ಕಲಾವಿದರನ್ನು, ರಂಗಪರಿಕರಗಳನ್ನು ಕೂಡಿಸಿದರು. ಸಂಗೀತಕ್ಕಾಗಿ ಸಾತಾರದ ಗಣುಬುವಾ ಅವರನ್ನು, ರಂಗಪರದೆಗಳನ್ನು ಸಿದ್ಧಪಡಿಸಲು ಕೊಲ್ಹಾಪೂರದ ಬಲವಂತ ವಿಠ್ಠಲ ಪೇಂಟರರನ್ನು, ಕಂಪನಿಯ ಮೇಲ್ವಿಚಾರಣೆಗಾಗಿ, ಕೊಲ್ಹಾಪೂರದ ಬಾಪಟ ಮೊದಲಾದವರನ್ನು ಕರೆತಂದರು ಗೋಕಾಕ ಫಾಲ್ಸ ಸಮೀಪದ ಕೊಣ್ಣೂರಿನ ಕಾಡಸಿದ್ಧೇಶ್ವರ ದೇವಸ್ಥಾನದ ಆವರಣದಲ್ಲಿಯೇ ನಾಟಕದ ತಾಲೀಮು ನಡೆಯಿತು ಸುಮಾರು ಐದಾರು ತಿಂಗಳ ಸಿದ್ಧತೆಯಿಂದ ಕೊಣ್ಣೂರ ನಾಟಕ ಕಂಪನಿ ರಂಗಸೇವೆಗೆ ತೊಡಗಿತು.

ರಂಗದ ಮೇಲೆ ಮೊದಲು ಮಹಿಳೆಯರಿಗೆ ಪ್ರವೇಶ ನೀಡಿದ, ಟ್ರಾನ್ಸಫರ್ ದೃಶ್ಯಗಳನ್ನು ಅಳವಡಿಸಿದ ಮತ್ತು ಡೈನಾಮೊ ವಿದ್ಯುತ್ತನ್ನು ಉಪಯೋಗಿಸಿದ ಕಂಪನಿಯೆಂಬ ಖ್ಯಾತಿ ಕೊಣ್ಣೂರ ಕಂಪನಿಗಿದೆ. ಗರುಡ ಸದಾಶಿವರಾಯರು ಈ ಕಂಪನಿಯಲ್ಲಿ ನಾಟಕಕಾರರಾಗಿ, ಅಭಿನಯ ಶಿಕ್ಷಕರಾಗಿದ್ದರು. ಮರಾಠಿಯ ಪ್ರಸಿದ್ಧ ನಾಟಕಗಳಾದ ಸಂಗೀತ ಸೌಭದ್ರ, ಸಂಗೀತ ಶಾರದಾ ನಾಟಕಗಳನ್ನು ಇದೇ

ಕಂಪನಿಗಾಗಿ ಅವರು ಅನುವಾದಿಸಿದರು. 'ದುರಾತ್ಮ ರಾವಣ' ಎಂಬ ಸ್ವತಂತ್ರ ನಾಟಕವನ್ನು ರಚಿಸಿದರು. ಈ ಕಂಪನಿಯಲ್ಲಿ ಕರ್ನಾಟಕಿ ಸಂಗೀತದಲ್ಲಿ ಪ್ರಸಿದ್ಧರಾದ ಬಳ್ಳಾರಿ ಬಸಪ್ಪ, ಗುಳ್ಳೇದಗುಡ್ಡ ಗುರುಲಿಂಗಪ್ಪ, ಕರ್ನಾಟಕ ಗಂಧರ್ವ ಖ್ಯಾತಿಯ ಗಂಗಾಧರಪ್ಪ ಮುರಗೋಡ, ತುಕಾರಾಮ ಬುವಾ ಗೋಕಾಕ, ಪೀತಾಂಬರಪ್ಪ ಡೋಂಗರೆ, ಚಿಕ್ಕೋಡಿ ಶಿವಲಿಂಗಸ್ವಾಮಿ ವೃತ್ತಿರಂಗಭೂಮಿಯ ಮೊದಲ ನಟಿ ಎಂಬ ಖ್ಯಾತಿಯ ಗುಳ್ಳೇದಗುಡ್ಡ ಯಲ್ಲೂಬಾಯಿ ಮುಂತಾದ ಕಲಾವಿದ-ಕಲಾವಿದೆಯರಿದ್ದರು. ಇವರೆಲ್ಲ ಗಾಯನದಲ್ಲಿ, ಅಭಿನಯದಲ್ಲಿ ಚತುರರಾಗಿದ್ದರು. ಶನಿಪ್ರಭಾವ, ಬಸವೇಶ್ವರ, ಮನೋವಿಜಯ, ಸುಭದ್ರ, ಶಾರದಾ ಮೊದಲಾದ ನಾಟಕಗಳು ಭವ್ಯ ರಂಗಸಜ್ಜಿಕೆಯಲ್ಲಿ ರಮಣೀಯವಾಗಿ ಪ್ರದರ್ಶನಗೊಂಡು ಪ್ರೇಕ್ಷಕರನ್ನು ಮಾಯಾಲೋಕಕ್ಕೆ ಕರೆದೊಯ್ಯುತ್ತಿದ್ದವು. ಉತ್ತರ ಕರ್ನಾಟಕದ, ಮೈಸೂರು ಭಾಗ ಮತ್ತು ಮಹಾರಾಷ್ಟ್ರದ ಕೆಲವು ನಗರಗಳಲ್ಲಿ ಈ ಕಂಪನಿ ಸಂಚರಿಸಿತ್ತಲ್ಲದೆ ಕನ್ನಡ ನಾಟಕಗಳ ಸತ್ವ ಶ್ರೀಮಂತಿಕೆಯನ್ನು ಪ್ರದರ್ಶಿಸಿತು. ಈ ಕಂಪನಿಯ ನಾಟಕಗಳನ್ನು ನೋಡಿದ ಪ್ರೇಕ್ಷಕರು ರಂಗಭೂಮಿಯಲ್ಲಿ ಇದೊಂದು 'ಅದ್ಭುತ' ಎಂದು ಮನಸಾರೆ ಕೊಂಡಾಡಿದರು. ಈ ಕಂಪನಿ ೧೯೨೦ ರವರೆಗೆ ರಂಗಭೂಮಿಯ ಸೇವೆ ಸಲ್ಲಿಸಿತು. ಕನ್ನಡ ಕಂಪನಿ ನಾಟಕಕ್ಕೆ ಭದ್ರವಾದ ಬುನಾದಿ ಹಾಕಿತು. ಇಲ್ಲಿ ತರಬೇತಿ ಪಡೆದ ನುರಿತ ನಟ ನಟಿಯರೇ ಮುಂದೆ ಸ್ವತಂತ್ರ ಕಂಪನಿಗಳನ್ನು ಕಟ್ಟಿ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯನ್ನು ಶ್ರೀಮಂತಗೊಳಿಸಿದರು.

ಕೊಣ್ಣೂರ ನಾಟಕ ಮಂಡಳಿಯ ಅದ್ಭುತ ಸಾಧನೆಯಿಂದ ಉತ್ತೇಜಿತರಾದ ಶಿರಹಟ್ಟಿ ವೆಂಕೋಬರಾಯರು ೧೯೦೩ ರಲ್ಲಿ 'ಶ್ರೀ ಮಹಾಲಕ್ಷ್ಮೀ ಪ್ರಾಸಾದಿಕ ಸಂಗೀತ ನಾಟಕ ಮಂಡಳಿ'ಯನ್ನು ಪ್ರಾರಂಭಿಸಿದರು. ಈ ಕಂಪನಿಯು ಸಾಹಿತ್ಯ, ಸಂಗೀತ, ಅಭಿನಯ ರಂಗಸಜ್ಜಿಕೆಯಲ್ಲಿ ಹೆಚ್ಚು ವೈಭವವನ್ನು ಮೈಗೂಡಿಸಿಕೊಂಡಿತು. ಮರಾಠೀ ನಾಟಕ ಕಂಪನಿಗಳಿಗೆ, ಸಮನಾಗಿ ಒಂದಿಷ್ಟು ಅವುಗಳಿಗಿಂತ ಮಿಗಿಲಾಗಿ ಕನ್ನಡದಲ್ಲಿ ನಾಟಕ ಕಂಪನಿ ಕಟ್ಟಿ ತೋರಿಸಿದವರೆಂದರೆ ಶಿವಮೂರ್ತಿಸ್ವಾಮಿ ಕಣಬರಗಿಮಠ ಮತ್ತು ಶಿರಹಟ್ಟಿ ವೆಂಕೋಬರಾಯರು ಇವರು ಗಳಿಸಿದ ಯಶಸ್ಸು ಅನೇಕ ಉತ್ಸಾಹಿ ತರುಣರನ್ನು ನಾಟಕ ರಂಗದ ಕಡೆಗೆ ತಿರುಗಿಸಿತು. ಸ್ತ್ರೀಯರಿಗೂ ರಂಗಮಂಟಪದ ಬಾಗಿಲು ತೆರೆದಂತಾಗಿ ಹಾಡು ಕಲಿತವರೆಲ್ಲ ಪಾರ್ಟು ಮಾಡಲು ಮುಂದಾದರು. ನಾಟಕದಿಂದ ಧನಮಾನಗಳು ಸುಲಭವಾಗಿ ಸಿಕ್ಕುತ್ತವೆಂದು ನಂಬಿದ ಓದು ಬರಹವಷ್ಟೇ ಬಂದ ಯುವಜನೋತ್ಸಾಹಿಗಳು 'ಸುಲಭವಾದ' ರಂಗಕಲೆಯನ್ನು ವೃತ್ತಿಯಾಗಿ ಅವಲಂಬಿಸಲು ಮುಂದಾದರು. ಹೀಗೆ ಯುವಕರಿಗೆ ನಟರಾಗುವ ಹುಚ್ಚು ನಾಲ್ಕಾರು ವರುಷ ರಂಗದ ಮೇಲೆ ದುಡಿದ ನಟರಿಗೆ ಮಂಡಳಿ ಕಟ್ಟಿ ಮಾಲೀಕರಾಗುವ ಹುಚ್ಚು. ಅಂತೂ ಒಮ್ಮೆ ನಾಟಕರಂಗವು ಎಲ್ಲರಿಗೂ ತುಂಬ ಆಕರ್ಷಣೀಯವೂ, ಲಾಭದಾಯಕವೂ ಆದ ವೃತ್ತಿಯಾಗಿ ಕಂಡಿತು........[೩೦]. ೧೯೧೦ ರಿಂದ ಅನೇಕ ನಾಟಕ ಮಂಡಳಿಗಳು ತಲೆಯೆತ್ತಿದವು. ಒಂದೊಂದು ಕಂಪನಿಗಳು ಒಂದೊಂದು ವಿಶೇಷತೆಯಿಂದ ಪ್ರೇಕ್ಷಕರನ್ನು ಆಕರ್ಷಿಸಿದವು. ಇದು ನಾಟಕ ಕಂಪನಿಗಳ ಸ್ಪರ್ಧೆಯ ಕಾಲ ಎನ್ನಬಹುದು.

ಶಿರಹಟ್ಟಿ ಕಂಪನಿ ರಂಗವೈಭವಕ್ಕೆ ಹೆಸರಾದರೆ, ೧೯೧೧ ರಲ್ಲಿ ಹುಟ್ಟಿದ ಹಲಗೇರಿಯ 'ಶ್ರೀಹಾಲ ಸಿದ್ಧೇಶ್ವರ ಸಂಗೀತ ನಾಟಕ ಮಂಡಳಿ'ಯು ಹಾಸ್ಯ ರಸಾಯನಕ್ಕೆ ಹೆಸರಾಯಿತು. ಈ ಕಂಪನಿಯ ಎರಡನೆ ಘಟ್ಟದಲ್ಲಿ ಚಿಕ್ಕ ಜಟ್ಟೆಪ್ಪ ಎಂಬವರು (ಮೊದಲ ಘಟ್ಟದಲ್ಲಿ ದೊಡ್ಡ ಜಟ್ಟೆಪ್ಪ ಕಂಪನಿ ಮಾಲೀಕರಾಗಿದ್ದರು) ಕಂಪನಿಯ ಮಾಲೀಕರಾದರು. ಇವರು ಆಯ್ದುಕೊಂಡ ಸಾಮಾಜಿಕ ನಾಟಕಗಳು ಮತ್ತು ಇವರ ಅಭಿನಯ ವಿಶೇಷತೆಯಿಂದ ಹಾಸ್ಯರಸಕ್ಕೆ ರಂಗದ ಮೇಲೆ ಒತ್ತು ಸಿಕ್ಕಿತು. ಎಚ್ ದೇವಿರಪ್ಪನವರು ಈ ಮಂಡಳಿಯ ಪ್ರದರ್ಶನಗಳ ಕುರಿತು ಬರೆಯುತ್ತ 'ಈ ಮಂಡಳಿಯಲ್ಲಿ ನಾವು ನೋಡಬೇಕಾದುದು ಹೃದಯಸ್ಪರ್ಶಿಯಾದ, ಬಹು ಮಟ್ಟಿಗೆ ಹಾಸ್ಯಮಯವಾದ ಸಂಭಾಷಣೆ, ನಾಟಕಕಾರನು ಕಟುಕ್ತಿಯಿಂದ, ಅಂಕಣದಿಂದ, ವ್ಯಂಗ್ಯದಿಂದ, ಹಾಸ್ಯದಿಂದ ನಮ್ಮ ಬೆರಳನ್ನೆ ನಮ್ಮ ಕಣ್ಣಿಗಿಟ್ಟು ಕಾಂತಾಸಮ್ಮಿತಿಯಿಂದ ಮನದ ಮಲಿನವನ್ನು ತೊಳೆಯುತ್ತಾನೆ" ಎಂದಿದ್ದಾರೆ. ರಾಕ್ಷಸೀ ಮಹಾತ್ವಾಕಾಂಕ್ಷೆ, ಸಂಪೂರ್ಣ ರಾಮಾಯಣ, ಮಿಠಾಯಿ ಬುಟ್ಟಿ, ಸ್ತ್ರೀ, ಬಿ.ಎ., ಇವು ಈ ಕಂಪನಿಯ ಜನಪ್ರಿಯ ನಾಟಕಗಳು. ಈ ಕಂಪನಿಯ ಜೊತೆ ಜೊತೆಯಲ್ಲಿಯೇ ಕೇಳಿ ಬರುವ ನಾಟಕ ಕಂಪನಿಯೆಂದರೆ ವಾಮನರಾವ್ ಮಾಸ್ತರ ಅವರ 'ವಿಶ್ವಗುಣಾದಾರ್ಶ ಸಂಗೀತ ನಾಟಕ ಮಂಡಳಿ' ಇದು ೧೯೧೪ ರಲ್ಲಿ ಪ್ರಾರಂಭವಾಯಿತು. ಶಿರಹಟ್ಟಿ ನಾಟಕ ಕಂಪನಿಯಲ್ಲಿ ಗಾಯನ ಮತ್ತು ಅಭಿನಯ ಕಲೆಯಿಂದ ಪ್ರೇಕ್ಷಕರ ಮನಸ್ಸನ್ನು ಸೂರೆಗೊಂಡಿದ್ದ ವಾಮನರಾವ ಮಾಸ್ತರ ಸವಣೂರ ಈ ಕಂಪನಿಯ ಮಾಲೀಕರು. ಇವರು ನಟರಾಗಿ, ನಾಟಕಕಾರರಾಗಿ, ಸಂಗೀತ ಕಲೆಯಲ್ಲಿ ನಿಷ್ಣಾತರಾಗಿ, ನಾಟಕ ಮಂಡಳಿಯ ಮಾಲೀಕರಾಗಿ ಕರ್ನಾಟಕ ವೃತ್ತಿರಂಗಭೂಮಿಯಲ್ಲಿ ಮಹತ್ವದ ಅಧ್ಯಾಯವನ್ನೇ ನಿರ್ಮಿಸಿದರು. ಇವರ ನೇತೃತ್ವದ 'ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿ'ಯು ರಸಿಕರಿಗೆ ಸಂಗೀತ ರಸಧಾರೆಯನ್ನು ಹರಿಸಿ ಸಂತೋಷಪಡಿಸಿತು. ಶಾಸ್ತ್ರೀಯ ಸಂಗೀತದಲ್ಲಿ ಸಾಧನೆ ಮಾಡಿದ್ದ ಬೇವೂರ ಬಾಷಾಸಾಹೇಬ, ಸಂಗನಬಸಪ್ಪ ಕುಕನೂರ, ಕೇಶವಭಟ್ಟ ಮಿಶ್ರಿಕೋಟಿ, ಮಲ್ಲಿಕಾರ್ಜುನ ಮನಸೂರ, ಗುಳೇದಗುಡ್ಡ ಗಂಗೂಬಾಯಿ ಈ ಕಂಪನಿಯ ಕೀರ್ತಿಯನ್ನು ಬೆಳಗಿಸಿದರು. ಮರಾಠಿಯಲ್ಲಿ ಜನಪ್ರಿಯರಾಗಿದ್ದ ಸಂಗೀತ ನಾಟಕಗಳನ್ನು ವಾಮನರಾವ್ ಮಾಸ್ತರರು ಸುಲಲಿತ ಶೈಲಿಯಲ್ಲಿ ಕನ್ನಡಕ್ಕೆ ಅನುವಾದಿಸಿದರು. ಅಲ್ಲಿಯ ಹಿಂದುಸ್ತಾನಿ ಹಾಡುಗಾರಿಕೆಯನ್ನು ಕನ್ನಡ ರಂಗಭೂಮಿಗೆ ಸೊಗಸಾಗಿ ಪರಿಚಯಿಸಿದರು. ಸ್ವತಃ ವಾಮನರಾಯರು ರಂಗಗೀತೆಗಳನ್ನು ಹಾಡುವ ಶ್ರೇಷ್ಠ ಕಲಾವಿದರಾಗಿದ್ದರು. ಇವರ ಹಾಡುಗಾರಿಕೆ ಕೇಳಿ 'ನಾಟಕ ಶಿರೋಮಣಿ' ಎ. ವ್ಹಿ. ವರದಾಚಾರ್ಯರು 'ಏನು ಹಾಡ್ತಿಯಪ್ಪ!' ಎಂದು ಅಪ್ಪಿಕೊಂಡ ಸನ್ನಿವೇಶ, ಏಣಗಿ ಬಾಳಪ್ಪಜನವರು 'ವಾಮನರಾಯರು ಇರದಿದ್ದರೆ ರಂಗಸಂಗೀತ ಬೆಳೀತಿರಲಿಲ್ಲ' ಎಂಬ ಉದ್ಗಾರ ರಂಗಭೂಮಿಯ ಇತಿಹಾಸದಲ್ಲಿ ಒಂದು ಅವಿಸ್ಮರಣೀಯ ದಾಖಲೆಯಾಗಿ ಸೇರಿಕೊಂಡಿವೆ. ಕರ್ನಾಟಕ ಸಂಗೀತ ರಂಗಭೂಮಿಯಲ್ಲಿ ವಾಮನರಾಯರ ವೈಯುಕ್ತಿಕ ಸಾಧನೆ ಅವರ ಕಂಪನಿಯ ಸಾಧನೆ ಮೆಲುಕು ಹಾಕುವುದೇ ಒಂದು ರಮ್ಯ ಅನುಭವ.

ವಾಮನರಾವ ಮಾಸ್ತರ ನಂತರ ಗರುಡ ಸದಾಶಿವರಾಯರು (ಶ್ರೀ ದತ್ತಾತ್ರೇಯ ಸಂಗೀತ ನಾಟಕ ಮಂಡಳಿ), ಬಚ್ಚಾಸಾನಿ ದೊಡ್ಡಮನಿ (ಸ್ತ್ರೀ ನಾಟಕ ಮಂಡಳಿ), ಚಿಕ್ಕೋಡಿ ಶಿವಲಿಂಗ ಸ್ವಾಮಿಗಳು (ಸಿರ್ಸಿ ಮಾರಿಕಾಂಬಾ ನಾಟಕ ಮಂಡಳಿ), ಶಾಂತವೀರಪ್ಪ ಚಿಂದೋಡಿ (ಶ್ರೀ ಗುರು ಕೆ. ಬಿ. ಆರ್. ಡ್ರಾಮಾ ಕಂಪನಿ), ಎರಾಸಿ ಭರಮಪ್ಪ (ಶ್ರೀ ವಾಣಿ ವಿಲಾಸ ನಾಟಕ ಮಂಡಳಿ), ಅಬ್ಬಿಗೇರಿ ಬಸನಗೌಡರು (ಕನ್ನಡ ಸೇವಾ ಸಾಹಿತ್ಯ ಸೇವಾ ಸಂಗೀತ ನಾಟಕ ಮಂಡಳಿ), ಲಕ್ಷ್ಮಣರಾವ ಅಸುಂಡಿ (ಶಿವಾನಂದ ಸಂಗೀತ ನಾಟಕ ಮಂಡಳಿ), ಏಣಗಿ ಬಾಳಪ್ಪ (ಕಲಾವೈಭವ ನಾಟ್ಯಸಂಘ, ಬೆಳಗಾವಿ), ಹಂದಿಗನೂರ ಸಿದ್ರಾಮಪ್ಪ (ವಿಶ್ವಕಲಾ ರಂಜನ ನಾಟ್ಯಸಂಘ), ಭೀಮಪ್ಪ ಹೂಗಾರ (ಶ್ರೀ ಭಾಗ್ಯೋದಯ ನಾಟ್ಯ ಸಂಘ, ಅಥಣಿ), ತುಕಾರಾಮಪ್ಪ ಹೊಸಮನಿ (ಶ್ರೀ ಶಾರದಾ ಸಂಗೀತ ನಾಟಕ ಮಂಡಳಿ, ಗೋಕಾಕ), ಹುಲಿಮನಿ ಸೀತಾರಾಮ ಶಾಸ್ತ್ರಿ (ಶ್ರೀ ಜಯ ಕರ್ನಾಟಕ ನಾಟಕ ಮಂಡಳಿ, ಸಿದ್ಧಾಪೂರ), ಬಸವರಾಜ ಮನಸೂರ (ಕಲಾ ಪ್ರಕಾಶ ನಾಟಕ ಮಂಡಳಿ, ಧಾರವಾಡ), ಪಂ. ಪುಟ್ಟರಾಜ ಗವಾಯಿಗಳು (ಶ್ರೀ ಕುಮಾರೇಶ್ವರ ಕೃಪಾಪೋಷಿತ ಲಿಂ, ಪಂಚಾಕ್ಷರ ಗವಾಯಿಗಳ ನಾಟಕ ಮಂಡಳಿ, ಗದಗ), ಚಿತ್ತರಗಿ ಗಂಗಾಧರಶಾಸ್ತ್ರಿ, ನ್ಯಾಮತಿ ಶಾಂತಪ್ಪ, ವಸಂತಸಾ ನಾಕೋಡ, ಬಿ.ಆರ್ ಅರಿಷಿಣಗೋಡಿ, ಬಿ. ಓಬಳೇಶ, ಮಲ್ಲನಗೌಡ ದೇಸಾಯಿ, ರಹಿಮಾನವ್ವ ಕುಕನೂರ, ಸಿದ್ಧಯ್ಯಸ್ವಾಮಿ ಉಜ್ಜಯನಿಮಠ, ಮೃಡದೇವ ಗವಾಯಿಗಳು, ತಪಸಿ ಗೌಡಪ್ಪ, ಡಿ. ಮುದ್ದುವೀರಾಚಾರ್ಯ, ಎನ್. ಬಸವರಾಜ, ಪಂಚಯ್ಯಸ್ವಾಮಿ ಮೆಳ್ಳಿಗೇರಿ, ಚಿಂದೋಡಿ ಲೀಲಮ್ಮ ಇನ್ನೂ ಅನೇಕ ಜನ ಕಲಾವಿದರು ಕಂಪನಿ ಮಾಲೀಕರು ಉತ್ತರ ಕರ್ನಾಟಕದಲ್ಲಿ ಕಂಪನಿ ನಾಟಕಗಳ ವೈಭವವನ್ನು ತೋರಿಸಿದರು. ಸಮಕಾಲೀನ ಸಾಮಾಜಿಕ, ರಾಜಕೀಯ ಸಮಸ್ಯೆಗಳಿಗೆ ಸ್ಪಂದಿಸುವ ನಾಟಕಗಳನ್ನು ಪ್ರದರ್ಶಿಸಿದರು.

**ಊ. ಮೈಸೂರು ಪ್ರದೇಶದಲ್ಲಿ ನಾಟಕ ಚಟುವಟಿಕೆಗಳು:**

ಉತ್ತರ ಕರ್ನಾಟಕಕ್ಕೆ ಹೋಲಿಸಿದಾಗ ಮೈಸೂರು ಪ್ರದೇಶದ ಕಂಪನಿ ನಾಟಕ ಚಟುವಟಿಕೆಗಳಿಗೆ ಒದಗಿ ಬಂದ ಕಾರಣ, ಹಾಗೂ ಪ್ರೇರಣೆಗಳು ಭಿನ್ನವಾಗಿವೆ. ನಾಡು-ನುಡಿಗೆ ಪೆಟ್ಟು ಬಿದ್ದಾಗ ಉತ್ತರ ಕರ್ನಾಟಕದ ಕೆಲವು ಪ್ರಜ್ಞಾವಂತರು ಕಂಪನಿ ನಾಟಕದ ಚಟುವಟಿಕೆಗಳನ್ನು ಆರಂಭಿಸಿದರು. ಈ ಸ್ವರೂಪದ ಸಮಸ್ಯೆ ಮೈಸೂರು ಪ್ರದೇಶದಲ್ಲಿತ್ತು. ಮೈಸೂರು ಮಹಾರಾಜರ ಆಶ್ರಯದಲ್ಲಿ ಸಾಹಿತ್ಯ ಕಲೆಗಳಿಗೆ ಚೆನ್ನಾಗಿ ಪೋಷಣೆ ಇತ್ತು ನಾಡು-ನುಡಿಯ ಸಮಸ್ಯೆ ಕೂಡ ಅಷ್ಟಾಗಿ ಕಾಡಿರಲಿಲ್ಲ. ಇಂಥ ಸನ್ನಿವೇಶದಲ್ಲಿ ನಾಟಕದ ಹೊಸತನಕ್ಕಾಗಿ ಅಲ್ಲಿ ಆಧುನಿಕ ಚಟುವಟಿಕೆಗಳು ಕಾಣಿಸಿಕೊಂಡವು. ಪಾರ್ಸಿ ಮತ್ತು ಮರಾಠಿ ನಾಟಕ ಕಂಪನಿಗಳು ಉತ್ತರ ಕರ್ನಾಟಕದಿಂದ ಮೈಸೂರು ಪ್ರದೇಶಕ್ಕೆ ಹೋಗಿ ನಾಟಕಗಳನ್ನಾಡತೊಡಗಿದವು. ಮೊದಲು ಆ ಕಂಪನಿಗಳು ಮೈಸೂರು ಮಹಾರಾಜರ ಆಮಂತ್ರಣದ ಮೇರೆಗೆ ಆಸ್ಥಾನದಲ್ಲಿ ನಾಟಕಗಳನ್ನಾಡಿದವು. ಮಹಾದೇವಭಟ್ಟರ ನೇತೃತ್ವದ 'ಸಾಂಗಲಿಕರ ನಾಟಕ

ಮಂಡಳಿ'ಯು ೧೯೨೬ ರಲ್ಲಿ ಅಂದಿನ ಮಹಾರಾಜರಾದ ಚಾಮರಾಜೇಂದ್ರ ಒಡೆಯರ ಸಮ್ಮುಖದಲ್ಲಿ ಸೌಭದ್ರ ಮತ್ತು ಶಾಕುಂತಲ ನಾಟಕಗಳನ್ನಾಡಿತು. ರಾಜರಿಗೆ ಮತ್ತು ಆಸ್ಥಾನದ ಪಂಡಿತರಿಗೆ, ಇತರ ಜನರಿಗೆ ಮರಾಠಿ ನಾಟಕಗಳು ತಮ್ಮ ಹೊಸತನದಿಂದ ಆಕರ್ಷಿಸಿದವು. ದೃಶ್ಯದಲ್ಲಿ, ಅಭಿನಯದಲ್ಲಿ ಸಂಗೀತದಲ್ಲಿ ಮರಾಠಿ ನಾಟಕಗಳು ತುಂಬ ಬೇರೆಯೆನಿಸಿದವು. ಆಮೇಲೆ ಪಾರಸಿ ಆಮೇಲೆ ಬಾಲಿವಾಲಾ ಅವರ 'ವಿಕ್ಟೋರಿಯಾ ನಾಟಕ ಮಂಡಳಿ' ಮೈಸೂರಿನ ಅರಮನೆಯಲ್ಲಿ 'ಇಂದ್ರಸಭಾ' 'ಗುಲೇಬಕಾವಲಿ' ನಾಟಕಗಳನ್ನು ಪ್ರದರ್ಶಿಸಿತು. ನಾಟಕದ ಭಾಷೆ ಅರ್ಥವಾಗದಿದ್ದರೂ ನಾಟಕದೊಳಗಿನ ಸೀನು, ಸಿನರಿ, ಚಮತ್ಕಾರಗಳು ಅರಮನೆಯ ಜನರನ್ನು ಆಕರ್ಷಿಸಿದವು. ಅರಮನೆಯ ಹೊರಗೂ ಕಂಪನಿಗಳು ಕ್ಯಾಂಪ ಮಾಡಿ ನಾಟಕಗಳನ್ನು ಪ್ರದರ್ಶಿಸಲು ಪ್ರೇಕ್ಷಕರು ಹುಚ್ಚೆದ್ದು ನಾಟಕಗಳನ್ನು ನೋಡಿದರು. ಪ್ರೇಕ್ಷಕರ ಆಸಕ್ತಿ, ಹೊಸತನದ ಬಗೆಗಿನ ಒಲವು ತಿಳಿದುಕೊಂಡು ಮೈಸೂರು ಮಹಾರಾಜರು ೧೮೮೦ ರಲ್ಲಿ 'ಅರಮನೆ ಕಂಪನಿ' ಸ್ಥಾಪಿಸಿದರು. ಮೊದಲ ನಾಟಕ 'ಪ್ರಹ್ಲಾದ' ಇದರಲ್ಲಿ ರಾಯಲ್ ಸ್ಕೂಲ ವಿದ್ಯಾರ್ಥಿಗಳೇ ಭಾಗವಹಿಸಿದ್ದರು.

ಅರಮನೆ ಕಂಪನಿಗೆ ದೊರೆತ ಪ್ರೇಕ್ಷಕರ ಪ್ರತಿಕ್ರಿಯೆ ಅತ್ಯಂತ ಪ್ರೋತ್ಸಾಹದಾಯಕವಿತ್ತು. ಅದನ್ನು ಗಮನಿಸಿ ಮಹಾರಾಜರು ದಿವಾನ್ ಸಿ. ರಂಗಾಚಾರ್ಯ ಅವರಿಗೆ ಕಂಪನಿಯ ವ್ಯವಸ್ಥೆಯನ್ನು ನೋಡಿಕೊಳ್ಳಲು ಹೇಳಿದರು. ಮಹಾರಾಜರ ಸಲಹೆಯ ಮೇರೆಗೆ ಬಸವಪ್ಪ ಶಾಸ್ತ್ರಿಗಳು 'ಶಾಕುಂತಲ' ನಾಟಕ ಅನುವಾದಿಸಿದರು. ಆಸ್ಥಾನದ ಕಲಾವಿದರೂ ಈ ನಾಟಕಗಳಲ್ಲಿ ಪಾತ್ರವಹಿಸಿದರು. ರಾಯಲ್ ಸ್ಕೂಲಿನ ಮುಖ್ಯೋಪಾಧ್ಯಾಯರು ಅಭಿನಯ ಕಲಿಸುತ್ತಿದ್ದರು. ವಿದ್ವಾನ್ ಸದಾಶಿವರಾವ್, ಮತ್ತು ಸುಬ್ಬಣ್ಣ ಸಂಗೀತ ಕಲಿಸುತ್ತಿದ್ದರು. ಎರಡು ತಿಂಗಳು ತಾಲೀಮಿನ ನಂತರ 'ಶಾಕುಂತಲ' ರಂಗವನ್ನು ಅಲಂಕರಿಸಿತು. ೧೭ ನವ್ಹೆಂಬರ್ ೧೮೮೧ ರಂದು ಅರಮನೆಯ ನಾಟಕಶಾಲೆಯಲ್ಲಿ ಈ ನಾಟಕದ ಪ್ರಾರಂಭೋತ್ಸವ ಅದ್ದೂರಿಯಾಗಿ ನೆರವೇರಿತು. ಅಪೂರ್ವ ಯಶಸ್ಸಿನ ಪರಿಣಾಮವಾಗಿ ಸಾರ್ವಜನಿಕರಿಗಾಗಿಯೂ ಅರಮನೆ ಮೈದಾನದಲ್ಲಿ ನಿರ್ಮಿಸಲಾದ ರಂಗಪಂಟಪದಲ್ಲಿ 'ಶಾಕುಂತಲ'ದ ಪ್ರದರ್ಶನಗಳು ನಡೆದವು. ನಾಟಕಕ್ಕೆ ಅಪಾರ ಜನಪ್ರಿಯತೆ ಲಭಿಸಿತು ಪರಿಣಾಮ ಅರಮನೆ ಮಂಡಳಿಯು ೧೮೮೨ ರಲ್ಲಿ 'ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ' ಎಂಬ ಹೆಸರನ್ನು ಪಡೆದು ತನ್ನ ರಂಗಚಟುವಟಿಕೆಗಳನ್ನು ವಿಸ್ತರಿಸಿತು.

ಮೈಸೂರು ಮಹಾರಾಜರ ಕೃಪಾಪೋಷಿತ ನಾಟಕ ಮಂಡಳಿಗೆ ಪ್ರತಿಸ್ಪರ್ಧಿಯೆನ್ನುವಂತೆ ಮಂಡ್ಯಂ ರಂಗಾಚಾರ್ಯರು, ಗೌರಿ ನರಸಿಂಹಯ್ಯನವರು, ಗಿರಿಭಟ್ಟರ ತಮ್ಮಯ್ಯ, ಚಿಕ್ಕ ಶೇಷಗಿರಿರಾಯರು, ಸರ್ಟನ್ ರಾಮರಾಯರು, ಚಿಕ್ಕ ರಾಮರಾಯರು ನಾಟಕ ಮಂಡಳಿಗಳನ್ನು ಸಂಘಟಿಸಿ ಜನರ ಆಶ್ರಯದಲ್ಲಿ ನಾಟಕಗಳನ್ನಾಡಿ ಮೆಚ್ಚುಗೆ ಗಳಿಸಿದರು. ಮಂಡ್ಯಂ ರಂಗಾಚಾರ್ಯ, ಗೌರಿ ನರಸಿಂಹಯ್ಯ ಅವರ ಶಿಷ್ಯರೇ

ಎ. ವ್ಹಿ. ವರದಾಚಾರ್ಯರು. ಇವರು ನಾಟಕ ಶಿರೋಮಣಿಯಾಗಿ ಸಂಗೀತ ನಾಟಕಗಳಲ್ಲಿ ಕೀರ್ತಿ ಸಂಪಾದಿಸಿದರು. ಇವರಾದ ಮೇಲೆ ಗುಬ್ಬಿ ವೀರಣ್ಣನವರು ಹಾಸ್ಯರತ್ನರಾಗಿ, ಮಹಮ್ಮದ ಪೀರ್ ಅವರು ಕಲಾಯೋಗಿಯಾಗಿ, ಸುಬ್ಬಯ್ಯ ನಾಯ್ಡು, ಕೆ. ಹಿರಣ್ಣಯ್ಯ, ಎಚ್. ಕೆ. ಎಲ್. ಸಿಂಹ ಇನ್ನೂ ಅನೇಕ ಜನ ಕಲಾವಿದರು ಮೈಸೂರು ಪ್ರದೇಶದಲ್ಲಿ ಅಭಿಜಾತ ನಟರಾಗಿ ರಂಗಭೂಮಿಯ ಸಮೃದ್ಧ ಬೆಳೆಯನ್ನು ಬೆಳೆಸಿದರು.

*ಅಡಿ ಟಿಪ್ಪಣಿಗಳು:*

೧. ಕರ್ನಾಟಕ ರಂಗಭೂಮಿ, ಡಾ॥ ಎಚ್. ಕೆ. ರಂಗನಾಥ, ಪುಟ: ೧೯.
೨. ಸಂಸ್ಕೃತ ನಾಟಕ, ಎ. ಆರ್. ಕೃಷ್ಣಶಾಸ್ತ್ರಿ, ಮೈಸೂರು ವಿಶ್ವವಿದ್ಯಾಲಯ, ಪುಟ: ೧೩.
೩. ಕರ್ನಾಟಕ ರಂಗಭೂಮಿ, ಡಾ॥ ಎಚ್. ಕೆ. ರಂಗನಾಥ, ಪುಟ: ೨೦
೪. ಕರ್ನಾಟಕ ರಂಗಭೂಮಿ, ಡಾ॥ ಎಚ್. ಕೆ. ರಂಗನಾಥ, ಪುಟ: ೨೨.
೫. ಶರಣರ ಕುರಿತ ನಾಟಕಗಳು, ಕೆ. ಎಂ. ಇಂಡಿ. ಪಿ. ಎಚ್.ಡಿ ಮಹಾಪ್ರಬಂಧ
೬. The Theory of Drama, Page No: 9
೭. ಕರ್ನಾಟಕ ರಂಗಭೂಮಿ, ಡಾ॥ ಎಚ್. ಕೆ. ರಂಗನಾಥ, ಪುಟ:೨೨.
೮. ಕೈಲಾಸಂ ನಾಟಕಗಳ ಪ್ರಾಚೀನತೆ, ಅ.ನ.ಕೃ, ಪುಟ:೦೫
೯. ಆದಿಪುರಾಣ ಸಂ. ೧೧, ಕೆ. ಈ. ಕುಂದಣಗಾರ ದಿವಾನ ಬಹದ್ದೂರ, ಎಚ್.ಪಿ. ಚೌಗಲೆ ಆಶ್ವಾಸ ೭, ಪದ್ಯ ೧೧೫, ಪುಟ: ೧೧೮.
೧೦. ಶರಣರ ಕುರಿತ ನಾಟಕಗಳು, ಕೆ. ಎಂ. ಇಂಡಿ. ಪಿಎಚ್.ಡಿ ಮಹಾಪ್ರಬಂಧ ೨೦೦೫
೧೧. ಅದೇ ಪುಟ ೯.
೧೨. ಕರ್ನಾಟಕ ರಂಗಭೂಮಿ, ಡಾ॥ ಎಚ್. ಕೆ. ರಂಗನಾಥ, ಪುಟ: ೩೨.
೧೩. ಉದ್ಧರಣೆ ಅದೇ, ಪುಟ ೩೨.
೧೪. ಉದ್ಧರಣೆ, ಅದೇ, ಪುಟ ೩೯.
೧೫. ಉದ್ಧರಣೆ, ಅದೇ, ಪುಟ: ೪೦.
೧೬. ಉದ್ಧರಣೆ, ಅದೇ, ಪುಟ: ೪೨.
೧೭. R.K. Yaznik: The Indian Theater, Page, 90
೧೮. ಕೀರ್ತಿನಾಥ ಕುರ್ತಕೋಟಿ: 'ಕನ್ನಡ ರಂಗಭೂಮಿ ಅಂದು ಇಂದು. ಪುಟ: ೧೯
೧೯. ವಿಷ್ಣುಪಂತ ಭಾವೆ: ನಾಟ್ಯಕವಿತಾ ಸಂಗ್ರಹ-ಪ್ರಸ್ತಾವನೆ. ಪುಟ: ೫
೨೦. ಶ್ರೀ. ನಾ. ಬನಹಟ್ಟಿ: ಮರಾಠೀ ರಂಗಭೂಮಿಚಾ ಇತಿಹಾಸ. ಭಾಗ-೧, ಪುಟ:೨೩
೨೧. ಯಕ್ಷಗಾನ ಆಣಿ ಮರಾಠೀ ನಾಟ್ಯಪರಂಪರಾ, ಪುಟ:೨೫
೨೨. ಪ್ರಾ. ನರಹರ ಕುರಂದಕರ 'ಯಕ್ಷಗಾನ ಆಣಿ ಮರಾಠೀ ನಾಟ್ಯ ಪರಂಪರಾ, ಪುಟ:೧೪
೨೩. ಶ್ರೀ. ನಾ. ಬನಹಟ್ಟಿ: ಮರಾಠೀ ರಂಗಭೂಮಿಚಾ ಇತಿಹಾಸ, ಪುಟ:೪೫
೨೪. ಪ್ರಹ್ಲಾದ ಮುದುಗಲ: ವಿಷ್ಣುದಾಸ ಭಾವೆ ಮರಾಠಿ ರಂಗಭೂಮಿಯ ಪಿತಾಮಹನೇ?, ಕಸ್ತೂರಿ. ಫೇ-೧೯೯೬, ಪುಟ:೫೯
೨೫. ಯಕ್ಷಗಾನ ಆಣಿ ಮರಾಠೀ ನಾಟ್ಯಪರಂಪರಾ, ಪುಟ:೪೮
೨೬. ಮುದವೀಡು ಕೃಷ್ಣರಾಯರು: 'ಶಾಕುಂತಲ ನಾಟಕ' ಮುನ್ನಡಿ
೨೭. ಮುದವೀಡು ಕೃಷ್ಣರಾಯರು: 'ಶಾಕುಂತಲ ನಾಟಕ' ಮುನ್ನಡಿ
೨೮. ಶ್ರೀರಂಗ ವ್ಯವಸಾಯ ರಂಗಭೂಮಿಯ ಐತಿಹಾಸಿಕ ಹಿನ್ನಲೆ: ಕನ್ನಡ ರಂಗಭೂಮಿ ನಡೆದು ಬಂದ ದಾರಿ, ಪುಟ:೨೪
೨೯. ಡಾ. ರಾಮಕೃಷ್ಣ ಮರಾಠೇ: "ಕೊಣ್ಣೂರ ನಾಟಕ ಕಂಪನಿ", ಪುಟ:
೩೦. ಡಾ. ಎಚ್. ಕೆ. ರಂಗನಾಥ: 'ಕರ್ನಾಟಕ ರಂಗಭೂಮಿ', ಪುಟ: ೧೩೯

# ಅಧ್ಯಾಯ - ಮೂರು
# ಕರ್ನಾಟಕ ವೃತ್ತಿರಂಗಭೂಮಿ ಮತ್ತು ವಾಮನರಾವ ಮಾಸ್ತರ

ಅ) ವಾಮನರಾವ ಮಾಸ್ತರರ ಜೀವನ

ಆ) ಶಿರಹಟ್ಟಿ ಕಂಪನಿ ಪ್ರವೇಶ

ಇ) ಗಾಯಕ - ನಾಯಕ ನಟ

ಈ) ನಾಟಕಕಾರ

ಉ) ಮರಾಠಿ ನಾಟಕಗಳ ಅನುವಾದ

ಊ) ನಾಟಕ ಕಂಪನಿ ಮಾಲೀಕ

ಎ) ಕುಟುಂಬವತ್ಸಲ

## ಅಧ್ಯಾಯ – ಮೂರು

# ಕರ್ನಾಟಕ ವೃತ್ತಿರಂಗಭೂಮಿ ಮತ್ತು ವಾಮನರಾವ ಮಾಸ್ತರರು

**ಪೀಠಿಕೆ:**

'ವಾಮನರಾವ ಮಾಸ್ತರ', ಕನ್ನಡ ರಂಗಭೂಮಿ ಕಲಾವಿದರಲ್ಲಿಯೇ ದೊಡ್ಡ ಗೌರವದ ಹೆಸರು. ಕಲೆ ಮತ್ತು ಚಾರಿತ್ರ್ಯ ಎರಡನ್ನೂ ಪುಟಕ್ಕಿಟ್ಟ ಚಿನ್ನದಂತೆ ಬಳಸಿ, ಬೆಳಗಿಸಿ ತೋರಿಸಿದ ಕಲಾವಿದರಲ್ಲಿ ವಾಮನರಾವ ಮಾಸ್ತರ ಅಗ್ರಗಣ್ಯರು. ರಂಗ ಕಲಾವಿದರ ಮಾತಿನಲ್ಲಿ, ರಂಗ ಕಲಾವಿದರ ಚರಿತ್ರೆಗಳಲ್ಲಿ ವಾಮನರಾವ ಎಂಬ ಒಂಟಿ ಹೆಸರು ಪ್ರಸ್ತಾಪವಾಗುವುದೇ ಇಲ್ಲ. ಹೆಸರಿನ ಜೊತೆ 'ಮಾಸ್ತರ' ಎಂಬ ಗೌರವಪದ ಬರಲೇಬೇಕು. ಅದು ಅವರ ವ್ಯಕ್ತಿತ್ವದ ವಿಶೇಷತೆಯಾಗಿತ್ತೆಂಬುದನ್ನು ಅವರ ಬದುಕಿನ ಅನೇಕ ವಿವರಗಳು ಹೇಳುತ್ತವೆ. ರಂಗಕಲೆ ಕಾಯಕವನ್ನಾಗಿ ಸ್ವೀಕರಿಸುವುದಕ್ಕಿಂತ ಮೊದಲು ಶಾಲಾ ಮಾಸ್ತರರಾಗಿದ್ದರು. ರಂಗಭೂಮಿ ಪ್ರವೇಶಿಸಿದ ಮೇಲೆಯೂ ನಾಟಕ ಕಲಿಸುವ ಮಾಸ್ತರಿಕೆಯನ್ನು ಯಶಸ್ವಿಯಾಗಿ ನಿರ್ವಹಿಸಿದರು. ರಂಗಭೂಮಿಯವರಿಗೆ ಆದರ್ಶ ಕಲಾವಿದರೆಂದು ಅವರು ಮಾದರಿಯಾಗಿದ್ದರು. ತಮ್ಮ ಸುತ್ತಮುತ್ತ ಇರುವವರಿಗೆ, ಜೊತೆಗೆ ತಾವು ಕಟ್ಟಿದ ಕಂಪನಿಯಲ್ಲಿದ್ದ ಕಲಾವಿದರಿಗೆ ಆದರ್ಶದ ಪಾಠಗಳನ್ನು ಹೇಳುತ್ತ ಅದರಂತೆಯೇ ಬದುಕುತ್ತ, ಬದುಕಿಸುತ್ತ ಬಂದ ಶ್ರೇಷ್ಠರು ವಾಮನರಾವ ಮಾಸ್ತರರು. ಅವರ ಸ್ನೇಹಿತ, ಸಹದ್ಯೋಗಿ ಕಲಾವಿದ ಕೊಟ್ಟೂರಪ್ಪನವರು ತಮ್ಮ ಆತ್ಮಕಥೆಯಲ್ಲಿ, ವಾಮನರಾವ ಅವರನ್ನು ಕುರಿತು ಹೀಗೆ ಹೇಳಿದ್ದಾರೆ[೧]. 'ವಾಮನರಾಯರಿಗೆ ಆಗ ೨೪–೨೫ ವರ್ಷಗಳಿರಬಹುದು, ಒಳ್ಳೆಯ ಸದೃಢವಾದ ದೇಹಸೌಷ್ಠವ, ಲಕ್ಷಣವಾದ ಮುಖ, ಎತ್ತರ ನಿಲುವು, ನಡಿಗೆ ಎಲ್ಲವೂ ಗಂಭೀರ, ಜೊತೆಗೆ ಸೊಗಸಾದ ಕಂಠ, ಹಾಡಿದರೆ ಸಹಜವಾದ ಮಾಧುರ್ಯ. ಸಾಹಿತ್ಯದಲ್ಲಿ ಅಭಿರುಚಿ–ಆಸಕ್ತಿಗಳಿದ್ದು ಮಾತುಗಳನ್ನು ಹೇಗೆ ಅರ್ಥಗರ್ಭಿತವಾಗಿ ಆಡಬೇಕು ಎಂಬುದನ್ನೆಲ್ಲ ವಿವರಿಸಿ ಕಲಿಸಬಲ್ಲವರಾಗಿದ್ದರು. ನಾಟಕಕ್ಕೆ ಹೇಳಿ ಮಾಡಿಸಿದ ಹಾಗಿದ್ದರು. ಅವರು ಬಂದದ್ದು ವೆಂಕೋಬರಾಯರಿಗೆ ಬಲ ಬಂದ ಹಾಗಾಯಿತು. 'ಸಂಗೀತದ ಅಭ್ಯಾಸ ನಾಟಕದ ತಾಲೀಮು' ಈ ಎರಡಕ್ಕೂ ಗುರುಗಳು ಸಿಕ್ಕ ಹಾಗಾಯಿತು' ಎಂದಿದ್ದಾರೆ. ವಾಮನರಾಯರು ಶಿರಹಟ್ಟಿ ಕಂಪನಿ ಪ್ರವೇಶಿಸಿದ ಸಂದರ್ಭದಲ್ಲಿ ಕೊಟ್ಟೂರಪ್ಪನವರು ಆಗಲೇ ಆ ಕಂಪನಿಯಲ್ಲಿದ್ದರು. ಸ್ತ್ರೀ ಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಅವರ ಮಾತಿನಲ್ಲಿ ವಾಮನರಾವ ಮಾಸ್ತರರ ವ್ಯಕ್ತಿತ್ವ ಪರಿಚಯವಾಗುತ್ತದೆ. ಅವರ ಆದರ್ಶ ಗುಣಗಳನ್ನು ಬಸವರಾಜ ಮನಸೂರರು ನೆನೆಸಿಕೊಂಡಿದ್ದು ಹೀಗೆ[೨] "ನನ್ನ ಕಿರಿಯ ವಯಸ್ಸಿನಲ್ಲಿ ವಾಮನರಾಯರಂಥ ನಿರ್ವ್ಯಸನಿ, ಸದ್ಗುಣಿ, ಸಂಭಾವಿತ ಗುರುಗಳು ದೊರೆತಿದ್ದು ನಮ್ಮ ಭಾಗ್ಯ. ಅಂದು ಅವರು ಹಾಕಿಕೊಟ್ಟ ಮೇಲ್ಪಂಕ್ತಿ. ಇಂದಿಗೂ ನಮ್ಮೊಂದಿಗೆ ಇದೆ. ಅವರು ಕಲಿಸಿದ ಶಿಸ್ತು, ಸಂಯಮ, ಅಚ್ಚುಕಟ್ಟುತನ, ಸತತ ಶ್ರಮ ನಿರ್ವ್ಯಸನ, ನಿರಾಲಸ್ಯ, ನನ್ನ ಬಾಳ ಸಂಗಾತಿಗಳಾಗಿ ಉಳಿದಿವೆ. ಅದರಿಂದಲೇ ನನ್ನ ಇಳಿ

ವಯಸ್ಸಿನಲ್ಲಿ ನಾನು ನಿರೋಗಿಯಾಗಿದ್ದೇನೆ'. ಬಸವರಾಜ ಮನಸೂರ ಅವರು ೨೭ನೆಯ ವಯಸ್ಸಿನಲ್ಲಿ ಹೇಳಿರುವ ಈ ಮಾತುಗಳು ವಾಮನರಾವ ಮಾಸ್ತರರನ್ನು ತುಂಬ ಆತ್ಮೀಯವಾಗಿ ಪರಿಚಯಿಸುತ್ತವೆ. ಸುಮಾರು ೩೫ ವರ್ಷಗಳ ರಂಗಸೇವೆಯಲ್ಲಿ ರಾಯರು ನಟರಾಗಿ, ನಾಟಕಕಾರರಾಗಿ, ನಾಟಕ ಕಂಪನಿಯ ಒಡೆಯರಾಗಿ ಮಾಡಿದ ಸಾಧನೆ ಅದ್ವಿತೀಯ, ಅನನ್ಯ. ಇವರ ಹಾಡುಗಾರಿಕೆಯನ್ನು ಮೆಚ್ಚಿದ ಕಿರ್ಲೋಸ್ಕರ ಕಂಪನಿಯ ನಾನಾಸಾಹೇಬ ಜೋಗಳೇಕರ, ಗಂಧರ್ವ ನಾಟಕ ಮಂಡಳಿಯ ಒಡೆಯ ಬಾಲಗಂಧರ್ವ ಮತ್ತು ಕೇಶವರಾವ ಭೋಸಲೆ ಮೊದಲಾದ ಹಿರಿಯರು ಮರಾಠಿ ರಂಗಭೂಮಿಯ ದಿಗ್ಗಜರು ತಮ್ಮ ನಾಟಕ ಮಂಡಳಿಗಳಿಗೆ ಬರುವಂತೆ ವಾಮನರಾಯರಿಗೆ ಆಮಂತ್ರಣ ಕೊಟ್ಟರು. ವಾಮನರಾವ ಮಾಸ್ತರರು ಮರಾಠಿ ರಂಗಭೂಮಿಯ ಮೇಲೆ ಮೆರೆಯಲು ಮನಸ್ಸು ಮಾಡಲಿಲ್ಲ. ಕನ್ನಡ ರಂಗಭೂಮಿಯನ್ನೇ ನೆಚ್ಚಿ ನಿಂತರು ಅದನ್ನೇ ಅವ್ಯಾಜವಾಗಿ ಪ್ರೀತಿಸಿದರು?. ಕಷ್ಟವೋ, ಸುಖವೋ ಕನ್ನಡ ನಾಟಕಗಳನ್ನೇ ಆಡಿ ಕನ್ನಡತನ ಮೆರೆದವರು. ಇಂಥ ಮಹಾನ್ ನಟನಿಂದಾಗಿಯೇ ಕರ್ನಾಟಕ ವೃತ್ತಿರಂಗಭೂಮಿಯ ಪೂರ್ವಾರ್ಧ ಕಥನವು ಅದ್ಭುತ ರೋಮಾಂಚಕಾರಿಯಾಗಿದೆ.

**ಅ: ವಾಮನರಾವ ಅವರ ಜೀವನ:**

ಬಾಗಿಲುಕೋಟೆ ಜಿಲ್ಲೆ, ಜಮಖಂಡಿ ತಾಲೂಕಿನ ರಬಕವಿಯ ಹುಂಡೇಕಾರ ಮನೆತನದಲ್ಲಿ ವಾಮನರಾವ ೧೮೮೩ ರಲ್ಲಿ ಅಕ್ಷಯ ತೃತೀಯದಂದು ಜನಿಸಿದರು. ಪರಂಪರೆಯಿಂದ ಶ್ರೀಮಂತ ಮನೆತನ. ಹಿರಿಯರು ಚಿನ್ನದ ವ್ಯಾಪಾರಿಗಳಾಗಿದ್ದರು. ಆದರೆ ದುರದೃಷ್ಟ ವಾಮನರಾವ ಹುಟ್ಟಿದಾರಭ್ಯ ಬಡತನ ಎದುರಾಗಿತ್ತು. ಇದ್ದುದರಲ್ಲಿ ಸುಖವಾಗಿ, ಸಮಾಧಾನದಿಂದ ಜೀವನ ಸಾಗಿಸುವ ಪ್ರಯತ್ನ ಹಿರಿಯರಿಂದ ನಡೆದಿತ್ತು. ಇಂಥ ಪರಿಸ್ಥಿತಿಯಲ್ಲಿ ತಂದೆ ತಾಯಿಗಳು ಈ ಮುದ್ದು ಮಗುವನ್ನು ಪ್ರೀತಿಯಿಂದ ಬೆಳೆಸಿದರು. ರಬಕವಿ, ಜಮಖಂಡಿ ಸಂಸ್ಥಾನಕ್ಕೆ ಒಳಪಟ್ಟ ಊರು. ಕೃಷಿ ಮತ್ತು ನೇಕಾರಿಕೆ ಇಲ್ಲಿಯ ಜನರ ಮುಖ್ಯ ಉದ್ಯೋಗ. ದುಡಿದುಡಿದು ಬೇಸತ್ತ ರೈತರಿಗೆ, ನೇಕಾರರಿಗೆ ಅಂದಿನ ಕಾಲದ ಮನರಂಜನೆ ಎಂದರೆ ದೊಡ್ಡಾಟ, ಶ್ರೀಕೃಷ್ಣ ಪಾರಿಜಾತ ಮತ್ತು ಸಂಗೀತ, ನಾಟಕಗಳು. ಹೊಲಗಳಲ್ಲಿಯ ಸುಗ್ಗಿ ಮುಗಿದು ಯುಗಾದಿಯಿಂದ ಮಳೆಗಾಲ ಬರುವ ತನಕ ಆಟ, ನಾಟಕಗಳನ್ನು ನೋಡುತ್ತ, ಆಡುತ್ತ ಜನರು ಸಂತೋಷದಿಂದ ನಲಿಯುತ್ತಿದ್ದರು. ಜಮಖಂಡಿಯ ಸಂಸ್ಥಾನಿಕರಾದ ಪಟವರ್ಧನ ದೇಸಾಯಿಯವರು ಕಲಾಪೋಷಕರು, ಕಲಾಭಿಮಾನಿಗಳಾಗಿದ್ದರು. ಅವರ ಮನೆಮಾತು ಮರಾಠಿ. ಹೀಗಾಗಿ ಮರಾಠಿ ನಾಟಕ ಕಂಪನಿಗಳು, ಹಿಂದೂಸ್ತಾನಿ ಗಾಯಕರು ಅವರ ಆಸರೆ ಬಯಸಿ ಬರುತ್ತಿದ್ದರು. ಇಂಥ ಸಾಂಸ್ಕೃತಿಕ ಪರಿಸರದಲ್ಲಿ ವಾಮನರಾವ ಮಾಸ್ತರರ ಬಾಲ್ಯದ ದಿನಚರಿ ಗರಿಗೆದರಿತು. ಹಾಡು ಕೇಳುವುದು, ಹಾಡುಗಳನ್ನು ಗುನುಗುನಿಸುವುದು ಬಾಲಕ ವಾಮನರಾಯನ ಹವ್ಯಾಸವಾಗಿತ್ತು. ಬಾಲಕನ ಹವ್ಯಾಸಕ್ಕೆ ಸಹಾಯ ಮಾಡುವ ರೀತಿಯಲ್ಲಿ ಹಾರ್ಮೋನಿಯಂ (ಪೇಟಿ) ಮನೆಯಲ್ಲಿತ್ತು. ದೇವರನಾಮ, ಪ್ರಾರ್ಥನೆ,

ಭಜನೆಗಳನ್ನು ಹಾಡಬೇಕೆಂದು ತಂದೆ-ತಾಯಿಗಳು ಪ್ರೋತ್ಸಾಹಿಸುತ್ತಿದ್ದರು. ಶಾಲೆಯಲ್ಲಿಯೂ ವಾಮನರಾವ ಪ್ರತಿಭಾವಂತ ವಿದ್ಯಾರ್ಥಿಯೆನಿಸಿದ್ದ. ಮರಾಠಿ ಭಾಷೆಯ ಪ್ರಭಾವ ದಟ್ಟನಾಗಿದ್ದ ಕಾಲವದು. ವಿದ್ಯಾರ್ಥಿಗಳು ಮರಾಠಿ ಕಲಿಯಬೇಕಾಗಿತ್ತು. ವಾಮನರಾವ ಕನ್ನಡ, ಮರಾಠಿ ಎರಡೂ ಭಾಷೆಗಳನ್ನು ಓದುತ್ತಿದ್ದರು, ಬರೆಯುತ್ತಿದ್ದರು. ಇವರ ಬುದ್ಧಿವಂತಿಕೆಗೆ ನಿದರ್ಶನವಾಗುವಂಥ ಘಟನೆಯೊಂದು ಮುಲ್ಕೀ ಪರೀಕ್ಷೆಯಲ್ಲಿ ಜರುಗಿತ್ತೆಂದು ಅದನ್ನು ಎನ್ಕೆಯವರು ದಾಖಲಿಸಿದ್ದಾರೆ.

"ಹುಟ್ಟಾ ಚೇಷ್ಟೆಖೋರ ಸ್ವಭಾವ ವಾಮನರಾಯರದು. ಮುಲ್ಕೀ ಪರೀಕ್ಷೆಯಲ್ಲಿ ಎಲ್ಲ ಪೇಪರಗಳು ಅಷ್ಟಕಷ್ಟೇ ಆಗಿದ್ದವು. ಆಮೇಲೆ ಬಂತು ತೋಂಡಿ ಪರೀಕ್ಷೆ. ಕವಿತಾ ಪಾಠವೂ ನಡೆಯಿತು. ಎತ್ತಿದ ಕಂಠದಲ್ಲಿ ಬಾಯಿ ಸಡಿಲಿಸಿ ಕವಿತೆ ಹೇಳಿದಾಗ ಪರೀಕ್ಷಕರು ಖುಷಿಯಾಗಿ ಹೋದರು. 'ನಿನ್ನದು ಯಾವೂರಪ್ಪಾ ತಮ್ಮಾ?' ಎಂದು ಪರೀಕ್ಷಕರು ಕೇಳಿದಾಗ ಈ ಚಾಣಾಕ್ಷ ವಿದ್ಯಾರ್ಥಿ 'ನಮ್ಮೂರು ಬ್ಯಾಡಗಿ ಯಜ್ಜಾ' ಎಂದ. ಆವಾಗ ಬ್ಯಾಡಗಿ ವ್ಯಾಪಾರಸ್ಥರ ಪೈಕಿ ಅಂದರೆ ಮಾರ್ಕ್ಸ ಒಂದಿಷ್ಟು ಹೆಚ್ಚಿಗೆ ಬೀಳುವ ಸಂಭವವಿತ್ತಂತೆ. ಪರೀಕ್ಷಕರ ಪ್ರವೃತ್ತಿ, ಮನೋವೃತ್ತಿಗಳನ್ನು ಅರಿತುಕೊಂಡು ಅದರಂತೆ ಮಣೆ ಹಾಕಿದ ಹುಡುಗ, ಸಾಹೇಬರೇ, ಮಾರ್ಕ್ಸ ಒಂದಿಷ್ಟು ನೋಡಿ ಹಾಕಿರಿ' ಎಂದು ಬಾಯ್ತೆರೆದು ಹೇಳಿದಾಗ 'ತಮ್ಮ ನನ್ನ ಕೈಯಾಗ ಎಷ್ಟ ಮಾರ್ಕ್ಸ ಅವ ಅಷ್ಟೆಲ್ಲಾ ಹಾಕೀನಿ' ಎಂದರಂತೆ". ಹುಡುಗ ಹೀಗೆ ಮುಲ್ಕೀ ಪರೀಕ್ಷೆ ಪಾಸಾದನು.

ವಾಮನರಾಯರ ಈ ವಿನೋದಿ ಸ್ವಭಾವವೇ ಮುಂದೆ ಅವರನ್ನು ಲೋಕಪ್ರಿಯ ನಟರನ್ನಾಗಿ ಮಾಡಲು ಸಹಾಯಕವಾಯಿತು. ಮುಲ್ಕೀ ಪರೀಕ್ಷೆ ಪೂರೈಸುವ ಮೊದಲೇ ವಾಮನರಾವ ಅವರ ಬದುಕಿನಲ್ಲಿ ಮಹತ್ವದ ಘಟನೆಯೊಂದು ಜರುಗಿತು. ಅದು, ದತ್ತಕ ಪ್ರಸಂಗ. ಇವರ ಸೋದರತ್ತೆ ಲಕ್ಷ್ಮೀಬಾಯಿ ಬಂಕಾಪೂರದಲ್ಲಿ ಇರುತ್ತಿದ್ದರು. ಇವರ ಗಂಡ ವಿನಾಯಕರಾವ ಸವಣೂರ ಇವರಿಗೆ ಮಕ್ಕಳಿರಲಿಲ್ಲ. ವಾಮನರಾವ ಅವರನ್ನು ದತ್ತಕ ತೆಗೆದುಕೊಳ್ಳಲು ನಿರ್ಧರಿಸುತ್ತಾರೆ. ಇವರು ಮನೆಯಿಂದ ತುಂಬ ಶ್ರೀಮಂತರು. ವಾಮನರಾವ ದತ್ತಕಪುತ್ರನಾಗಿ ಈ ಮನೆತನದ ಐಭೋಗ ಅನುಭವಿಸಬಹುದಾಗಿತ್ತು. ಆದರೆ ಸ್ವಾಭಿಮಾನಿ ಹುಟ್ಟಿದ ಊರನ್ನು ತೊರೆಯಲು ಮನಸ್ಸು ಮಾಡಲಿಲ್ಲ. ಆದರೆ ಆಗಾಗ ಬಂಕಾಪೂರಕ್ಕೆ ಬಂದು ಹೋಗುತ್ತಿದ್ದರು. ಬಂಕಾಪೂರದಲ್ಲಿ ಮ. ಪ್ರ. ಪೂಜಾರ (ವ್ಯಾಕರಣಕಾರ, ಭಾಷಾ ಪಂಡಿತ ಎಂದು ಪ್ರಸಿದ್ಧರು) ವಾಮನರಾವ ಗೆಳೆಯರಾಗಿದ್ದರು. ರಾಯರು ಸೊಗಸಾಗಿ ಹಾಡುತ್ತಿದ್ದರು. ದೈವದತ್ತ ಕಂಠಕ್ಕೆ ಶಾಸ್ತ್ರೀಯ ಸಂಸ್ಕಾರವೂ ಸಿಕ್ಕಿತು. ಜೊತೆಗೆ ಸಂಗೀತಾಸಕ್ತರ, ಸಂಗೀತ ರಸಿಕರ ಸಹವಾಸವೂ ಅವರಿಗೆ ಲಭ್ಯವಾಗಿತ್ತು.

ಮುಲ್ಕೀ ಪರೀಕ್ಷೆ ಮುಗಿಯುತ್ತಿದ್ದಂತೆ ವಾಮನರಾಯರು ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ನೇಮಕವಾದರು. ಅವರು ಆಗಿನ ಸಾಂಗಲಿ ಸಂಸ್ಥಾನದ ಶಹಾಪೂರ ತಾಲೂಕಿನ ಕಡೋಲಿಯಲ್ಲಿ ಮತ್ತು

ರಬಕವಿಯಲ್ಲಿ ಶಿಕ್ಷಕರಾಗಿ ಕೆಲವು ವರ್ಷ ಸೇವೆ ಸಲ್ಲಿಸಿದರು. ಶಿಕ್ಷಕ ವೃತ್ತಿಯ ಜೊತೆಗೆ ಸಂಗೀತದ ಆಸಕ್ತಿಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿಯೂ ತೊಡಗಿದರು. ನಾಟಕ ಕಲಿಯುತ್ತಿದ್ದ ಗೆಳೆಯರಿಗೆ ಸಂಗೀತ ಹೇಳಿಕೊಡುತ್ತಿದ್ದರು. ತಾವೂ ಸ್ವತಃ ಹಾಡಿ ರಸಿಕರನ್ನು ರಂಜಿಸುತ್ತಿದ್ದರು. ವಾಮನರಾಯರನ್ನು ತುಂಬ ಹತ್ತಿರದಿಂದ ಬಲ್ಲ ಎನ್ಕೆ ಕುಲಕರ್ಣಿ ಮತ್ತು ನಾಡಿಗ ಕೃಷ್ಣರಾಯರು ಉಲ್ಲೇಖಿಸಿದ ಮೂರು ಘಟನೆಗಳು ವಾಮನರಾಯರ ಸಂಗೀತ ಪ್ರೀತಿಯನ್ನು ಮತ್ತು ಅದರಲ್ಲಿಯ ಅವರ ಗತಿಯನ್ನು ತಿಳಿಸುತ್ತವೆ.

"ವಾಮನರಾಯರಿಗೆ ಇಪ್ಪತ್ತರ ಪ್ರಾಯವಿದ್ದಿರಬೇಕು. ತಮ್ಮೂರಾದ ರಬಕವಿಯಿಂದ ದತ್ತಕ ಊರಾದ ಬಂಕಾಪೂರ ಶಿಗ್ಗಾಂವಿ ಬಳಿ ಗಂಜೀಗಟ್ಟಿ ಹನುಮಂತ ದೇವರ ಜಾತ್ರೆ ಪ್ರಸಿದ್ಧವಾದುದು. ಜಾತ್ರೆಯಲ್ಲಿ ಶಿಗ್ಗಾಂವಿಯ ಹೆಸರಾಂತ ವೇಶ್ಯೆಯರ ಸಂಗೀತ, ನೃತ್ಯ ನಡೆದಿತ್ತು ವಾಮನರಾಯರು ಇದನ್ನು ನೋಡಲೆಂದು ಬಂದರು. ವೇಶ್ಯೆಯೊಬ್ಬಳ ಸಂಗೀತ ನಡೆದಿತ್ತು. ವಾಮನರಾಯರು ತಮ್ಮ ಮಿತ್ರನನ್ನು ಆಚೆಯ ಮರೆಗೆ ಕರೆದು 'ಒಂದಿಷ್ಟು ತಮಾಷೆ ಮಾಡ್ತೀನಿ ನೋಡು' ಎಂದು ಹೇಳಿ ಆಕೆಯ ಸಂಗೀತಕ್ಕೆ ತಾನಗಳನ್ನು ಏರಿಸಿ ಎತ್ತರದ ಸ್ವರದಲ್ಲಿ ದನಿಗೂಡಿಸಿದಾಗ ಸಭಿಕರ ದೃಷ್ಟಿ ಇತ್ತ ಕಡೆಯೇ ಹರಿಯಿತು. ಈ ಹುಡುಗ ಯಾರು ಎಂದು ಜಿಜ್ಞಾಸೆ ನಡೆಯಿತು. ಆತನಿಂದ ಸಂಗೀತದ ಲಾಭ ಪಡೆಯಬೇಕೆಂದು ಅಲ್ಲಿಯವರು ಬಯಸಿದರು. ಇದನ್ನು ಗಮನಿಸಿದ ವಾಮನರಾಯರು ತಮಾಷೆ ಮಾಡಿದ್ದೆ ತಡ ಅಲ್ಲಿಂದ ಕಾಲು ಕಿತ್ತಿದ್ದರು."[೪]

ಸವಣೂರಿನಲ್ಲಿ ಪ್ರತಿ ವರ್ಷವೂ ದೊಡ್ಡ ಪ್ರಮಾಣದ ಮೇಳ ಜರುಗುವ ಸತ್ಯಬೋಧ ಸ್ವಾಮಿಗಳ ಆರಾಧನೆಯ ಕಾಲಕ್ಕೆ ವಾಮನರಾಯರಿಗೂ, ನರಸಿಂಗರಾಯರಿಗೂ ಪ್ರಥಮ ಪರಿಚಯವಾಯಿತು. ಅವರು ಸರಳ ಸಜ್ಜನಿಕೆಯ, ಉದಾರ ಮನಸ್ಸಿನವರಾಗಿದ್ದರು. ವಾಮನರಾಯರ ಉತ್ತಮ ಸಂಗೀತವನ್ನು ಕೇಳಿ ಮುಗ್ಧರಾದ ನರಸಿಂಗರಾಯರು ಬರಬರುತ್ತ ವಾಮನರಾಯರ ಆತ್ಮೀಯ ಮಿತ್ರರಾದರು. ವಾಮನರಾಯರ ಮನಸ್ಸನ್ನು ಶಿಕ್ಷಣ ರಂಗದಿಂದ ನಾಟಕ ರಂಗಕ್ಕೆ ಸ್ಥಳಾಂತರಿಸಲು ಬಾಗಲ ನರಸಿಂಗರಾಯರು ಪ್ರೇರಕರಾದರು. ಇಂತಹ ಉತ್ತಮ ಗಾಯಕ ಪ್ರಾಥಮಿಕ ಶಾಲೆಯ ಶಿಕ್ಷಕನಾಗಿ ಉಳಿಯುವುದು ಅವರಿಗೆ ಇಷ್ಟವಿರಲಿಲ್ಲ. ಇವರಲ್ಲಿಯ ಸಂಗೀತವನ್ನು ಇನ್ನೂ ಹೆಚ್ಚು ಬೆಳೆಸಬೇಕು. ಸಂಗೀತ ಕ್ಷೇತ್ರಕ್ಕೆ ಇವರ ಸೇವೆ ಸಲ್ಲಲಿ ಎಂಬ ಮಹದಾಕಾಂಕ್ಷೆಯಿಂದ ರಂಗಭೂಮಿಯನ್ನು ಪ್ರವೇಶಿಸಲು ಹುರುಪು, ಉತ್ಸಾಹ ತುಂಬಿದಷ್ಟೇ ಅಲ್ಲ, ಆಸಕ್ತಿಯನ್ನು ಹೆಚ್ಚಿಸುವಲ್ಲಿ ಕಾರಣೀಕರ್ತರಾದರು.[೫]

"ವಾಮನರಾಯರ ಚಿಕ್ಕಪ್ಪನವರು ರಾಮದುರ್ಗದಲ್ಲಿದ್ದಾಗ ಅಪ್ಪಾಸಾಹೇಬ" ಕಿರ್ಲೋಸ್ಕರ ಕಂಪನಿಯ ಟಪ್ಪಾ ಪದ್ಧತಿಯ ರಂಗಗಾಯಕ, ಪ್ರಮುಖ ನಟರಾದ ಜೋಗಳೇಕರ ಅವರನ್ನು ತರುಣ ವಾಮನರಾಯರಿಗೆ ಪರಿಚಯ ಮಾಡಿಸಿದರು. ತರುಣ ವಾಮನರಾಯನ ಹಾವಭಾವ, ಅವನಲ್ಲಿಯ ಸಂಗೀತದ ಲಯ, ಶ್ರದ್ಧೆಯನ್ನು ಕಂಡು ತುಂಬಾ ಪುಳಕಿತರಾಗಿ, ಸಂಗೀತವನ್ನು ಕೇಳಿ ಮೆಚ್ಚಿಕೊಂಡರು.

ಅವರ ಕಂಪನಿಯಲ್ಲಿ ಯಾವುದಾದರೂ ಕೆಲಸವನ್ನು ಕೇಳಿದ್ದರೆ ಅವರು ಕೊಟ್ಟೇ ಕೊಡುತ್ತಿದ್ದರು. ಏಕೆಂದರೆ ವಾಮನರಾಯರು ಸಾಕಷ್ಟು ವ್ಯಾಸಂಗವನ್ನು ಮಾಡಿದ್ದರು. ಅದಲ್ಲದೆ ಮರಾಠಿ ಭಾಷೆ ಅವರಿಗೆ ಬರುತ್ತಿದ್ದುದರಿಂದ ಇದು ಸರಳವಾಗಿ ಆಗುತ್ತಿತ್ತು. ಆದರೆ ಅವರು ಅದಕ್ಕೆ ಮನಸ್ಸು ಮಾಡದೇ, ರಂಗಾಸಕ್ತಿ ತನ್ನತ್ತ ಸೆಳೆದುದರ ಪರಿಣಾಮವಾಗಿ ವಿಚಲಿತರಾಗದೇ ಸಂಗೀತದತ್ತ ಒಲವು ತೋರಿಸಿದರು. ಕಂಪನಿಯಲ್ಲಿ ಒಂದು ವೇಳೆ ಸೇರಿದ್ದರೆ, ವಾಮನರಾಯರ ಕೊರತೆ ರಂಗಭೂಮಿಗೆ ಆಗುತ್ತಿತ್ತೇನೋ ಎಂಬ ಅನುಮಾನ ಸಹಜವಾಗಿ ಮೂಡುತ್ತದೆ. ಅದು ಹಾಗೆ ಆಗದೆ, ದೈವೇಚ್ಛೆಯಂತೆ ರಂಗಸೇವೆಗೆ ಅಣಿ ಮಾಡಿದುದು ಸುಸಂದರ್ಭವೆಂದೇ ಹೇಳಿದರೆ ತಪ್ಪಾಗಲಿಕ್ಕಿಲ್ಲ"[೬]

ರಬಕವಿ, ಬಂಕಾಪೂರ-ಶಿಗ್ಗಾವಿ ಮತ್ತು ರಾಮದುರ್ಗ ಈ ಪ್ರದೇಶದೊಳಗಿನ ಕೆಲವು ಸಂಗೀತಾಸಕ್ತರಿಗೆ ವಾಮನರಾಯರ ಪರಿಚಯವಾಯಿತು. ಅವರಲ್ಲಿದ್ದ ಸಂಗೀತ ಪ್ರತಿಭೆಯ ಪರಿಚಯವೂ ಆಯಿತು. ಬಯಲಾಟಗಳು, ಶ್ರೀಕೃಷ್ಣ ಪಾರಿಜಾತ ಮತ್ತು ಮರಾಠಿ ನಾಟಕಗಳ ಪ್ರದರ್ಶನಗಳು ಈ ಪ್ರದೇಶದಲ್ಲಿ ಆಗಾಗ ಹುರುಪುಗಟ್ಟಿ ನಡೆಯುತ್ತಿದ್ದವು. ತರುಣ ವಾಮನರಾಯರು ಅವುಗಳಲ್ಲಿ ಆಸಕ್ತಿಯಿಂದ ಪಾಲ್ಗೊಳ್ಳುತ್ತಿದ್ದರು. ಸಮಯ ಸಂದರ್ಭ ನೋಡಿ ಹಾಡುತ್ತಿದ್ದರು. ಸಂಗೀತದಲ್ಲಿ ಗತಿಯುಳ್ಳ ಹಿರಿಯರಿಂದ ಕೇಳಿ ತಿಳಿದು ತಮ್ಮ ಸಂಗೀತ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಿದ್ದರು. ಶಾಲೆಯ ಶಿಕ್ಷಕವೃತ್ತಿಯ ಜೊತೆಗೇ ನಡೆದಿದ್ದ ಈ ಆಸಕ್ತಿಯ ಚಟುವಟಿಕೆಗಳು ಅವರನ್ನು ಕೆಲವೊಮ್ಮೆ ದ್ವಂದ್ವಕ್ಕೆ ಸಿಲುಕಿಸುತ್ತಿದ್ದವು. ಶಿಕ್ಷಕವೃತ್ತಿಯಲ್ಲಿ ಮುಂದುವರಿಯಬೇಕೋ ಬೇಡವೋ ಇಂಥ ಇಕ್ಕಟ್ಟಿನಲ್ಲಿ ಮನಸ್ಸು ಹೊಯ್ದಾಡುತ್ತಿತ್ತು.

ಮರಾಠಿಯ ಸುಪ್ರಸಿದ್ಧ 'ಕಿರ್ಲೋಸ್ಕರ ನಾಟಕ ಮಂಡಳಿ'ಯಲ್ಲಿದ್ದ ನಾನಾಸಾಹೇಬ ಜೋಗಳೇಕರ ಅವರು ರಾಯರ ಹಾಡುಗಾರಿಕೆ ಕೇಳಿ ಕಂಪನಿಗೆ ಕರೆದಿದ್ದರು. ಕನ್ನಡ ನಾಡಿನಲ್ಲಿ ಅದೇ ತಾನೆ ಗಟ್ಟಿಯಾಗಿ ನೆಲೆಯೂರಿದ್ದ ಶಿರಹಟ್ಟಿ ಕಂಪನಿಯ ಮಾಲೀಕರೂ ವಾಮನರಾಯರನ್ನು ಕರೆದಿದ್ದರು. ಅವರು ಒಂದು ದಿನ ಧಾರವಾಡದಲ್ಲಿ ಜರುಗಿದ ಸಣ್ಣ ಸಂಗೀತ ಕಚೇರಿಯಲ್ಲಿ ವಾಮನರಾಯರ ಹಾಡುಗಾರಿಕೆ ಕೇಳಿದ್ದರು.

ಧಾರವಾಡದಲ್ಲಿದ್ದ ತಿರುಮಲರಾಯರೆಂಬ ಗೃಹಸ್ಥರು ನಾಟಕದ ಖಯಾಲಿಯುಳ್ಳವರು. ಮುದುವೀಡು ಕೃಷ್ಣರಾಯರು ಆರಂಭಿಸಿದ್ದ 'ಭರತ ಕಲೋತ್ತೇಜಕ ಹವ್ಯಾಸಿ ನಾಟಕ ಸಂಸ್ಥೆ' ಯ ಪ್ರಮುಖರಾಗಿದ್ದರು. ಮದಿಹಾಳದಲ್ಲಿರುವ ಅವರ ಮನೆಯಲ್ಲಿ ಸಂಗೀತದ ಕಚೇರಿ ನಡೆಯಿತು. ಅಂದು ವಾಮನರಾಯರು ಸೊಗಸಾಗಿ ಹಾಡಿದರೆಂದು, ಶ್ರೋತೃವರ್ಗದಲ್ಲಿ ಶಿರಹಟ್ಟಿ ವೆಂಕೋಬರಾಯರೂ ಇದ್ದರೆಂದೂ ನಾಡಿಗ ಕೃಷ್ಣರಾಯರು ವಿವರಿಸಿದ್ದಾರೆ. ವಾಮನರಾಯರ ಸಂಗೀತವು ಅಲ್ಲಿದ್ದವರ ಮನಸೂರೆಗೊಂಡಿತು. ವಿಶೇಷವಾಗಿ ಶಿರಹಟ್ಟಿ ವೆಂಕೋಬರಾಯರು ಮತ್ತು ದೇಶಪಾಂಡೆ ತಿರುಮಲರಾಯ ಇಬ್ಬರೂ ರಾಯರ ಮಧುರ ಗಾಯನಕ್ಕೆ ಮಾರುಹೋದರು. ರಾಯರ ಹಾಡಿನಲ್ಲಿಯ ಸ್ವರಶುದ್ಧತೆ, ಆಲಾಪ ಮತ್ತು ಭಾವಾಭಿವ್ಯಕ್ತಿ ಕಂಡು ಮನಸಾರೆ ಕೊಂಡಾಡಿದರು. ಈ ಇಬ್ಬರೂ

ಮಹಾಶಯರು ತಮ್ಮ ತಮ್ಮ ಸಂಘಗಳಿಗೆ ಬರಬೇಕೆಂದು ಕೇಳಿಕೊಂಡರು. ತಿರುಮಲರಾಯರು ಧಾರವಾಡದ ಮುನ್ಸಿಪಲ್ ಶಾಲೆಯಲ್ಲಿ ಶಿಕ್ಷಕವೃತ್ತಿ ಕೊಡಿಸುವುದಾಗಿಯೂ ಆಶ್ವಾಸನೆ ಕೊಟ್ಟರು.

ವಾಮನರಾಯರ ಕುರಿತು ದಾಖಲಾದ ಅನೇಕ ಸಂಗತಿಗಳು ಅವರ ವ್ಯಕ್ತಿತ್ವದ ಹಿರಿಮೆಯನ್ನು ಬಣ್ಣಿಸುತ್ತವೆ. ಆ ವೇಳೆಗಾಗಲೇ ಅವರು ಕನ್ನಡ ಸಾಹಿತ್ಯದ ಪ್ರಮುಖ ಕೃತಿಗಳನ್ನು ಓದಿಕೊಂಡಿದ್ದರು. ಪ್ರಕಟಿತ ಮರಾಠಿ ನಾಟಕಗಳನ್ನು ಓದಿದ್ದರು. ಸಂಗೀತ ನಾಟಕಗಳನ್ನಂತೂ ಅನೇಕ ಬಾರಿ ನೋಡಿದ್ದರು. ಗಂಧರ್ವ ಸಂಗೀತ ನಾಟಕ ಮಂಡಳಿಯ ನಾಟಕಗಳಂತೂ ಅವರಿಗೆ ಕಂಠಪಾಠವಾಗಿದ್ದವು. ಬಾಲ ಗಂಧರ್ವರ ಹಾಡುಗಾರಿಕೆ ಅವರಿಗೆ ತುಂಬ ಪ್ರಿಯವಾಗಿತ್ತು. ಮೂಲ ಧಾಟಿಯಲ್ಲಿಯೇ ಮರಾಠಿ ನಾಟ್ಯಗೀತೆಗಳನ್ನು ಹಾಡುತ್ತಿದ್ದರು. ಸಂಗೀತ, ಸಾಹಿತ್ಯ ಅಭಿನಯ ಈ ಮೂರೂ ಗುಣಗಳಿಂದ ಅವರ ವ್ಯಕ್ತಿತ್ವವೇ ರಂಗಭೂಮಿಗೊಂದು ಸಂಪತ್ತಾಗಿ ನಿಲ್ಲಬಲ್ಲದು ಎಂದು ಯಾರಿಗಾದರೂ ಅನಿಸುತ್ತಿತ್ತು. ಕಂಡಲ್ಲಿ ಕಲೆಯನ್ನು ಗುರುತಿಸುವ ವ್ಯಾವಹಾರಿಕ ಬುದ್ಧಿಯ ಶಿರಹಟ್ಟಿ ವೆಂಕೋಬರಾಯರಂಥ ನಾಟಕ ಕಂಪನಿ ಮಾಲೀಕರಿಗೆ ವಾಮನರಾವ ಮಾಸ್ತರರು ಬಂಗಾರದ ಗಣಿಯಂತೆ ಕಂಡುದರಲ್ಲಿ ಆಶ್ಚರ್ಯವಿಲ್ಲ.

ವಾಮನರಾಯರ ಅಂತರಂಗವಾದರೂ ರಂಗಕಲೆಯತ್ತ ತುಡಿಯುತ್ತಿತ್ತು. ಮರಾಠಿಯ ಪ್ರತಿಷ್ಠಿತ ನಾಟಕ ಕಂಪನಿ. ಕನ್ನಡದ ಎರಡು ಶ್ರೇಷ್ಠ ನಾಟ್ಯ ಸಂಘಗಳು 'ಬಾ' ಎಂದು ಕರೆಯುತ್ತಿರುವಾಗ ಅದ್ಭುತ ರಾಗಪ್ರತಿಭೆಯ ವಾಮನರಾವ ಮಾಸ್ತರ ಗೊಂದಲಕ್ಕೆ ಸಿಕ್ಕರು. ನಾಟಕ ಕಂಪನಿ ಸೇರಬೇಕೋ ಇಲ್ಲ ಶಾಲೆಯ ಮಾಸ್ತರ ಆಗಿ ಮುಂದುವರೆಯಬೇಕೋ? ಹೋದರೆ ಯಾವ ನಾಟಕ ಕಂಪನಿಗೆ ಹೋಗಬೇಕು? ಇಂಥ ಪ್ರಶ್ನೆಗಳು ಅವರನ್ನು ಮುತ್ತಿಕೊಂಡಾಗ ನೆರವಿಗೆ ಬಂದವರು ಬಾಗಲ ನರಸಿಂಹರಾಯರು.

**ಆ: ಶಿರಹಟ್ಟಿ ನಾಟಕ ಕಂಪನಿ ಪ್ರವೇಶ:**

ನರಸಿಂಗರಾಯರು ವಾಮನರಾಯರು ಸಂಗೀತ ಭಕ್ತರು, ಅಭಿಮಾನಿಗಳು, ಮೇಲಾಗಿ ಗೆಳೆಯರು. ರಾಯರ ಉಜ್ವಲ ಭವಿಷ್ಯ ಸಂಗೀತ, ನಾಟಕ ಕ್ಷೇತ್ರದಲ್ಲಿಯೇ ಇರುವುದೆಂದು ಆ ಕ್ಷೇತ್ರವನ್ನೇ ಅವರು ಆಯ್ದುಕೊಳ್ಳಬೇಕೆಂದು ಹಂಬಲಿಸುತ್ತಿದ್ದರು. ನಾಟಕ ಕಂಪನಿಗಳಿಂದ ಬೇಡಿಕೆಗಳು ಬರತೊಡಗಿದಾಗ ಇವರೇ ಮಾರ್ಗದರ್ಶನಕ್ಕೆ ಮುಂದಾದರು. ನರಸಿಂಗರಾಯರಿಗೆ ಶಿರಹಟ್ಟಿ ವೆಂಕೋಬರಾಯರ ಪರಿಚಯವಿತ್ತು. ಐದಾರು ವರ್ಷಗಳಲ್ಲಿ ಅವರ ಕಂಪನಿಯು ಬೆಳವಣಿಗೆ ಕಂಡಿತು. ಅದುವೇ ವಾಮನರಾಯರ ಯೋಗ್ಯತೆಗೆ ಸೂಕ್ತವಾದ ನಾಟಕ ಮಂಡಳಿ ಎಂಬ ತೀರ್ಮಾನಕ್ಕೆ ಬಂದರು. ವಾಮನಯರಾಯರಿಗೂ ಈ ಕುರಿತು ತಿಳಿ ಹೇಳಿದರು. ಶಿರಹಟ್ಟಿ ವೆಂಕೋಬರಾಯರಿಗೂ ವಿಷಯ ತಿಳಿಸಿದರು. ನರಸಿಂಗರಾಯರ ಒತ್ತಾಯಕ್ಕೆ ಮಣಿದು ವಾಮನರಾವ ಶಿಕ್ಷಕವೃತ್ತಿಗೆ ರಾಜೀನಾಮೆ ನೀಡಲು ನಿರ್ಧರಿಸಿದರು.

ಇದೇ ಸಂದರ್ಭದಲ್ಲಿ ಶಿರಹಟ್ಟಿ ವೆಂಕೋಬರಾಯರ ಕಂಪನಿ ಬಾಗಲಕೋಟೆಗೆ ಬಂದಿತ್ತು. ಬಾಗಲಕೋಟೆಗೆ ಬರಲು ವಾಮನಯರಾಯರಿಗೆ ಆಮಂತ್ರಣ ಬಂದಿತ್ತು. ಅವರ ಜೊತೆ ವ್ಯವಹಾರಿಕವಾದ ವಿಷಯವನ್ನು ಮಾತನಾಡುವುದು ವಾಮನರಿಗೆ ಸರಿಯೆನಿಸದೇ ಮುಜುಗರಕ್ಕೊಳಗಾಗಿ ತಮ್ಮ ಜೊತೆಗೆ ಹಿತೈಷಿ ಬಾಗಲ ನರಸಿಂಗರಾಯರನ್ನು ಕರೆದುಕೊಂಡು ಹೋದರು. ಬಾಗಲಕೋಟೆ ಸ್ಟೇಶನ್ ಬಳಿ ವೆಂಕೋಬರಾಯರು ಕಳಿಸಿಕೊಟ್ಟಿದ್ದ 'ಡಮಣಿ' ಇವರಿಗಾಗಿ ಕಾಯುತ್ತಿತ್ತು. ಅನೇಕ ರಂಗರಸಿಕರು ಅಲ್ಲಿ ಸೇರಿದರು. ವೆಂಕೋಬರಾಯರು ವಾಮನರಾಯರ ಗೌರವಾರ್ಥ ಸತ್ಕಾರಕೂಟವನ್ನು ಏರ್ಪಾಟು ಮಾಡಿದ್ದರು. ಒಳ್ಳೆಯ ಮಾತುಗಾರರೂ, ನಿಶಿತಮತಿಗಳು ಆದ ವೆಂಕೋಬರಾಯರು ಬಂದ ಜನರ ಮುಂದೆ ವಾಮನರಾಯರ ಪರಿಚಯವನ್ನು ಖುಷಿಯಿಂದ ಮಾಡಿಕೊಟ್ಟರು. ಭರ್ಜರಿ ಮೇಜವಾನಿಯಾದ ಮೇಲೆ ಅವರಿಗೆ ಬೆಲೆಯುಳ್ಳ ರೇಷ್ಮೆ ರುಮಾಲು ಮತ್ತು ಜರತಾರಿ ಶಲ್ಯವನ್ನು ಬೆಳ್ಳಿತಟ್ಟೆಯಲ್ಲಿ ಇಟ್ಟು ತಾಂಬೂಲ ಸಮೇತ ಗೌರವಿಸಿದರು.

ಸಂಜೆ ಸಮಯದಲ್ಲಿ ಕರಾರುಗಳು ಚರ್ಚಿತವಾಗಿ ತಿಂಗಳಿಗೆ ಅರವತ್ತು ರೂಪಾಯಿ ಸಂಬಳ ಹಾಗೂ ದಿನನಿತ್ಯ ಜೀವನಕ್ಕೆ ಬೇಕಾಗುವ ಸಾಧನ ಸಾಮಗ್ರಿಗಳನ್ನು ಸಂಸಾರಕ್ಕೆ ಕೊಡಬೇಕೆಂದು ನಿಶ್ಚಯವಾಯಿತು. 'ಸೆಕೆಂಡ್ ಕ್ಲಾಸ್' ರೈಲಿನಲ್ಲಿ ಮರುದಿನ ಬೆಳಿಗ್ಗೆ ವಾಮನರಾಯರನ್ನು ಸಂತಸದಿಂದ ಬೀಳ್ಕೊಟ್ಟರು. 'ವಾಮನರಾಯರು ಶಿರಹಟ್ಟಿ ವೆಂಕೋಬರಾಯರ ಕಂಪನಿಗೆ ಸೇರಿದ್ದು ಗಾಯಕರಾಗಿ, ಆದರೆ ಅವರು ನಟರಾಗಿ ಪ್ರಖ್ಯಾತಿ ಪಡೆದುಕೊಂಡಿದ್ದು ತದನಂತರದಲ್ಲಿ. ಶಿರಹಟ್ಟಿಯ ವಾಮನರಾವ ಮಾಸ್ತರ ಎನ್ನುವಷ್ಟರ ಮಟ್ಟಿಗೆ ಇವರು ಪ್ರೀತಿಯನ್ನು ಸಂಪಾದಿಸಿಕೊಂಡರು[೭].

ಶಿರಹಟ್ಟಿ ಕಂಪನಿ ಬಾಗಲಕೋಟೆಯಲ್ಲಿದ್ದಾಗ ವಾಮನರಾಯರು ಮಾಸ್ತರ ನೌಕರಿ ಬಿಟ್ಟು ಕಂಪನಿ ಸೇರಿದರು. ಅದು ೧೯೧೦೫ ರ ಸಂದರ್ಭ. ಪ್ರತಿಭಾವಂತ ಹೊಸ ನಟನ ಆಗಮನದಿಂದ ವೆಂಕೋಬರಾಯರು ಸಂತೋಷಪಟ್ಟರು. ಕಂಪನಿ ಪ್ರಾರಂಭವಾದಾಗಿನಿಂದ ಸ್ತ್ರೀಪಾತ್ರದಲ್ಲಿ ಅಭಿನಯಿಸುತ್ತಿದ್ದ ಕೊಟ್ಟೂರಪ್ಪನವರು ವಾಮನರಾಯರು ಕಂಪನಿ ಪ್ರವೇಶಿಸಿದ ಸಂದರ್ಭವನ್ನು ಸ್ಮರಿಸಿ ಕೊಂಡಿದ್ದಾರೆ. ಅದೊಂದು ಅವಿಸ್ಮರಣೀಯ ಸನ್ನಿವೇಶ. 'ವಾಮನರಾಯರಿಗೆ ಆಗ ೨೪-೨೫ ವರ್ಷಗಳಿರಬಹುದು. ಒಳ್ಳೆ ಸದೃಢವಾದ ದೇಹಸೌಷ್ಠವ. ಲಕ್ಷಣವಾದ ಮುಖ, ಒಳ್ಳೆಯ ನಿಲುವು, ನಡಿ-ನುಡಿ ಎಲ್ಲವೂ ಗಂಭೀರ. ಜೊತೆಗೆ ಸೊಗಸಾದ ಕಂಠ. ಹಾಡಿದರೆ ಸಹಜವಾದ ಮಾಧುರ್ಯ. ಸಂಗೀತದಲ್ಲಿ ವಿಶೇಷ ಆಸಕ್ತಿ ಇದ್ದ ನನಗಂತೂ ಅತೀವ ಸಂತೋಷವಾಯಿತು. ಮಾಸ್ತರರಿಗೂ ಬಹುಬೇಗ ನನ್ನ ಬಗ್ಗೆ ಪ್ರೀತಿ ಉಂಟಾಯಿತು. ಅವರ ಬಳಿ ಒಂದು ಸೊಗಸಾದ ಹಾರ್ಮೋನಿಯಂ ಇತ್ತು. ಅದನ್ನು ಮುಟ್ಟಲು ಅವರು ಅವಕಾಶ ಕೊಡುತ್ತಿರಲಿಲ್ಲ. ಆದರೆ ನನಗೆ ಮಾತ್ರ ಅನುಮತಿ ಸಿಕ್ಕಿತು. ಅದೂ ಕೆಲವು ತಿಂಗಳ ಬಳಿಕ... "ಭೋಜ ಪ್ರಬಂಧ" ನಾಟಕವೂ ವಾಮನರಾಯರ ಮಧುರಕಂಠದ ಹಾಡುಗಳಿಂದ, ಅವರ

ಮನೋಜ್ಞವಾದ ಅಭಿನಯದಿಂದ ಮತ್ತಷ್ಟು ಜನಪ್ರಿಯವಾಯಿತು. ಕಂಪನಿಯು ಮಂಗಳೂರು, ಮೈಸೂರು, ಕೊಯಿಮತ್ತೂರುಗಳಲ್ಲಿ ಸಂಚರಿಸಿ ಜಯಭೇರಿ ಹೊಡೆಯಿತು. ಅದಕ್ಕೆ ವೆಂಕೋಬರಾಯರ ಶಿಸ್ತು, ದಕ್ಷ ವ್ಯವಸ್ಥೆಗಳು ಕಾರಣವಾದಷ್ಟೆ ನಾಟಕಗಳ ಯಶಸ್ಸಿಗೆ ಮಾಸ್ತರರು ಗಾಯನ ಹಾಗೂ ಅಭಿನಯದಲ್ಲಿ ನೀಡಿದ ತರಬೇತಿಯೂ ಕಾರಣ. ಆದ್ದರಿಂದ ಕಂಪನಿ ಹೆಚ್ಚಿನ ಕೀರ್ತಿಯನ್ನು ಗಳಿಸಿದ್ದರ ಶ್ರೇಯಸ್ಸು ವಾಮನರಾಯರಿಗೆ ಸಲ್ಲಬೇಕು[೮]. ವೆಂಕೋಬರಾಯರಿಗೆ ಮಾಸ್ತರರ ಬಗ್ಗೆ ತುಂಬಾ ಗೌರವವಿತ್ತು. ಮಾಸ್ತರರಿಗೆ ಕನ್ನಡದಂತೆ ಮರಾಠಿ ಸಾಹಿತ್ಯದಲ್ಲೂ ಒಳ್ಳೆಯ ಪರಿಶ್ರಮವಿತ್ತು. ಅವರಿಗೆ ಮರಾಠಿ ನಾಟಕಗಳನ್ನು ಕನ್ನಡಕ್ಕೆ ತರುವ ಅಲೋಚನೆಯೂ ಇತ್ತು.

೧೯೦೯ ರ ಸುಮಾರು ಕೊಟ್ಟೂರಪ್ಪ ಶಿರಹಟ್ಟಿ ಕಂಪನಿ ಬಿಟ್ಟರು. ಬಿಡುವಾಗ ಅವರು ವಾಮನರಾಯರ ಸಲಹೆ ಕೇಳಿದರು ಅವರನ್ನೇ ಏಕೆ ಕೇಳಿದೆ ಎಂಬುದರ ಬಗೆಗೆ ಕೊಟ್ಟೂರಪ್ಪನವರ ವಿವರಣೆ ಹೀಗಿದೆ. "ವಾಮನರಾಯರು ಈಗಿನ ಕಾಲಕ್ಕೆ ಹೋಲಿಸಿದರೆ ಅಂತಹ ವಿದ್ಯಾವಂತರೇನೂ ಅಲ್ಲ. ಕೇವಲ ಮುಲ್ಕೀ ಪರೀಕ್ಷೆ ಆದವರು. ಆದರೆ ಸಾಹಿತ್ಯದಲ್ಲಿ ಅವರ ಆಸಕ್ತಿ ಬಹಳ. ಅನುಭವ ವಿಶಾಲವಾದುದು. ನಾಟಕಗಳನ್ನು ಬರೆದು ಕೊಡುತ್ತಿದ್ದ ಅವರೇ ನಮ್ಮಲ್ಲಿ ದೊಡ್ಡ ಪಂಡಿತರೂ, ಕವಿಗಳೂ ಆಗಿದ್ದರು. ಅವರ ಸ್ವಭಾವ ಬಹಳ ಒಳ್ಳೆಯದು. ಆದರ್ಶದ ಕನಸು ಕಾಣುತ್ತಿದ್ದವರಾದರೂ ಲೋಕಾನುಭವ ಶೂನ್ಯರಲ್ಲ. ನನ್ನ ಮಾತೆಲ್ಲವನ್ನೂ ಕೇಳಿ ನನ್ನ ಅಭಿಲಾಷೆಗೆ ಅನುಮೋದನೆ ಇತ್ತರು. ಕಂಪನಿಯನ್ನು ಬಿಟ್ಟು ಬಿಟ್ಟೆ [೯].

ವಾಮನರಾಯರ ವ್ಯಕ್ತಿತ್ವದ ಬಗೆಗೆ ಸಹನಟನೊಬ್ಬನ ಅಭಿಪ್ರಾಯಗಳನ್ನು ಕೇಳಿದಾಗ ಅವರ ವಿದ್ವತ್ತಿನ, ಪ್ರತಿಭೆಯ ಮತ್ತು ಲೋಕಾನುಭವದ ಪರಿಚಯವಾಗುತ್ತದೆ. ರಾಯರು ಶಿರಹಟ್ಟಿ ಕಂಪನಿಯ ಕಣ್ಣಾಗಿ ಐದಾರು ವರ್ಷ ಸೇವೆ ಸಲ್ಲಿಸಿದರು. ಅವರು ಆ ಕಂಪನಿಯಲ್ಲಿ ಇರುವಷ್ಟು ದಿನ ಅದರ ವೈಭವ ಬೆಳಗಿತು. ನಟರಾಗಿ, ನಾಟಕ ಕವಿಯಾಗಿ, ಮಾಸ್ತರ ಆಗಿ ಅವರು ಗೈದ ಸೇವೆ ಸ್ಮರಣೀಯ.

**ಇ: ಗಾಯಕ–ನಾಯಕ ನಟ :**

ಸ್ಫುರದ್ರೂಪ, ಸುಮಧುರ ಕಂಠ, ಸಾತ್ವಿಕ ಅಭಿನಯ ವಾಮನರಾಯರ ನಟನೆಯ ಶಕ್ತಿಗಳಾಗಿದ್ದವು. ಯಾವುದೂ ಅತಿಯಾಗದಂತೆ ಹಿತಮಿತವಾಗಿಯೇ ಪಾತ್ರದೊಂದಿಗೆ ವ್ಯವಹರಿಸುತ್ತಿದ್ದರು. ಅದು ಸಂಗೀತ ನಾಟಕಗಳ ಕಾಲವಾದ್ದರಿಂದ ಸಂಗೀತಕ್ಕೆ ಹೆಚ್ಚು ಒತ್ತು. ಹಾಡುವ ಯೋಗ್ಯತೆ ಇಲ್ಲದವನಿಗೆ ನಟನಾಗುವ ಯೋಗ್ಯತೆ ಇರುತ್ತಿರಲಿಲ್ಲ. ವಾಮನರಾಯರಂತೂ ತಮ್ಮ ಗಾಯನ ಪ್ರತಿಭೆಯನ್ನು ರಂಗಭೂಮಿಯನ್ನು ಪ್ರವೇಶಿಸಿದ್ದರು. ಅವರ ಮೇಲೆ ಮರಾಠಿ ಸಂಗೀತ ನಾಟಕಗಳ ದೊಡ್ಡ ಪ್ರಭಾವವಿತ್ತು. ನಾರಾಯಣರಾವ ಜೋಗಳೇಕರ, ಕೇಶವರಾವ ಭೋಸಲೆ, ಬಾಲಗಂಧರ್ವ ಮೊದಲಾದ ಗಾಯಕ ನಟರ ಗಾನಾಭಿನಯ ನೋಡಿ, ವಿಚಾರಿಸಿ, ವಿಮರ್ಶಿಸಿ ಅದರೊಳಗೊಬ್ಬ ಗಾಯಕನಟ ರೂಪುಗೊಂಡಿದ್ದ. ವಾಮನರಾಯರು

ಪಾತ್ರಧಾರಿಯಾಗಿದ್ದಾಗ ತೆಗೆದಿದ್ದ ಕೆಲವು ಫೋಟೋಗಳು ಅಚ್ಚಾಗಿವೆ ಅವನ್ನು ನೋಡಿದಾಗ ಮರಾಠಿ ಸುಪ್ರಸಿದ್ಧ ನಟರ ಭಾವ ಭಂಗಿಗಳು ನೆನಪಾಗುತ್ತವೆ.

ಕನ್ನಡ ನಾಟಕಗಳಿಗೆ ಹೋಲಿಸಿದಾಗ ಆಗಿನ ಮರಾಠಿ ಕಂಪನಿ ನಾಟಕಗಳು ಒಂದು ಹೆಜ್ಜೆ ಮುಂದಿದ್ದವು. ಹಾಡುಗಾರಿಕೆಲ್ಲಿಯಲ್ಲಂತೂ ಅವರಲ್ಲಿ ಗಂಧರ್ವ ಕಲಾವಿದರೇ ಸೃಷ್ಟಿಗೊಂಡಿದ್ದರು. ಸವಾಯಿ ಗಂಧರ್ವ, ಬಾಲಗಂಧರ್ವ ಅವರ ಗಾನಾಭಿನಯ ಮಾತುಗಳು ಮಹಾರಾಷ್ಟ್ರದಲ್ಲಿ ಮಾತ್ರವಲ್ಲ ಕರ್ನಾಟಕದಲ್ಲಿಯೂ ಚರ್ಚೆಯ ವಿಷಯಗಳಾಗಿದ್ದವು. ಅಂಥ ಕಲಾವಿದರನ್ನು, ಕಲೆಗಾರಿಕೆಯನ್ನು ಅನುಸರಿಸುವುದು ಕನ್ನಡ ಕಲಾವಿದರಿಗೆ ಅಭಿಮಾನದ ವಿಷಯವಾಗಿತ್ತು. ಮರಾಠಿ ರಂಗಭೂಮಿ ಏರಿದ ಎತ್ತರಕ್ಕೆ ಕನ್ನಡ ರಂಗಭೂಮಿಯೂ ಬೆಳೆಯಬೇಕಾಗಿತ್ತು. ಅದಕ್ಕಾಗಿ ಕನ್ನಡದಲ್ಲಿಯೂ ಗಂಧರ್ವಯುಗ ನಿರ್ಮಾಣ ಮಾಡಬೇಕಾಗಿತ್ತು. ವಾಮನರಾಯರಂಥ ರಂಗಕರ್ಮಿಗಳು ಅಂಥದೊಂದು ರಂಗಭೂಮಿಯ ಕನಸು ಕಾಣುತ್ತ ಅದನ್ನು ಸಾಕಾರಗೊಳಿಸಲು ಪ್ರಯತ್ನಶೀಲರಾಗಿದ್ದರೆನ್ನಿಸುತ್ತದೆ. ವಾಮನರಾಯರು ಮರಾಠಿ ನಾಟಕಗಳ ಕಲೆಗಾರಿಕೆಯನ್ನು ಮತ್ತು ಗಂಧರ್ವರ ಗಾಯನ ಪದ್ಧತಿಯನ್ನು ಮಾತ್ರ ಅನುಸರಿಸಿದರು. ಆದರೆ ಗಂಧರ್ವರ ವಿಲಾಸೀಜೀವನವನ್ನು ಅನುಸರಿಸಲಿಲ್ಲ ಎಂಬುದು ಗಮನಾರ್ಹ. 'ಬಾಲಗಂಧರ್ವರಿಗೆ ಬೆಲೆಬಾಳುವ ಬಟ್ಟೆ ಧರಿಸುವ ಮೋಹವಿತ್ತು. ಜನರು ಸಂತೋಷಕ್ಕಾಗಿ ನಟನನ್ನು ನೋಡಲು ಬರುತ್ತಾರೆ. ಆದ್ದರಿಂದ ನಟನಾದವನು ಸುಂದರ ವೇಷಭೂಷಣ ಧರಿಸಬೇಕು. ರಂಗಭೂಮಿಯ ದೃಶ್ಯ ಆಕರ್ಷಕವಾಗಿರಬೇಕು ಎಂದವರಿಗೆ ಅನಿಸುತ್ತಿತ್ತು ಹೀಗಾಗಿ ಪ್ರತಿ ನಾಟಕದ ಕಾಲಕ್ಕೆ ಸ್ವತಹ ಅವರೇ ಮಾರುಕಟ್ಟೆಗೆ ಹೋಗುತ್ತಿದ್ದರು ಇಲ್ಲವೇ ಅಂಗಡಿಯವರ ಮೂಲಕ ಬಟ್ಟೆ ತರಿಸುತ್ತಿದ್ದರು. ಇದಕ್ಕಾಗಿ ಸಾವಿರಾರು ರೂಪಾಯಿ ಖರ್ಚಾದರೂ ಲೆಕ್ಕಿಸುತ್ತಿರಲಿಲ್ಲ. ಖೊಟ್ಟಿ ಆಭರಣ, ಖಡ್ಗ ಇವೆಲ್ಲ ಹೊಳೆಯುತ್ತಿರಬೇಕೆಂದೆನಿಸುತಿತ್ತು 'ಮಾನಾಪಮಾನ' ನಾಟಕಕ್ಕೆ ಮುಜುಂದಾರರು ಭರ್ಜರಿ ಸೀರೆಯನ್ನು ತರಿಸಿದ್ದರು ಆದರೆ 'ವಿದ್ಯಾಹರಣ' ನಾಟಕಕ್ಕೆ ತರಿಸಲಿಲ್ಲ. ಖಾಡಿಲ್ಕರ ಕೆರಳಿದರು. 'ಮಿತವ್ಯಯದ ಹೆಸರಿನಲ್ಲಿ ಹೊಸ ಬಟ್ಟೆ ತರಿಸದೆ ನನ್ನ ನಾಟಕ ಹಾಳಾಗಲಿ ಎಂದು ಬಯಸಿದಂತೆ ಕಾಣುತ್ತದೆ. ಇದನ್ನು ನಾನು ತಾಳಿಕೊಳ್ಳಲಾರೆ' ಈಗಾಗಲೇ ಹಿಂದಿನ ನಾಟಕಕ್ಕೆ ತಂದ ಶಾಲೂ ಇದ್ದಾಗ ಬೇರೆ ಬಟ್ಟೆಯ ಅಗತ್ಯವೇನಿದೆ? ನಿಮ್ಮಿಬ್ಬರಿಗೆ ಹೊಸ ಸೀರೆ ಬೇಕೇಬೇಕು ಎಂದೆನಿಸಿದರೆ ತರಿಸುತ್ತೇನೆ ಎಂದರು ಮುಜುಂದಾರ'[೨೦].

ಇದು ಬಾಲಗಂಧರ್ವರ ಜೀವನಶೈಲಿಯಾಗಿತ್ತು ಗಂಧರ್ವರ ಜೀವನಶೈಲಿ ಅವರ ಕಲೆಯಂತಯೇ ಶ್ರೀಮಂತವಾಗಿತ್ತು. ವಾಮನರಾಯರು ಕಲೆಯನ್ನು ಮಾದರಿಯಾಗಿ ಸ್ವೀಕರಿಸಿದರು. ಜೀವನಶೈಲಿ ಮಾತ್ರ ಸರಳವಾಗಿಯೇ ಇತ್ತು. ಕಂಪನಿಯಲ್ಲಿಯ ರಂಗಪರಿಕರ, ವೇಷಭೂಷಣಗಳಲ್ಲಿ ಕೂಡ ಅಂತ ವೈಭವವನ್ನು ಅಳವಡಿಸಲಿಲ್ಲ. ಸರಳತೆ ಹಾಗೂ ಕಲೆಗಾರಿಕೆ ಅವರಿಗೆ ಮುಖ್ಯವಾಗಿದ್ದವು.

ವಾಮನರಾಯರು ಶಿರಹಟ್ಟಿ ಕಂಪನಿಯಲ್ಲಿ ಆರು ವರ್ಷ, ಸ್ವಂತ ಕಂಪನಿಯಲ್ಲಿ ಇಪ್ಪತ್ತು ವರ್ಷ ಒಟ್ಟಾರೆ ೨೬ ವರ್ಷಗಳ ಕಾಲ ರಂಗನಟರಾಗಿ ಅಭಿನಯಿಸಿದರು. ಕವಿರತ್ನ ಕಾಳಿದಾಸ (ಕಾಳಿದಾಸ), ವಿವೇಕವಿಜಯ (ವಿವೇಕ), ಭಕ್ತ ಪ್ರಹ್ಲಾದ (ಹಿರಣ್ಯಕಶ್ಯಪ), ಲಂಕಾದಹನ (ಶ್ರೀರಾಮಚಂದ್ರ), ವಿದ್ಯಾಹರಣ (ಕಚ), ಪಾರ್ವತೀ ಸತ್ವಪರೀಕ್ಷೆ (ಶಿವ), ಭಕ್ತ ಪುಂಡಲೀಕ (ಪುಂಡಲೀಕ), ಸಾಧ್ವಿ ಸಖೂಬಾಯಿ (ಮಾಧವ), ಬಾಜೀರಾವ ಪೇಶ್ವೆ (ಬಾಜೀರಾವ), ವೀರ ಅಭಿಮನ್ಯು (ಕೃಷ್ಣ) ಮುಂತಾದ ನಾಟಕಗಳಲ್ಲಿ ವಾಮನರಾಯರು ವೈವಿಧ್ಯಮಯ ಪಾತ್ರಗಳನ್ನು ಅಭಿನಯಿಸಿದರು. ಸಂಗೀತವೇ ಅವರ ಪಾತ್ರಗಳ ಜೀವಾಳ. ಅಭಿನಯ ಸಂಗೀತವನ್ನು ಅನುಸರಿಸುತ್ತಿತ್ತು.

ಮೈಸೂರು ಪ್ರಾಂತದಲ್ಲಿ ಎ. ವ್ಹಿ. ವರದಾಚಾರ್ಯರು ಗಾಯಕನಟರೆಂದು ಖ್ಯಾತರಾಗಿದ್ದರು. ಉತ್ತರ ಕರ್ನಾಟಕದ ವಾಮನರಾಯರಾದರೂ ಗಾಯಕನಟರೆಂದೇ ಪ್ರಸಿದ್ಧರಾದರು. ಕನ್ನಡ ರಂಗಭೂಮಿಯ ಚರಿತ್ರೆಯಲ್ಲಿ ಗಾಯಕನಟರ ನಟನೆಯ ಬಗೆಗೆ ಅನೇಕ ವಾದ ವಿವಾದಗಳಿವೆ. ಹಾಡುಗಾರಿಕೆಯೇ ಮುಖ್ಯವಾದ್ದರಿಂದ ಆಂಗಿಕ, ಸಾತ್ವಿಕ ಅಭಿನಯಗಳಿಗೆ ಅಲ್ಲಿ ಅವಕಾಶವಿರುತ್ತಿರಲಿಲ್ಲವೆಂಬುದು ಸಾಮಾನ್ಯವಾದ ಆರೋಪ. ಆದರೆ ಪ್ರತಿಭಾವಂತ ನಟರು ಅವಕಾಶ ಸಿಕ್ಕಾಗ ಹಾಡಿನ ಜೊತೆಗೆ ಅಭಿನಯವನ್ನೂ ಪ್ರಕಟಿಸುತ್ತಿದ್ದರೆನ್ನಲು ಅಂದಿನ ಅನೇಕ ವಿವರಗಳು ಸಾಕ್ಷಿ ನುಡಿಯುತ್ತವೆ. ಎ. ವ್ಹಿ. ವರದಾಚಾರ್ಯರು, ವಾಮನರಾಯರು, ಗುಳ್ಳೇದಗುಡ್ಡ ಗಂಗೂಬಾಯಿ, ಕೊಟ್ಟೂರಪ್ಪ, ಬಸವರಾಜ ಮನಸೂರ, ಬೇವೂರ ಬಾದಶಾ ಮಾಸ್ತರ ಹೀಗೆ ಹಲವಾರು ಕಲಾವಿದರು ಅಭಿನಯದಲ್ಲಿಯೂ ಹೆಚ್ಚುಗಾರಿಕೆ ಮೆರೆಯುತ್ತಿದ್ದರೆಂದು ತಿಳಿಯುತ್ತದೆ.

ಅಭಿನಯದ ಬಗೆಗೆ ಪ್ರಾಚೀನ ಕಾಲದ ಭರತನಿಂದ ಅರ್ವಾಚೀನ ಕಾಲದ ರಶಿಯಾದ ಸ್ತಾನಸ್ಲೋವಸ್ಕಿಯವರೆಗೆ ಹಲವಾರು ಪಂಡಿತರು ಮಹತ್ವದ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ. ಅಭಿನಯವೆಂಬುದು ಸೃಜನಶೀಲ ಅಭಿವ್ಯಕ್ತಿಯಾದ್ದರಿಂದ ಅದರ ಬಗೆಗೆ ವ್ಯಕ್ತವಾದ ವಿಚಾರ ವಿಮರ್ಶೆಗಳೆಲ್ಲ ವೈಯಕ್ತಿಕ ಪ್ರತಿಕ್ರಿಯೆಗಳೇ ಹೊರತು ಸರ್ವಸಮ್ಮತ ಅಭಿಪ್ರಾಯಗಳಲ್ಲವೆಂಬುದನ್ನು ಗಮನಿಸಬೇಕು.

ಕನ್ನಡ ವೃತ್ತಿರಂಗಭೂಮಿಯ ಸಂದರ್ಭದಲ್ಲಿ ಗರುಡ ಸದಾಶಿವರಾಯರು ೧೯೧೯ ರಲ್ಲಿ "ಶ್ರೀ ದತ್ತಾತ್ರೇಯ ಸಂಗೀತ ನಾಟಕ ಮಂಡಳಿ" ಪ್ರಾರಂಭಿಸಿದರು ಅವರಿಂದಲೇ ಆ ಕಾಲಕ್ಕೆ ಸಂಗೀತ ಮತ್ತು ಅಭಿನಯಗಳ ಸಂಬಂಧದ ಬಗೆಗೆ ಹೊಸ ಚರ್ಚೆ ಪ್ರಾರಂಭವಾಯಿತು. ಅವರು ನಾಟಕವನ್ನು ಶಾಸ್ತ್ರದ ನೆಲೆಯಲ್ಲಿ ಓದಿಕೊಂಡು ನಾಟಕವು ಅಭಿನಯ ಪ್ರಧಾನ ಕಲೆ ಎಂಬುದನ್ನು ತಿಳಿದುಕೊಂಡಿದ್ದರು. ಅದನ್ನು ತಮ್ಮ ನಟನೆ, ನಾಟಕಗಳ ಮೂಲಕ ಸಾಧಿಸಿಯೂ ತೋರಿಸಿದ್ದರು. ಗರುಡರಿಗಿಂತ ಮೊದಲಿನವರಾದ ವಾಮನರಾವ ಮಾಸ್ತರ ಅವರು ಸಂಗೀತ ನಾಟಕಗಳ ಪರಿಸರದಲ್ಲಿಯೇ ತಮ್ಮ

ನಟನೆಯ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದರು. ಅವರಿಗೆ ಅಂದು ಆದರ್ಶವಾದದ್ದು, ಮಾದರಿಯಾದದ್ದು ಮರಾಠಿ ರಂಗಭೂಮಿ; ಅಲ್ಲಿಯ ಸಂಗಿತ ನಾಟಕಗಳು ಮರಾಠಿಯಲ್ಲಿಯ ಉತ್ತಮ ಮಾದರಿಗಳನ್ನು ಕನ್ನಡದ ಸಂದರ್ಭದಲ್ಲಿ ಅತ್ಯುತ್ತಮ ಮಾದರಿಗಳನ್ನಾಗಿ ತಂದು ತೋರಿಸುವುದಕ್ಕಾಗಿ ಪ್ರಯತ್ನಶೀಲರಾಗಿದ್ದರು. ಅಲ್ಲಿಯ ಹಾಡುಗಾರಿಕೆ, ಅಲ್ಲಿಯ ಕಲಾವಿದರ ಅಭಿನಯ ವಿಶೇಷತೆಗಳನ್ನು ತಮ್ಮದನ್ನಾಗಿ ಮಾಡಿಕೊಂಡು ಕನ್ನಡಿಗರಿಗೆ ತೋರಿಸಲು ಕ್ರಿಯಾಶೀಲರಾಗಿದ್ದರು. ಸಂಗೀತ ಮತ್ತು ಅಭಿನಯದ ನಡುವಿನ ವ್ಯತ್ಯಾಸ ಕುರಿತು ಅವರು ಚಿಂತಿಸಲಿಲ್ಲ. ಒಂದರಿಂದ ಇನ್ನೊಂದಕ್ಕೆ ಕುಂದುಂಟಾಗುವುದೆಂದೂ ತರ್ಕಿಸಲಿಲ್ಲ. ಮರಾಠಿಯಲ್ಲಿಯ ಬಾಲಗಂಧರ್ವ, ಜೋಗಳೇಕರ, ಕೇಶವರಾವ ಭೋಸಲೆಯವರಂಥ ಮಹಾನ್ ಗಾಯಕನಟರನ್ನು ಕನ್ನಡದಲ್ಲಿ ಸೃಷ್ಟಿಸುವುದು ಮಾತ್ರ ಅವರಿಗೆ ಅಂದಿನ ಮುಖ್ಯ ಕಾರ್ಯವಾಗಿತ್ತು.

"ವಾಮನರಾವ ಮಾಸ್ತರರು ಯಾವುದೇ ಪಾತ್ರವನ್ನು ಶ್ರದ್ಧೆ, ನಿಷ್ಠೆಯಿಂದ ನಿರ್ವಹಿಸುತ್ತಿದ್ದರು. ಯಾವ ಪಾತ್ರವನ್ನೇ ಮಾಡಿದರೂ ಅದಕ್ಕೆ ಜೀವ ತುಂಬಿ, ಭಾವಗಳ ಅಭಿನಯದೊಂದಿಗೆ ತಲ್ಲೀನತೆ ಮೆರೆಯುತ್ತಿದ್ದರೆಂದು ಅವರ ನಾಟಕ ನೋಡಿದ ಅನೇಕ ಮಹನೀಯರು ಇಂದಿಗೂ ನೆನಪಿಸುತ್ತಾರೆ. ನಟಿಸುವಾಗ ರಂಗದ ಮೇಲೆ ಏಕಾಗ್ರಚಿತ್ತರಾಗಿರುತ್ತಿದ್ದರು. ತಮ್ಮ ವೈಯುಕ್ತಿಕ ನೋವು ನಲಿವುಗಳನ್ನು ಸಹ ಮರೆತು ಪಾತ್ರವನ್ನು ಮನಮುಟ್ಟುವಂತೆ ಹಾವ-ಭಾವಗಳಿಂದ ಸಮ್ಮಿಳಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗುತ್ತಿದ್ದರು. ಇದಕ್ಕೆ ಒಂದು ನಿದರ್ಶನ ಎನ್ಕೆಯವರ ಬರಹದಲ್ಲಿದೆ".

ವಾಮನರಾಯರ ಆಪ್ತ ಸ್ನೇಹಿತರಾದ ಬಂಕಾಪುರದ ದತ್ತಂಭಟ್ಟರು ತಮ್ಮ ಆರೋಗ್ಯ ತಪಾಸಣೆ ಹಾಗೂ ಉಪಚಾರಕ್ಕೆಂದು ಬೆಂಗಳೂರಿಗೆ ಬಂದಿದ್ದರು. ಖಾಯಿಲೆ ಹೆಚ್ಚಾಗಿ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ದಾಖಲಾಗಿದ್ದರು. ಪ್ರತಿದಿನವೂ ಬಿಡುವು ಮಾಡಿಕೊಂಡು ವಾಮನರಾಯರು ಮಿತ್ರರನ್ನು ಮಾತನಾಡಿಸಲು ಆಸ್ಪತ್ರೆಗೆ ಬರುತ್ತಿದ್ದರು. ದತ್ತಂಭಟ್ಟರ ಖಾಯಿಲೆ ದಿನಗಳೆದಂತೆ ಉಲ್ಬಣಗೊಂಡು ಅವರು ಅಸುನೀಗಿದರು. ಆಗ ರಾತ್ರಿ ಎಂಟುಗಂಟೆ. ಏನು ಮಾಡುವುದು ಅಂದೇ ನಾಟಕವಿದೆ. ಮಿತ್ರವಿಯೋಗದ ದುಃಖದಲ್ಲಿ, ಈ ಧರ್ಮಕಾರ್ಯವನ್ನು ಹಾಗೂ ಮಿತ್ರಕರ್ತವ್ಯವನ್ನು ಬಿಡುವಂತಿರಲಿಲ್ಲ. ಅವರ ಅಂತ್ಯಕ್ರಿಯೆಯ ಜವಾಬ್ದಾರಿಯನ್ನು ತಾವೇ ಹೊತ್ತುಕೊಂಡು ಇತರ ಬ್ರಾಹ್ಮಣ ನಟರು ಹಾಗೂ ಕೆಲಸಗಾರರೊಂದಿಗೆ ಶವವನ್ನು ತೆಗೆದುಕೊಂಡು ಹೋಗಿ ಅಂತ್ಯವಿಧಿಗಳನ್ನು ಮುಗಿಸಿದರು. ಇವೆಲ್ಲವನ್ನು ಮುಗಿಸಿಕೊಂಡು ಬಂದಾಗ ರಾತ್ರಿ ಹನ್ನೊಂದು ಘಂಟೆ. ತಕ್ಷಣ ಮೈಮೇಲೆ ನೀರು ಹಾಕಿಕೊಂಡು ನೇರವಾಗಿ ಗ್ರೀನ ರೂಮಿಗೆ ಹೋಗಿ ಬಣ್ಣ ಹಾಕಿಕೊಂಡು ಯಥಾ ರೀತಿಯಲ್ಲಿ (ಒಳಗೆ ಆತ್ಮೀಯ ಮಿತ್ರನ ಆಗಲಿಕೆ, ನೋವು, ಇನ್ನೂ ಮಾಸಿರಲಿಲ್ಲ) ದಿನನಿತ್ಯದಂತೆ ಲವಲವಿಕೆಯಿಂದ ಅಭಿನಯಿಸಿದ್ದು ನೆನಪಿಸಿಕೊಂಡಾಗ

ಎಂಥವರೂ ಅಚ್ಚರಿ ಪಡುತ್ತಾರೆ. ಅಷ್ಟೊಂದು ತಲ್ಲೀನತೆ, ಕಾರ್ಯ ತತ್ಪರತೆ ಅವರ ವ್ಯಕ್ತಿತ್ವದ ಭಾಗವಾಗಿದ್ದವು.

ವಾಮನರಾಯರು ರಂಗಗೀತೆಗೆ ವಿಶಿಷ್ಟ ಸ್ಥಾನ ಕಲ್ಪಿಸಿದರು. ಸ್ವತಃ ತಾವೇ ರಸವತ್ತಾಗಿ ರಚಿಸಿದ ಮರಾಠಿ ಚೀಜುಗಳನ್ನು ಕನ್ನಡದಲ್ಲಿಯೂ ತಾವೇ ರಚಿಸಿ ಶಾಸ್ತ್ರೀಯ ಸಂಗೀತದ ಕುಸುರಿಗಳನ್ನು ತುಂಬಿ ಲೀಲಾಜಾಲವಾಗಿ ಹಾಡುತ್ತಿದ್ದರು. ಒಳ್ಳೆಯ ತಾಳ–ಲಯದೊಂದಿಗೆ ಶ್ರುತಿಬದ್ಧವಾಗಿ ತಮ್ಮ ಗಾನಸುಧೆಯಿಂದ ಪ್ರೇಕ್ಷಕರನ್ನು. ಅವರ ಮನಸ್ಸನ್ನು, ಆಕರ್ಷಿಸಿಸುವ ಕಲೆಗಾರಿಕೆ ಅವರಲ್ಲಿ ಇತ್ತು. ಅವರ ನಟನಾ ಕೌಶಲ್ಯ ಅನೇಕರನ್ನು ಅಚ್ಚರಿಗೊಳಿಸಿತ್ತು ಎಂಬ ಅಭಿಪ್ರಾಯಗಳಿವೆ.

ವಾಮನರಾಯರ ಹಿತಮಿತ ಅಭಿನಯ, ಕರ್ನಾಟಕದ ಸಂಗೀತ, ಅದಕ್ಕೆ ತಕ್ಕಂತೆ ಅವರ ವರ್ಚಸ್ವೀ ಆಳುತನ ಜನರನ್ನು ಮುಗ್ಧಗೊಳಿಸುತ್ತಿದ್ದವು. ರಾಯರು ವಿನೋದಪ್ರಿಯರು. ಹಾಸ್ಯವನ್ನು ಹಿತಮಿತವಾಗಿ ಬಳಸುತ್ತಿದ್ದರು. ನಾಟಕದಲ್ಲಿ ಕಂದ, ಸೀಸ, ಪದ್ಯಗಳನ್ನು ವಾಮನರಾಯರು ಆಕರ್ಷಕವಾದ ರೀತಿಯಲ್ಲಿ ಹಾಡುತ್ತಿದ್ದರು. ಕುರುಬನು ಕಾಳಿದಾಸನಾಗುವ ಸನ್ನಿವೇಶವಂತೂ ರೋಮಾಂಚನಕಾರಿಯಾಗಿರುತಿತ್ತೆಂದು ದಾಖಲಾಗಿದೆ. ವಾಮನರಾಯರ ಮೋಹಕ ವ್ಯಕ್ತಿತ್ವ ಆಕರ್ಷಕ ಶಾರೀರ, ವಿನೋದಗುಣವು ಇವರಲ್ಲಿ ಸಹಜ ಪ್ರವೃತ್ತಿಯಾಗಿದ್ದುದರಿಂದ ಕುರುಬನ ಪಾತ್ರ ಇನ್ನಷ್ಟು ನಗೆಯ ಅಲೆಗಳನ್ನು ಎಬ್ಬಿಸಿ ಪ್ರೇಕ್ಷಕ ನಟವರ್ಗದವರ ಮನಸೂರೆಗೊಳ್ಳುತಿತ್ತೆಂದು ಹೇಳುತ್ತಾರೆ.

ನಾಟಕದಲ್ಲಿ ಬರೀ 'ಆಂಗಿಕ' ಇದ್ದರೆ ಸಾಲದು. ಆ ಪಾತ್ರಕ್ಕೆ ಜೀವ ತುಂಬುವಂತಹ ಏಕಾಗ್ರತೆ, ಆ ಪಾತ್ರದ ಬಗೆಗಿನ ಸ್ಪಷ್ಟ ನಿಲುವು ಬಹಳ ಮುಖ್ಯ. ಭಾವಾಭಿನಯಗಳ ಸಂಗಮವೇ ಅಲ್ಲಿ ಪ್ರಾಧಾನ್ಯತೆಯನ್ನು ಪಡೆದುಕೊಳ್ಳಬೇಕು, ನಾಟಕದ ಪ್ರತಿಯೊಂದು ಪಾತ್ರಕ್ಕೂ ನ್ಯಾಯ ಒದಗಿಸಿಕೊಡುವ ನಿಟ್ಟಿನಲ್ಲಿ ಆ ಪಾತ್ರದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಆ ಪಾತ್ರವೇ ತಾನಾದಾಗ ಅದಕ್ಕೆ ಇನ್ನೂ ಹೆಚ್ಚಿನ ಪ್ರಾಶಸ್ತ್ಯ ದೊರಕುತ್ತದೆ. ಅಂತಹ ನಟನಾ ಕೌಶಲ್ಯ, ಭಾವಕ್ಕೆ ತಕ್ಕ ಅಭಿನಯ ಕಲೆ, ವಾಮನರಾಯರಲ್ಲಿ ವಿಶೇಷ ಕಳೆಯನ್ನು ತರುತ್ತಿತ್ತು. ಆದುದರಿಂದ ಅವರ ಪಾತ್ರಗಳು ಗಾಂಭೀರ್ಯತೆ ಮತ್ತು ಅಂತಃಸತ್ವವನ್ನು ಪಡೆದುಕೊಂಡು ಪ್ರೇಕ್ಷಕರಿಗೆ ಪ್ರೇಕ್ಷಣೀಯವಾಗಿರುತ್ತಿದ್ದವೆಂಬುದು ಬಹುಜನರ ಅನಿಸಿಕೆ[೧೨].

'ವಿವೇಕವಿಜಯ' ಮತ್ತು 'ರಾಮರಾಜ್ಯ ವಿಯೋಗ' ನಾಟಕಗಳೂ ವಾಮನರಾಯರ ಅಭಿನಯದಿಂದ ರಂಗೇರುತ್ತಿದ್ದವು. ಅವರಿಂದಲೇ ಅವು ಕಳೆಗಟ್ಟುತ್ತಿದ್ದವು. 'ವಿವೇಕವಿಜಯ'ದಲ್ಲಿ ಮನುಷ್ಯನ ಅಷ್ಟಮದಗಳು ಮೈವೆತ್ತಿ ಬಂದು ಮನುಷ್ಯತ್ವವನ್ನೆ ನುಂಗಿ ನೀರು ಕುಡಿಯಲು ಹವಣಿಸುವಾಗ ಉದಯವಾಗಿ ಅಷ್ಟಮದಗಳ ದಮನವಾಗುವವೆಂಬ ಕಲ್ಪನೆ ಎಷ್ಟು ಸುಂದರವೋ ಅಷ್ಟೇ ಸುಂದರವಾಗಿ, ಸರಸವಾಗಿ ವಾಮನರಾಯರು ವಿವೇಕನ ಪಾತ್ರವನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಿದ್ದರು.

ವಾಮನರಾಯರದು ಕೌಶಲ್ಯದ ನಟನೆ, ನಾಟಕದ ಕಥೆ ಅವರ ಸಂಗೀತದ ಸೆಳವಿಗೆ ಸಿಕ್ಕು ಮುಳುಗಿ ಹೋಗುತ್ತಿರಲಿಲ್ಲ. ನಾಟಕಕ್ಕೆ ಬಂದ ಪ್ರೇಕ್ಷಕರಿಗೆ ನಾಟಕದ ದರ್ಶನ ಮಾಡಿಸುವಲ್ಲಿಯೂ ಅವರ ಅಭಿನಯ ಗೆಲ್ಲುತ್ತಿತ್ತು. ಅವರ ಮತ್ತು ಪ್ರೇಕ್ಷಕರ ನಡುವೆ ಅನ್ಯೋನ್ಯ ಸಂಬಂಧವು ನಿರ್ಮಾಣವಾಗುತ್ತಿತ್ತು. 'ನಟನ ಮತ್ತು ಪ್ರೇಕ್ಷಕರ ಆತ್ಮಗಳು ಬೆಸೆದಾಗ ಮಾತ್ರ ಸಂವೇದನೆಯ ಸ್ವಯಂಸ್ಫೂರ್ತ ಮಿಂಚುಗಳು'[೧೩] ಮೂಡುವುದು ಪ್ರೇಕ್ಷಕರು ಮನಃಪೂರ್ವಕವಾಗಿ ಕುಳಿತು ಗ್ರಹಿಸುವುದಕ್ಕೆ ಸಿದ್ಧವಾಗಿರುವಾಗ ಮಾತ್ರ ನಟ ಉನ್ನತವಾದುದನ್ನು ಕೊಡಲು ಸಾಧ್ಯ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ. ಅವರು ತೆಗೆದುಕೊಳ್ಳಲು ಬಂದಿರುವಂತೆಯೇ ಕೊಡಲು ಸಿದ್ಧರಾಗಿರಬೇಕು. ಸಂಪೂರ್ಣ ಅನುಭೂತಿಯನ್ನು ಹೊತ್ತು ತಂದು ಕುಳಿತ ಪ್ರೇಕ್ಷಕವೃಂದದ ಮುಂದೆ ಕಲಾವಿದನಿಗೆ ತನ್ನ ಸಾಮರ್ಥ್ಯದ ಪರಾಕಾಷ್ಠೆಯನ್ನು ಮುಟ್ಟಿ ಅಭಿನಯಿಸಲು ಸಾಧ್ಯವಾಗುತ್ತದೆ. ಅಂಥ ಸಂದರ್ಭಗಳಲ್ಲೇ ಜೀವನ ಪರ್ಯಂತ ನೆನಪಿಡುವಂಥ ಅಭಿನಯ ಪ್ರೇಕ್ಷಕರಿಗೆ ದಕ್ಕುವುದು. ಆ ಕ್ಷಣದಲ್ಲೆ ಪ್ರೇಕ್ಷಕರು ಮತ್ತು ನಟ ಬೆಸೆದು ಒಂದಾಗುವುದು. ಆ ಸಂದರ್ಭದಲ್ಲೇ ರಂಗಮಂದಿರದ ಎಲ್ಲ ಆತ್ಮಗಳಲ್ಲೂ ಒಂದೇ ಭಾವನೆ ತಾನೇ ತಾನಾಗಿ ವ್ಯಾಪಿಸುವುದು. ಆಗ ನಟನನ್ನು ಬಿಟ್ಟು ಉಳಿದೆಲ್ಲರ ವಿಮರ್ಶಕ ಪ್ರಜ್ಞೆ ಸಮ್ಮೋಹನಕ್ಕೆ ಒಳಗಾಗಿರುತ್ತದೆ. ನಟ ಮಾತ್ರ ತನ್ನ ವಿಮರ್ಶಕ ಪ್ರಜ್ಞೆಯನ್ನು ಇನ್ನೂ ಹೆಚ್ಚು ತೀಕ್ಷ್ಣವಾಗಿ ಕಾಪಾಡಿಕೊಳ್ಳಬೇಕಾಗುತ್ತದೆ. ನಟನು ಕಲಾವಿದನ ವಿಮರ್ಶಾಪ್ರಜ್ಞೆ ಮತ್ತು ಅವನ ಸೃಜನಾತ್ಮಕ ಪ್ರಜ್ಞೆಯೊಡನೆ ಏಕಕಾಲದಲ್ಲಿ ಕೂಡಿದಾಗ ಸಾಧ್ಯವಾಗುವ ಪರಿಣಾಮವನ್ನು ಚೆನ್ನಾಗಿ ವಿವರಿಸಿದ್ದಾನೆ.

ವಾಮನರಾವ ಮಾಸ್ತರರ ಗಾಯನ, ಅಭಿನಯ ಸಂದರ್ಭದಲ್ಲಿ ಪ್ರೇಕ್ಷಕರು ಅನುಭವಿಸುತ್ತಿದ್ದ ಸಂತೋಷವನ್ನು ಎನ್ಕೆಯವರು ಮತ್ತು ಆ ಕಾಲದ ಪ್ರೇಕ್ಷಕರು ಪ್ರಶಂಸಿಸಿದ್ದಾರೆ.

'ವಾಮನರಾಯರು ಮುಖ್ಯಪಾತ್ರ ವಹಿಸುವ ನಾಟಕಗಳಲ್ಲೆಲ್ಲ ಏನೋ ಒಂದು ಮೋಹಕತೆ ಇರುತ್ತಿತ್ತು ನಾಟಕ ಪ್ರಾರಂಭವಾಗಿ ವಾಮನರಾಯರ ಪ್ರಥಮ ಪ್ರವೇಶವಾಯಿತೆಂದರೆ ಪ್ರೇಕ್ಷಕ ವರ್ಗದಲ್ಲಿ ಒಂದು ಮೋಹಕ ಜಾಲವನ್ನು ಬೀಸಿದದಂತಾಗುತ್ತಿತ್ತು. 'ವಾಮನರಾವ ಮಾಸ್ತರ, ವಾಮನರಾವ ಮಾಸ್ತರ' ಎಂದು ಪುಲಕಗೊಂಡ ಪ್ರೇಕ್ಷಕರು ಗುಜುಗುಜು ಮಾತನಾಡುತ್ತಿದ್ದರು. ವಾಮನರಾಯರ ಪ್ರವೇಶ ನಿಷ್ಕ್ರಮಣಗಳು ವೈಶಿಷ್ಟ್ಯಪೂರ್ಣವಾಗಿರುತ್ತಿದ್ದವು. ಪ್ರವೇಶವು ಒಂದು ಹರುಷದ ಚಿಲುಮೆಯನ್ನು ಚಿಮ್ಮಿಸಿದರೆ ಅವರ ನಿಷ್ಕ್ರಮಣಗಳು ಜುಮ್ಮು ಹಿಡಿಸುತ್ತಿದ್ದವು. 'ವೀರ ಅಭಿಮನ್ಯು' ನಾಟಕದಲ್ಲಿ ಕೊನೆಕೊನೆಯ ಭಾಗದಲ್ಲಿ ನಾಟಕದ ನಡೆಯು ಒಂದು ಏರಿಕೆಯ ಮಟ್ಟವನ್ನು ಮುಟ್ಟಿದಾಗ ಮಾಸ್ತರರು ಕೃಷ್ಣನ ಪಾತ್ರದಲ್ಲಿ ಅರ್ಜುನನ ಪಕ್ಷವಹಿಸಿ ಸೈಂಧವನ ವಧೆಗೆ ಸುದರ್ಶನ ಚಕ್ರದ ಸಹಾಯವನ್ನು ಕೋರಿ, 'ಮಮಪಾಂಡವಾ ಪ್ರಿಯಾ॥ ಸುಖ ಶ್ರೀಯಾಧೆಯಾ ಮದೀಯಾ' ಎಂದು ಭೈರವಿ ರಾಗದ ಈ ಹಾಡು

ಹೇಳಿ ವೈಶಿಷ್ಟ್ಯಪೂರ್ಣವಾಗಿ ನಿಷ್ಕ್ರಮಣ ಮಾಡಿದಾಗ ತನ್ಮಯಗೊಂಡ ಪ್ರೇಕ್ಷಕವೃಂದ ಮುಗ್ಧವಾಗಿ ಕುಳಿತಿರುತ್ತಿತ್ತು[೧೪].

'ಬಾಜೀರಾವ ಪೇಶವೆ'ದೊಳಗಿನ ಬಾಜೀರಾಯನ ಪ್ರವೇಶವು ವಿಶೇಷ ಮೋಹಕವಾದದು. ವೀರ ಅಭಿಮನ್ಯು ನಾಟಕದಲ್ಲಿ ಶ್ರೀಕೃಷ್ಣನ ಪ್ರವೇಶವು ಮೂರನೆಯ ಅಂಕಕ್ಕೆ ಬರುತ್ತದೆ. ಮಾಸ್ತರರ ಪ್ರವೇಶಕ್ಕಾಗಿ, ಮಾಸ್ತರರ ಹಾಡುಗಾರಿಕೆಗಾಗಿ ಚಾತಕದಂತೆ ಕುಳಿತಿದ್ದ ರಸಿಕ ಜನ ಎರಡು ಅಂಕಗಳು ಮುಗಿಯುವವರೆಗೂ ಕಾಯಬೇಕಾಗುತಿತ್ತು. ಮುಖ್ಯ ಲೋಕಪ್ರಿಯ ಪಾತ್ರವೂ ವಿಳಂಭವಾಗಿ ಪ್ರವೇಶವಾದಷ್ಟೂ ಅದರ ಕೌತುಕ ಕುತೂಹಲಗಳು ಹೆಚ್ಚುತ್ತವೆ. 'ಬಾಜೀರಾವ ಪೇಶವೆ' ದ ಎರಡನೆಯ ಪ್ರವೇಶವಂತೂ ಶೃಂಗಾರ ವಾತಾವರಣದಿಂದ ತುಂಬಿತುಳುಕುತಿತ್ತು. ಬಾಜೀರಾಯನು ಶೃಂಗಾರ ಪ್ರಿಯ ಆತನ ವಶದಲ್ಲಿದ್ದ ಲಕ್ಷ್ಮೀಯ ಪ್ರಥಮ ದರ್ಶನದ ಸನ್ನಿವೇಶ ನಾಯಕವಾಡಿಯ ಆ ಪಾರಿವಾಳವನ್ನು ಹೊರಗೆ ತೆಗೆಯಲು ಅನ್ಯಾಬಾನಿಗೆ ಪೇಶವೆ ಆಜ್ಞಾಪಿಸುತ್ತಾನೆ. ಮೊದಮೊದಲಿಗೆ ಲಕ್ಷ್ಮೀ ಸಿಡುಕುತೋರುತ್ತಾಳೆ. ಆಕೆಯನ್ನು ಪೇಶವೆ ಅರಸೊತ್ತಿಗೆ ಮರೆತು ಮಹಾವಿಷ್ಣು ಲಕ್ಷ್ಮೀಯನ್ನು ಕೈಹಿಡಿದು ಕರೆದಂತೆ ಕರೆಯಬೇಕೆಂದು ಅನ್ಯಾಬಾ ಬಿನ್ನೈಸುತ್ತಾನೆ. ಆಗ ಪೇಶವೆ ಪಾತ್ರದಲ್ಲಿ ವಾಮನರಾಯರು ಹೇಳುವ ಬಿಹಾಗ ರಾಗದ 'ಬಾರೇ ಸುಮಬಾಣನ ಗಿಳಿಯೆ, ಚಾರುಚಪಲೆ ಭಾಸುರ ಮಣಿಯೇ' ಎಂಬ ಶಾಸ್ತ್ರೀಯ ರಂಗಗೀತೆ ಅತ್ಯಂತ ಮನಮೋಹಕವಾದದ್ದು. ಶೃಂಗಾರಕ್ಕೆ ಸಮರ್ಪಕವಾದುದು'[೧೫].

ಈ: ನಾಟಕಕಾರ: ವಾಮನರಾವ ಮಾಸ್ತರ

ಮರಾಠಿಯ ಕಿರ್ಲೋಸ್ಕರ ನಾಟಕ ಮಂಡಳಿ, ಸಾಂಗಲಿಕರ ನಾಟಕ ಮಂಡಳಿ, ಶಾಹುನಗರವಾಸಿ ನಾಟಕ ಮಂಡಳಿ, ಇಚಲಕರಂಜಿಕರ ನಾಟಕ ಮಂಡಳಿಗಳು, ಕನ್ನಡಿಗರ ಮೇಲೆ ಮೋಡಿಯನ್ನು ಈ ಹಿಂದೆ ನೋಡಿದ್ದೇವೆ. ಗಂಧರ್ವ ನಾಟಕ ಮಂಡಳಿಯಿಂದ ಈ ಪ್ರಭಾವಳಿ ಇನ್ನಷ್ಟು ಗಾಢವಾಯಿತು. ಇಂಥ ವಾತಾವರಣದಲ್ಲಿ ಕೊಣ್ಣೂರ ಕಂಪನಿ, ಶಿರಹಟ್ಟಿ ಕಂಪನಿ, ಹಲಗೇರಿ ಕಂಪನಿಗಳು ಮರಾಠಿ ನಾಟಕಗಳ ಪ್ರಭಾವ ಹಾಗೂ ಪ್ರೇರಣೆಯನ್ನು ಅರಗಿಸಿಕೊಂಡು ಬೆಳೆಯಲು ಪ್ರಯತ್ನಿಸಿದ. ಕೊಣ್ಣೂರ ನಾಟಕ ಕಂಪನಿಗಾಗಿ ಗರುಡ ಸದಾಶಿವರಾಯರು 'ಸಂಗೀತ ಸೌಭದ್ರ'ವನ್ನು ಅನುವಾದಿಸಿದ್ದರು. ಹಲಗೇರಿ ಕಂಪನಿಯು ಮರಾಠಿಯ 'ರಾಕ್ಷಸಿ ಮಹತ್ವಾಕಾಂಕ್ಷೆ', 'ವಿಕ್ರಮೋರ್ವಶೀಯ ನಾಟಕಗಳನ್ನು ಅನುವಾದಿಸಿ ಪ್ರದರ್ಶಿಸುತ್ತಿತ್ತು. ಹೀಗೆ ಕನ್ನಡ ನಾಟಕ ಕಂಪನಿಗಳು ಉತ್ತರ ಕರ್ನಾಟಕದಲ್ಲಿ ಪ್ರದರ್ಶನಗೊಂಡು, ಖ್ಯಾತಿ ಹೊಂದಿದ್ದ ಮರಾಠಿ ನಾಟಕಗಳನ್ನು ಅನುವಾದಿಸಿ ಪ್ರದರ್ಶಿಸುವ ಪ್ರಯತ್ನ ಮಾಡಿದವು. ಇದೇ ಅವಧಿಯಲ್ಲಿ ವಾಮನರಾಯರು ರಂಗಭೂಮಿಯನ್ನು ಪ್ರವೇಶಿಸಿದರು. ವಾಮನರಾಯರಿಗೆ ಮರಾಠಿ ಭಾಷೆಯ ನಿಕಟ ಪರಿಚಯವಿತ್ತು. ಮರಾಠಿ ನಾಟಕಗಳನ್ನು ಸೊಗಸಾಗಿ ಅನುವಾದಿಸುವ ಕಲೆಗಾರಿಕೆಯೂ ಇತ್ತು. ಹೀಗಾಗಿ ಅವರಿಂದ ಎಂಟು-ಹತ್ತು ನಾಟಕಗಳು ಕನ್ನಡಕ್ಕೆ ಅನುವಾದವಾದವು. ಇವೆಲ್ಲ ಅವರದೇ ಕಂಪನಿಯ ರಂಗದ ಮೇಲೆ ಪ್ರಯೋಗಗೊಂಡು ಯಶಸ್ವಿಯಾದವು. ಮರಾಠಿಯ ಪ್ರಸಿದ್ಧ ನಾಟಕಗಳನ್ನು ವಾಮನರಾಯರು ಅನುವಾದಿಸಿದಷ್ಟು ಬೇರೆ ಯಾರೂ ಅನುವಾದಿಸಿಲ್ಲ. ಗುಣಮಟ್ಟದಲ್ಲಿ ಕೂಡ ಅವರದೇ ವಿಶೇಷತೆ. ಮರಾಠಿ ರಂಗಭೂಮಿಯ ಜನಪ್ರಿಯತೆಯ ಗುಣಗಳನ್ನೆಲ್ಲ ಕನ್ನಡಕ್ಕೆ ತಂದು ತೋರಿಸಿದವರಲ್ಲಿ ವಾಮನರಾಯರು ಅಗ್ರಗಣ್ಯರಾಗಿದ್ದಾರೆ.

ವಾಮನರಾಯರು ಅನುವಾದಿಸಿದ್ದ ನಾಟಕಗಳಲ್ಲಿ ಕೆಲವನ್ನು ಆಯ್ದು ಅವರ ಮಗ ವೆಂಕಟರಾವ ವಾಮನರಾವ ಸವಣೂರ ಅವರು ಪ್ರಕಟಿಸಿದ್ದಾರೆ. ಧಾರವಾಡದಲ್ಲಿ 'ವಿಶ್ವಗುಣಾದರ್ಶ ಪ್ರಕಾಶನ ಸಮಿತಿ' ಎಂಬ ಪ್ರಕಾಶನ ಸಂಸ್ಥೆಯನ್ನು ಹುಟ್ಟು ಹಾಕಿ ೧೯೩೫ ರಿಂದಲೇ ನಾಟಕಗಳನ್ನು ಪ್ರಕಟಿಸುವಂಥ ಸ್ತುತ್ಯಾರ್ಹ ಕಾರ್ಯ ಮಾಡಿದ್ದಾರೆ. ವಾಮನರಾಯರ ಪ್ರಕಟಿತ ನಾಟಕಗಳ ಜನಪ್ರಿಯತೆ, ಅವುಗಳ ಪ್ರಸಾರದ ಬಗೆಗಿನ ಒಂದು ಸಂಗತಿ ಇಲ್ಲಿ ಹೇಳಬೇಕು. 'ವೀರ ಅಭಿಮನ್ಯು' ನಾಟಕದ ಮೊದಲ ಆವೃತ್ತಿ ಪ್ರಕಟವಾದದ್ದು ೧೯೩೫ರಲ್ಲಿ ಅದರ ಹನ್ನೊಂದನೆಯ ಆವೃತ್ತಿ ಪ್ರಕಟವಾದದ್ದು ೧೯೮೮ರಲ್ಲಿ ಪ್ರತಿಯೊಂದು ಆವೃತ್ತಿಯಲ್ಲಿ ಸಾವಿರ ಪ್ರತಿಗಳು ಪ್ರಸಾರವಾಗಿವೆ. ಕಂಪನಿ ನಾಟಕಗಳ ಪ್ರಸಾರದಲ್ಲಿ ಇದೊಂದು ದಾಖಲೆಯೇ ಸರಿ. ಇತರ ನಾಟಕಗಳು ಕೂಡ ಅನೇಕ ಆವೃತ್ತಿಗಳನ್ನು ಕಂಡಿವೆ. ಪ್ರಕಟಿತ ನಾಟಕಗಳ ಬೆನ್ನು ಪುಟಕ್ಕೆ ವಾಮನರಾಯರ ಪ್ರಕಟಿತ ನಾಟಕಗಳ ಪಟ್ಟಿ ಇದೆ. ಅದರಲ್ಲಿ ಒಂಭತ್ತು ನಾಟಕಗಳಿವೆ. 'ಭಕ್ತ ಪ್ರಹ್ಲಾದ' ಒಂದನ್ನು ಬಿಟ್ಟರೆ ಉಳಿದ ಏಳು ನಾಟಕಗಳು ಮರಾಠಿಯಿಂದ ಕನ್ನಡಕ್ಕೆ

ಅನುವಾದವಾಗಿ ಬಂದಿವೆ. 'ವಿದ್ಯಾಸಾಧನೆ' ಎಂಬುದು ಮರಾಠಿ ನಾಟಕದ ಅನುವಾದವಾದರೂ ಅದು ಪ್ರಕಟವಾಗಿಲ್ಲ. ಅವರ ಪ್ರಕಟಿತ ನಾಟಕಗಳ ಪಟ್ಟಿ ಹೀಗಿದೆ.

೧. ವೀರ ಅಭಿಮನ್ಯು

೨. ಪಾರ್ವತೀ ಸತ್ವ ಪರೀಕ್ಷೆ

೩. ಸಂದೇಹ ಸಾಮ್ರಾಜ್ಯ

೪. ದ್ರೌಪದಿ ವಸ್ತ್ರಾಪಹರಣ

೫. ಕೃಷ್ಣಾರ್ಜುನರ ಯುದ್ಧ

೬. ಸಾಧ್ವಿ ಸಖೂಬಾಯಿ

೭. ಎರಡನೆಯ ಬಾಜೀರಾವ ಪೇಶವೆ

೮. ಭಕ್ತ ಪ್ರಹ್ಲಾದ

೯. ಭಕ್ತ ಪುಂಡಲೀಕ

ರಾಯರ ಪ್ರಕಟಿತ ನಾಟಕಗಳಲ್ಲಿ ಹೆಚ್ಚು ಆವೃತ್ತಿ ಕಂಡಿರುವ ನಾಟಕವೆಂದರೆ 'ವೀರ ಅಭಿಮನ್ಯು' ಇದರ ಹನ್ನೊಂದನೆಯ ಆವೃತ್ತಿಯು ೧೯೮೪ ರಲ್ಲಿ ಹೊರಬಂದಿತು. ಇತ್ತೀಚಿಗೆ ಧಾರವಾಡದ 'ಮನೋಹರ ಗ್ರಂಥಮಾಲೆ' ಯವರು ವಾಮನರಾಯರ ಎಂಟು ನಾಟಕಗಳ ಸಂಪುಟ (ಭಕ್ತ ಪುಂಡಲೀಕ ಹೊರತುಪಡಿಸಿ) ವನ್ನು ಪ್ರಕಟಿಸಿದೆ. ಇದು ಕಂಪನಿ ನಾಟಕ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ದೊಡ್ಡ ಕಾಣಿಕೆ ಎನ್ನಬಹುದು.

ವಾಮನರಾಯರು ನಾಟಕಗಳ ಅನುವಾದಕಾರ್ಯ ಪ್ರಾರಂಭಿಸಿದ್ದು ಶಿರಹಟ್ಟಿ ಕಂಪನಿಯಲ್ಲಿಯೇ ಎಂದು ಶಿರಹಟ್ಟಿಯ ಶ್ರೀ ಬಾಲೆಹೊಸೂರ ರಾಮರಾಯರ ಅಭಿಪ್ರಾಯ. ಇವರು 'ಕರ್ಮವೀರ' ವಾರಪತ್ರಿಕೆಗೆ ಬರೆದ 'ದಿ. ಸವಣೂರ ವಾಮನರಾವ ಮಾಸ್ತರರು' ಎಂಬ ಪ್ರಕಟಿತ ಲೇಖನವು 'ವೀರ ಅಭಿಮನ್ಯು' ನಾಟಕ ಪುಸ್ತಕದ ಆರಂಭದಲ್ಲಿ ಸೇರಿಕೊಂಡಿದೆ. ಅದರಲ್ಲಿ ಶಿರಹಟ್ಟಿ ಕಂಪನಿಯು "೧೯೦೮ ರಲ್ಲಿ ಧಾರವಾಡಕ್ಕೆ ಬಂದು ಬೀಡು ಬಿಟ್ಟಿತು. ಆ ವೇಳೆಗಾಗಲೆ 'ಬಲಸಿಂಹತಾರಾ' ಎಂಬ ದಿ. ವಾಮನರಾಯರೇ ಬರೆದ ಹೊಸ ನಾಟಕ ಕಲಿತಾಗಿತ್ತು. ಧಾರವಾಡದಲ್ಲಿದ್ದಾಗಲೇ 'ಇಂದಿರಾ' ಎಂಬ ಸಾಮಾಜಿಕ ನಾಟಕವೊಂದನ್ನು ಮೊದಲ ಬಾರಿಗೆ ರೂಢಿಸಿಕೊಳ್ಳಲಾಯಿತು.[೧೬]" ಎಂದಿದ್ದಾರೆ. ಇದೇ ಲೇಖನದಲ್ಲಿ ಮುಂದೆ ಬರುವ ಒಂದು ಪ್ಯಾರಾ ಹೀಗಿದೆ.

"ಪ್ರಾರಂಭದಲ್ಲಿ ವಾಮನರಾಯರು ಸಹ ವೆಂಕೋಬರಾಯರ ಕಂಪನಿಯ ನಾಟಕಗಳನ್ನೇ ಹೆಸರು ಬದಲಾಯಿಸಿ ಹಾಗೂ ಮತ್ತೆ ಕೆಲವು ಬದಲಾವಣೆಗಳೊಂದಿಗೆ ಆಡುತ್ತಿದ್ದರಾದರೂ ಮುಂದೆ ಕಂಪನಿಗೆ ಸಾಕಷ್ಟು ಯಶಸ್ಸು ದೊರೆತು ಆತ್ಮವಿಶ್ವಾಸ ಬೆಳೆದ ನಂತರ ಅನೇಕ ಪ್ರಸಿದ್ಧ ಮರಾಠೀ ನಾಟಕಗಳನ್ನು

ಕನ್ನಡಕ್ಕೆ ಪರಿವರ್ತಿಸಿ ರಂಗಭೂಮಿಗೆ ತರಲಾರಂಭಿಸಿದರು. 'ವಿಶ್ವಸಾಧನೆ', 'ಪಾರ್ವತೀ ಸತ್ವ ಪರೀಕ್ಷೆ', 'ಸಂದೇಹ ಸಾಮ್ರಾಜ್ಯ', 'ಸಂತ ಸಖೂಬಾಯಿ', 'ಪುಂಡಲೀಕ', 'ಬಾಜೀರಾವ ಪೇಶ್ವೆ', 'ವೀರ ಅಭಿಮನ್ಯು' ಮುಂತಾದವು ಅವರ ಪ್ರಸಿದ್ಧ ನಾಟಕಗಳು[೧೭]".

ವಾಮನರಾಯರು ಶಿರಹಟ್ಟಿ ನಾಟಕ ಕಂಪನಿಯಲ್ಲಿದ್ದಾಗ ೧೯೦೮ ಮತ್ತು ೧೯೧೦ ಈ ಅವಧಿಯಲ್ಲಿ ಬಲಸಿಂಹತಾರಾ ಮತ್ತು ಇಂದಿರಾ ನಾಟಕಗಳನ್ನು ರಚಿಸಿರಬಹುದು. ವಾಮನರಾಯರ ಚರಿತ್ರೆಯನ್ನು ಬರೆದ ನಾಡಿಗೇರ ಕೃಷ್ಣರಾಯರಾಗಲಿ, ಎನ್ಕೆ ಕುಲಕರ್ಣಿಯವರಾಗಲಿ ಇವೆರಡೂ ನಾಟಕಗಳ ಪ್ರಸ್ತಾಪ ಮಾಡಿರುವುದಿಲ್ಲ. ೧೯೧೭ ರಲ್ಲಿ ಬರೆದ ವಿದ್ಯಾಸಾಧನೆ (ಮೂಲ ಮರಾಠಿ: ವಿದ್ಯಾಹರಣ) ರಾಯರ ಮೊದಲ ಅನುವಾದಿತ ನಾಟಕ ಎಂದು ಈ ಚರಿತ್ರೆಕಾರರು ಹೇಳಿರುವರು. ಆದರೆ ಒಂದು ಮಾತು, ಶಿರಹಟ್ಟಿ ಕಂಪನಿ ಪ್ರದರ್ಶಿಸುತ್ತಿದ್ದ ಬಲಸಿಂಹತಾರಾ ಮತ್ತು ಇಂದಿರಾ ನಾಟಕಗಳ ರಚನೆಯಲ್ಲಿ ವಾಮನರಾಯರ ಪಾತ್ರ ಪ್ರಮುಖವಾಗಿರಬೇಕೆನಿಸುತ್ತದೆ. ಅಂದಿನ ಕಾಲದ ಕಂಪನಿ ನಾಟಕಗಳ ರಚನೆಯ ಸ್ವರೂಪವಾದರೂ ಮುಕ್ತವಾಗಿತ್ತು. ಮೂಲದಲ್ಲಿ ಬರೆದ ನಾಟಕಕಾರ ತನ್ನ ಹಕ್ಕಿಗಾಗಿ ಒತ್ತಾಯ ಮಾಡುತ್ತಿರಲಿಲ್ಲ. ಈ ಬಗೆಗೆ ವಾಮನರಾಯರ ಗೆಳೆಯರೂ, ಪ್ರಸಿದ್ಧ ರಂಗನಟರೂ ಆಗಿದ್ದ ಕೊಟ್ಟೂರಪ್ಪನವರು ಹೇಳುವ ಮಾತು ಗಮನಾರ್ಹವಾಗಿದೆ.

"ವಾಮನರಾವ್ ಮಾಸ್ತರರು ಹಿಂದೆ ಶಿರಹಟ್ಟಿ ಕಂಪನಿಯಲ್ಲಿ ಆಡುತ್ತಿದ್ದ ಜನಪ್ರಿಯ ನಾಟಕಗಳನ್ನೇ ಸ್ವಲ್ಪ ಅಲ್ಲಿ ಇಲ್ಲಿ ಬದಲಿಸಿ ಹೆಸರು ಬೇರೆ ಮಾಡಿ ಆಡಿಸತೊಡಗಿದರು. ಒಂದು ತಮಾಷೆ ಏನು ಅಂದರೆ, ಆ ಯಾವ ನಾಟಕಗಳೂ ಪ್ರಿಂಟಾಗಿರಲಿಲ್ಲ. 'ಭೋಜಪ್ರಬಂಧ'ವನ್ನೇನೊ. ಬರೆದವರು ಇಂಥವರು ಎಂದು ತಿಳಿದಿತ್ತು. 'ಕೃಷ್ಣಲೀಲೆ', 'ಪ್ರಹ್ಲಾದ ಚರಿತ್ರೆ' ಮುಂತಾದವುಗಳನ್ನು ಯಾರು ಬರೆದಿದ್ದು ಎಂಬುದೇ ಗೊತ್ತಿರಲಿಲ್ಲ. ಯಾರೋ ಬರೆದವುಗಳನ್ನು ಹಲವಾರು ಕಂಪನಿಗಳು ಆಡುತ್ತಿದ್ದವು. ಯಾರು ಯಾರು ಎಷ್ಟೆಷ್ಟು ತಿದ್ದಿ ಬದಲಾವಣೆ ಮಾಡಿಕೊಂಡಿದ್ದರೊ ಅವರವರ (ಅಂದರೆ ನಾಟಕ ಕಂಪನಿ ಮಾಲೀಕರ ಇಲ್ಲಾ ನಾಟಕ ಕಲಿಸುವವರ) ನೋಟ್ ಪುಸ್ತಕಗಳಲ್ಲಿ ಬರೆದಿಟ್ಟುಕೊಂಡಷ್ಟೇ ಹಸ್ತ ಬರಹದಲ್ಲಿ ಉಳಿದುಕೊಂಡಿದ್ದವು. ಅವುಗಳನ್ನೇ ವಾಮನರಾಯರು ಆಡಿಸುವಾಗ ಯಾರೂ ಆಕ್ಷೇಪ ಎತ್ತುವ ಪ್ರಮೇಯವೇ ಇರಲಿಲ್ಲ. 'ಕಾಪಿರೈಟ್' ಅಂತ ಯಾವ ನಾಟಕಕ್ಕೂ ನಿರ್ಬಂಧ ಇರಲಿಲ್ಲ. ಅದೆಲ್ಲ ಈಗಿನ ಕಾಲದ ಮಾತು. ಅಲ್ಲದೆ ವಾಮನರಾಯರು ಸ್ವತಃ ನಾಟಕ ಬರೆಯುತ್ತಿದ್ದರು. ಮುಂದೆ ಮರಾಠೀ ನಾಟಕಗಳ ಜನಪ್ರಿಯತೆ ನೋಡಿಯೋ ಇಲ್ಲಾ ತಾವೇ ಆ ನಾಟಕಗಳನ್ನು ಮೆಚ್ಚಿಕೊಂಡಿದ್ದರಿಂದಲೋ ಅದೇ ನಾಟಕಗಳನ್ನು ಕನ್ನಡಕ್ಕೆ ಅನುವಾದ ಮಾಡಿ ರಂಗದ ಮೇಲೆ ಆಡಿಸುವುದಕ್ಕೂ ಹಿಂದೆ ಮುಂದೆ ನೋಡಲಿಲ್ಲ. ಅವರ ಕಂಪನಿಯ ನಾಟಕಗಳು ಹೆಚ್ಚಾಗಿ ಈ ಮರಾಠೀ ನಾಟಕಗಳ ಕನ್ನಡ ರೂಪಗಳೇ[೧೮], ಒಂದು ಕಂಪನಿಯಲ್ಲಿ ಪ್ರಸಿದ್ಧವಾದ ನಾಟಕವನ್ನು ಇನೊಂದು ಕಂಪನಿಯವರು ಅದೇ ಮಾದರಿಯಲ್ಲೇ

ನಾಟಕವನ್ನು ರಚಿಸಿ, ಅದಕ್ಕೊಂದು ಬೇರೆ ಹೆಸರಿಟ್ಟು ಪ್ರಯೋಗಿಸುತ್ತಿದ್ದುದು ಆ ಕಾಲದಲ್ಲಿ ಸಾಮಾನ್ಯ ಸಂಗತಿ. ಮರಾಠಿಯ ರಾಮ ಗಣೇಶ ಗಡ್ಕರಿ ಅವರ 'ಏಕಚ ಪ್ಯಾಲಾ' ನಾಟಕವು 'ಗಂಧರ್ವ ನಾಟಕ ಮಂಡಳಿ'ಯಲ್ಲಿ ಅತ್ಯಂತ ಯಶಸ್ವಿಯಾದಾಗ ಅದನ್ನು ಕನ್ನಡದಲ್ಲಿ ಅನುವಾದಿಸುವ ಕಾರ್ಯವು ಚುರುಕಾಯಿತು. ಐದಾರು ಕಂಪನಿಯವರು 'ಏಕಚ ಪ್ಯಾಲಾ' ನಾಟಕವನ್ನೇ ಐದಾರು ಹೆಸರುಗಳಿಂದ ತಮ್ಮ ಕಂಪನಿಗೆ ಹೇಗೆ ಬೇಕೋ ಹಾಗೆ ಅನುವಾದಿಸಿ ಆಡಿದರು. ಅವರೆಲ್ಲರ ಪ್ರಯೋಗಗಳೂ ಭಿನ್ನ ಭಿನ್ನವಾಗಿದ್ದವೆಂಬುದನ್ನು ಹಿರಿಯ ಕಲಾವಿದರನೇಕರು ಸ್ಮರಿಸುತ್ತಾರೆ.

ಕಂಪನಿ ನಾಟಕಗಳ ಆರಂಭದ ದಿನಗಳಲ್ಲಿಯ ಈ ಮಾದರಿಯ ಚಟುವಟಿಕೆಗಳನ್ನು ಪ್ರಸ್ತಾಪಿಸಿದಾಗ ವಾಮನರಾಯರಂಥ ನಾಟಕಕಾರರ ಸಾಮರ್ಥ್ಯಕ್ಕೇನೂ ಚ್ಯುತಿ ಬರಲಾರದು, ಬರುವುದಿಲ್ಲ. ಬಲಸಿಂಹತಾರಾ, ಇಂದಿರಾ, ವಿವೇಕ ವಿಜಯ, ಯುವತೀ ವಿಜಯ, ಲಂಕಾದಹನ, ರಾವಣ ವಧೆ, ಭಕ್ತ ಪ್ರಹ್ಲಾದ – ಇವು ಆರಂಭದ ಹಂತದಲ್ಲಿ ಬರೆದ ನಾಟಕಗಳು. ತಮಿಳು, ತೆಲಗು, ಕನ್ನಡ ಭಾಷೆಯಲ್ಲಿದ್ದ ನಾಟಕಗಳನ್ನೇ ಮತ್ತೆ ಪರಿಷ್ಕರಿಸಿ ರಂಗಭೂಮಿಯ ಮೇಲೆ ಇನ್ನಷ್ಟು ಉಜ್ವಲಗೊಳ್ಳುವಂತೆ ಒಪ್ಪ ಓರಣಗೊಳಿಸಿ ರಚಿಸಿದಂತಹ ರಂಗಕೃತಿಗಳಿವು. ಎರಡನೆಯ ಹಂತದಲ್ಲಿ ಜನಪ್ರಿಯ ಮರಾಠೀ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದರು. ರಂಗಗೀತೆಗಳು ಮಾತ್ರ ಅವರ ಕಾವ್ಯ ಪ್ರತಿಭೆಯಿಂದ ಪ್ರಕಟವಾದ ರಚನೆಗಳಂತಿವೆ. ವಾಮನರಾಯರ ಈ ಮೂರು ತರಹದ ರಚನೆಗಳನ್ನು ಸ್ಥೂಲವಾಗಿ ಗಮನಿಸೋಣ.

**ಹಳೆಯ ನಾಟಕಗಳ ಪರಿಷ್ಕರಣೆ:**

ವಾಮನರಾಯರು ಶಿರಹಟ್ಟಿ ಕಂಪನಿಯಲ್ಲಿ ಐದಾರು ವರ್ಷ ಇದ್ದರು. ಈ ಅವಧಿಯಲ್ಲಿ ಅವರ ರಂಗಭೂಮಿಯ ವ್ಯಕ್ತಿತ್ವ ಬಹುಮುಖವಾಗಿ ಬೆಳೆಯಿತು. ನಟರಾಗಿ, ನಾಯಕ ನಟರಾಗಿ, ಅಭಿನಯ ಸಂಗೀತ ಕಲಿಸುವ ಮಾಸ್ತರರಾಗಿ, ನಾಟಕ ಕವಿಯಾಗಿ–ಶಿರಹಟ್ಟಿ ಕಂಪನಿಯ ಕಣ್ಣಾಗಿ ಬೆಳೆದದ್ದು ಅವರ ಪ್ರತಿಭಾ ಸಂಪನ್ನತೆಗೆ ನಿದರ್ಶನವಾಗಿದೆ. ಅದಕ್ಕೆ ಬೇಕಾಗುವ ಸ್ವಾತಂತ್ರ್ಯ ಮತ್ತು ಪ್ರೋತ್ಸಾಹವು ಶಿರಹಟ್ಟಿ ವೆಂಕೋಬರಾಯರಿಂದ ಲಭಿಸಿತ್ತು. ಈ ಕಂಪನಿಯ ಭೋಜಪ್ರಬಂಧ, ರಾಮರಾಜ್ಯ ವಿಯೋಗ, ಪದ್ಮಾವತೀ ಪರಿಣಯ, ವಿವೇಕ ವಿಜಯ, ಬಲಸಿಂಹತಾರಾ ನಾಟಕಗಳಲ್ಲಿ ವಾಮನರಾಯರದು ಮುಖ್ಯ ಭೂಮಿಕೆ. ಅವರಲ್ಲಿಯ ಸಂಗೀತ, ಸಾಹಿತ್ಯ ಕಲೆಗಳು ಅವರನ್ನು ನಾಯಕ ಪಟ್ಟಕ್ಕೆ ಏರಿಸಿದ್ದವು. ನಾಟಕವೊಂದರ ಸನ್ನಿವೇಶದ ರಸಭಾವ ಪೋಷಣೆಗಾಗಿ ಒಂದು ಹಾಡು ಬೇಕೆನಿಸಿದರೆ, ಅದಕ್ಕಾಗಿ ಧಾಟಿಯನ್ನು ಸೂಚಿಸಿದರೆ ವಾಮನರಾಯರು ಕೂಡಲೇ ಸೊಗಸಾದ ಹಾಡನ್ನು ಬರೆದು ಕೊಡುತ್ತಿದ್ದರು. ಅವರು ಬರೆದ ಹಾಡುಗಳು ಪ್ರೇಕ್ಷಕರಿಗೆ ಮೆಚ್ಚುಗೆಯಾಗುತ್ತಿದ್ದವು. ನಾಟಕಗಳಿಗೆ ಹಾಡುಗಳನ್ನು ಧಾರಾಳವಾಗಿ ಬರೆದುಕೊಡುತ್ತಿದ್ದ ರಾಯರು ಒಂದು ಸಲ ಯಾರದೋ ಎದುರಿಗೆ 'ಬರೇ ಫುಕಟ್

ಹಾಡು ಮಾಡೂದಾತು' ಎಂದರಂತೆ. ಈ ಮಾತು ವೆಂಕೋಬರಾಯರ ಕಿವಿಯ ಮೇಲೆಯೂ ಬಿತ್ತು. ಆಗ ಅವರು ತಮ್ಮ ಹೆಂಡತಿಯ ಕೈಯೊಳಗಿನ ಬಂಗಾರದ ಪಾಟಲಿಗಳನ್ನು ಹಿಡಿದುಕೊಂಡು ಬಂದು ವಾಮನರಾಯರ ಕೈಗಿಟ್ಟು 'ತಗೋಳ್ರಿ, ಹಾಡು ಮಾಡಿ ಕೊಡ್ರಿ' ಎಂದರಂತೆ. ಆಗ ವಾಮನರಾಯರು ತಬ್ಬಿಬ್ಬಾದರು 'ಇದೇನು?' 'ಇದು ಯಾಕೆ?' 'ನಿಮಗೆ ಯಾರು ಹೇಳಿದರು?' 'ನಾನು ಯಾರ ಮುಂದೆಯೋ ಚೇಷ್ಟೆಗಾಗಿ ಆಡಿದ ಮಾತಿಗೆ ನೀವು ನಿಮ್ಮ ಹೆಂಡತಿಯ ಕೈಯೊಳಗಿನ ಬಂಗಾರ ಬಳೆ ತಂದು ಕೊಡೋದೆ?' ಎಂದು ಹಳಹಳಿಸಿದರು. ವಾಮನರಾಯರ ಪ್ರಾಮಾಣಿಕತೆಯನ್ನು ಪ್ರಮಾಣೀಕರಿಸಿ ನೋಡಿದ ವೆಂಕೋಬರಾಯರು 'ನೀವು ಏನೂ ತಿಳಿಕೊಬ್ಯಾಡ್ರಿ ವಾಮನರಾವ್? ರೂಪಾಯಿಗಿಂತ ಬಂಗಾರ ಕಾಯಂ ಇರ್ತದ. ನಾನು ಅನುಕೂಲವಾದಾಗ ಮತ್ತೆ ಇಂಥ ಒಡವೆ ಮಾಡಿಸ್ತೀನಿ ನನ್ನ ಹೆಂಡತಿಗೆ. ನೀವು ಇದನ್ನು ತಕ್ಕೊಳ್ಳಲೇಬೇಕು ಎಂಬ ಆಗ್ರಹವಿದೆ' ಎಂದು ಪಟ್ಟು ಹಿಡಿದು ಒಪ್ಪಿಸಿದರು[೯೯]. ವಾಮನರಾಯರ ಕವಿತಾಶಕ್ತಿಗೆ ಸಂದ ಗೌರವವಿದು. ಯಾರಾದರೂ ಗವಾಯಿಗಳು ಹೊಸ ಧಾಟಿ ಹೇಳಿದರೆ ಅದೇ ಜಾಡು ಹಿಡಿದು ಹಾಡು ರಚಿಸುತ್ತಿದ್ದರು. ಸ್ವತಃ ಕಂಪನಿ ನಿಲ್ಲಿಸಿದ ಮೇಲೆ ಗುರುರಾವ ದೇಶಪಾಂಡೆ ಅವರು ಹೊಸ ಹೊಸ ಧಾಟಿಗಳನ್ನು ಹೇಳುವುದು ವಾಮನರಾಯರು ಅವುಗಳಿಗೆ ತಕ್ಕಂತೆ ಹಾಡುಗಳನ್ನು ಬರೆಯುವುದು ರೂಢಿಯಾಯಿತು. ಗುರುರಾಯರು 'ವಿಧಿ ಚಾರುಕಾಂತ ಕುಸುಮಾ' ಎಂಬ ಚಾಲ ಹೇಳಿದರೆ ಕೆಲ ಹೊತ್ತಿನ ಮೇಲೆ 'ರಮಣೀಯ ವಾಸ ಸುಖದಾ' ಎಂಬ ಹಾಡು ಸಿದ್ಧವಾಗುತ್ತಿತ್ತು. 'ನೈನನ ಸಮಾರಹೆ' ಎಂಬ ಮತ್ತೊಂದು ಖ್ಯಾಲ್ ಚೀಜ್ ಹೇಳಿದಾಗ 'ಕೋಮಲೆ ಸುಭಾಂಗಿಯೆ' ಎಂದು ಸರಸ ಸುಂದರವಾದ ರಚನೆ ರೂಪುಗೊಳ್ಳುತ್ತಿತ್ತು. ದೇಶಪಾಂಡೆ ಗುರುರಾಯರು ಈ ರಚನೆಯನ್ನು 'ಕೃಷ್ಣಾರ್ಜುನ ಕಾಳಗ'ದಲ್ಲಿ ಬಹಳ ಸೊಗಸಾಗಿ ಹಾಡುತ್ತಿದ್ದರಂತೆ. ಹೀಗೆ ವಾಮನರಾಯರ ರಂಗಗೀತೆಗಳ ಸಾಹಿತ್ಯವು ರಂಗಭೂಮಿಗೆ ಕಳೆಕಟ್ಟುವಂತೆ ಮಾಡುತ್ತಿತ್ತು. ವಾಮನರಾಯರ ರಂಗಸಾಹಿತ್ಯದ ಇನ್ನಷ್ಟು ವಿವರಗಳನ್ನು ಅವರ ನಾಟಕ ಸಾಹಿತ್ಯ ಅಧ್ಯಾಯದಲ್ಲಿ ಗಮನಿಸಬಹುದು.

೧೯೧೨ ಮತ್ತು ೧೯೧೩ ರಲ್ಲಿ ರಾಯರು ಪಾಲುದಾರಿಕೆ ಆಧಾರದ ಮೇಲೆ ಕಂಪನಿ ನಡೆಸಿದರು. ಆಗ ಶಿರಹಟ್ಟಿ ಕಂಪನಿಯಲ್ಲಿ ಆಡುತ್ತಿದ್ದ ನಾಟಕಗಳನ್ನೇ ಅಲ್ಪ ಸ್ವಲ್ಪ ಬದಲಾವಣೆ ಮಾಡಿಕೊಂಡು ಪ್ರಯೋಗಿಸಿದರು. ಶಿರಹಟ್ಟಿ ಕಂಪನಿಯ 'ಭೋಜ ಪ್ರಬಂಧ' ನಾಟಕವು ಇಲ್ಲಿ 'ಕವಿರತ್ನ ಕಾಳಿದಾಸ'ವಾಯಿತು ಕಾಳಿದಾಸ ಪಾತ್ರವನ್ನು ವಾಮನರಾಯರೇ ನಿರ್ವಹಿಸುತ್ತಿದ್ದರು ಹಾಡು ಅಭಿನಯಗಳ ಮೂಲಕ ಆ ಪಾತ್ರ ಎದ್ದು ಬರುವಂತೆ ಮೊದಲಿನ ನಾಟಕವನ್ನು ತಿದ್ದಿದರು. ಅಲ್ಲಿಂದ 'ಶ್ರೀನಿವಾಸ ಕಲ್ಯಾಣ' ನಾಟಕವು ಇಲ್ಲಿ 'ಪದ್ಮಾವತಿ' ಯಾಗಿ ಪರಿಣಮಿಸಿತು ಉಳಿದಂತೆ 'ಯುವತೀ ವಿಜಯ' 'ವಿವೇಕ ವಿಜಯ' ನಾಟಕಗಳು ರಾಯರ ಪ್ರಮುಖ ಭೂಮಿಕೆಯಲ್ಲಿ ಮೊದಲಿನಂತೆಯೇ ಪ್ರದರ್ಶನಗೊಳ್ಳತೊಡಗಿದವು.

೧೯೧೪ ರಲ್ಲಿ ಸ್ವಂತ ಕಂಪನಿ–'ವಿಶ್ವಗುಣಾದರ್ಶ' ಪ್ರಾರಂಭವಾದ ಮೇಲೆ ಮೊದಲಿನ ನಾಟಕಗಳ ಜೊತೆಗೆ ಕೆಲವು ಹೊಸ ನಾಟಕಗಳು ರಚನೆಯಾದವು. ಬಳ್ಳಾರಿ ಕ್ಯಾಂಪಿನಲ್ಲಿ ಕಂಪನಿಗೆ ಸಿಕ್ಕ ಪ್ರತಿಕ್ರಿಯೆ ಉತ್ಸಾಹದಾಯಕವಾಗಿತ್ತು. ಆಗ ರಾಯರು ಅಲ್ಲಿಯ ಪ್ರೇಕ್ಷಕರಿಗೆ ಹೊಸ ಕಾಣಿಕೆ ಕೊಡಬೇಕೆಂಬ ಅಭಿಲಾಷೆಯಿಂದ ತಮಿಳಿನ ಜನಪ್ರಿಯ ನಾಟಕ 'ಲಂಕಾದಹನ' ಕನ್ನಡ ಅವತರಣಿಕೆಯ ಸಿದ್ಧತೆಗೆ ತೊಡಗಿದರು. ಈ ನಾಟಕವು ತಮಿಳಿನ ಗೋವಿಂದಸ್ವಾಮಿ ನಾಯ್ಕರ್ ಅವರ ಕಂಪನಿಯಿಂದ ಪ್ರಯೋಗಗೊಳ್ಳುತ್ತಿತ್ತು. ಹನುಮಂತನ ಪಾತ್ರಕ್ಕೆ ವಿಶೇಷ ಪ್ರಾಶಸ್ತ್ಯವಿರುವ ನಾಟಕವಿದು ಇದನ್ನು ರಾಯರು ಬಳ್ಳಾರಿಯ ಕ್ಯಾಂಪಿನಲ್ಲಿಯೇ ಅನುವಾದಿಸಿದರು. ರಾಯರಿಗೆ ತಮಿಳು ಬರುತ್ತಿರಲಿಲ್ಲ ತಮಿಳು ಕಂಪನಿಯ ಪೇಂಟರ್ ಅಳಗಿರಿಸ್ವಾಮಿ ಎಂಬವನಿಂದ ನಾಟಕದ ಕಥೆ ಸನ್ನಿವೇಶ ಓದಿಸಿದರು. ತಮಿಳಿನಲ್ಲಿ ಭಾವಪೂರ್ಣವಾಗಿ ಓದಿದ್ದನ್ನು ಗ್ರಹಿಸಿಕೊಂಡು ವಾಮನರಾಯರು ಕನ್ನಡದಲ್ಲಿ 'ಲಂಕಾದಹನ' ನಾಟಕ ರಚಿಸಿದರು[೨೦]. ತಮಿಳು ಕಂಪನಿಯ ಮಾದರಿಯಲ್ಲಿಯೇ ರಂಗಪರಿಕರ, ವೇಷಭೂಷಣಗಳನ್ನು ಸಿದ್ಧಗೊಳಿಸಿ ನಾಟಕವನ್ನಾಡಿದಾಗ ಅದಕ್ಕೆ ಅದ್ಭುತ ಯಶ ದೊರೆಯಿತು. ಇದೇ ಉತ್ಸಾಹದಲ್ಲಿ 'ರಾವಣ ವಧೆ' ನಾಟಕದ ರಚನೆಗೆ ಕೈ ಹಾಕಿದರು. ಧಾರವಾಡದಲ್ಲಿ ಎರಡು ತಿಂಗಳು ಕಾಲ ಈ ನಾಟಕಕ್ಕಾಗಿಯೇ ವಾಸ್ತವ್ಯ ಹೂಡಿ. ತೆಲುಗಿನಲ್ಲಿ ಕೃಷ್ಣಮಾಚಾರ್ ಎಂಬ ವಿದ್ವಾಂಸರು ಬರೆದಿದ್ದ ಗ್ರಂಥಗಳನ್ನು ಓದಿ 'ರಾವಣವಧೆ' ರಚಿಸಿದರು. 'ಲಂಕಾದಹನ'ದ ಹಾಗೆಯೇ ಇದೂ ಕೂಡ ಅದ್ದೂರಿಯ ಯಶವನ್ನು ತಂದು ಕೊಟ್ಟಿತು. ತಮಿಳು, ತೆಲುಗಿನಲ್ಲಿಯ ಎರಡು ಕೃತಿಗಳನ್ನು ಕನ್ನಡ ರಂಗಭೂಮಿಗೆ ಪರಿಚಯಸಿದ ನಂತರ ಕನ್ನಡದ್ದೇ ಆದ 'ಭಕ್ತ ಪ್ರಹ್ಲಾದ' ಕೃತಿಯನ್ನು ತಮ್ಮ ಚಿಂತನಶೀಲತೆಯ ಮೆರಗಿನಲ್ಲಿ ಪುನರ್ರಚಿಸಿದರು. ವಿದ್ವಾನ್ ಬಿ. ವೆಂಕಟಚಾರ್ ಅವರ ಕೃತಿಯ ಉತ್ತಮಾಂಶಗಳನ್ನು, ಹಾಸ್ಯಗಳನ್ನು ಇಟ್ಟುಕೊಂಡು 'ಪ್ರಹ್ಲಾದ'ನ ಪಾತ್ರವನ್ನು ಇನ್ನಷ್ಟು ಬೆಳೆಸಿ ರಂಗಭಾಷೆಯಲ್ಲಿ ನಿರೂಪಿಸಿದರು. ವಿಶ್ವಗುಣಾದರ್ಶ ಕಂಪನಿಯಲ್ಲಿದ್ದ ಬಸವರಾಜ ಮನಸೂರ ಅವರಿಗಾಗಿಯೇ ಇಲ್ಲಿಯ ಪ್ರಹ್ಲಾದ ಪಾತ್ರ ವಿಕಸನ ಪಡೆದಿತ್ತು. ವಾಮನರಾಯರು ಕಂಪನಿಯ ನಟರ ವ್ಯಕ್ತಿತ್ವ, ಕಲಾಕೌಶಲ್ಯ ಚೆನ್ನಾಗಿ ಅರ್ಥ ಮಾಡಿಕೊಂಡು ಅವರಿಗೆ ಹೊಂದುವಂತೆ ನಾಟಕಗಳನ್ನು ಪುನರ್ರಚಿಸುತ್ತಿದ್ದರು. ಸ್ವಂತ ಕಂಪನಿಯ ಮೊದಲ ಹಂತದ ತಿರುಗಾಟದಲ್ಲಿ ಈ ಮೂರು ನಾಟಕಗಳಿಗೆ ಎಲ್ಲಿಲ್ಲದ ಪ್ರೋತ್ಸಾಹ ದೊರೆಯಿತು. ಸುಮಧುರ ಸಂಗೀತ, ಸೊಗಸಾದ ಸಾಹಿತ್ಯ, ಹಿತಮಿತ ವಾಚಿಕ ಅಂಶಗಳಿಂದ ರಾಯರ ಕೈಯಲ್ಲಿಯೇ ರೂಪಗೊಂಡಿದ್ದ ಈ ಮೂರು ನಾಟಕಗಳ ಪ್ರದರ್ಶನದಿಂದ ಕಂಪನಿಯ ಯಾತ್ರೆಯು ಕೀರ್ತಿ ಮತ್ತು ಹಣ ಸಂಪಾದಿಸಿ ಮುನ್ನುಗ್ಗುವಂತಾಯಿತು.

**ಉ: ಮರಾಠೀ ನಾಟಕಗಳ ಅನುವಾದ:**

ವಾಮನರಾಯರ ನಾಟಕಗಳ ರಚನೆಯ ಎರಡನೆಯ ಹಂತವೆಂದರೆ ಮರಾಠೀ ನಾಟಕಗಳ ಅನುವಾದ ನಾಡಿನ ನೆರೆಹೊರೆಯ ಭಾಷೆಗಳಲ್ಲಿಯ ಶ್ರೇಷ್ಠ ನಾಟಕಗಳನ್ನು ಕನ್ನಡಕ್ಕೆ ತಂದು ಪ್ರಯೋಗಿಸಬೇಕೆಂಬ ಹಂಬಲದ ಫಲವಾಗಿ ಹಲವಾರು ಮರಾಠೀ ನಾಟಕಗಳು ಕನ್ನಡ ರೂಪು ತಾಳಿ 'ವಿಶ್ವಗುಣಾದರ್ಶ'ದಿಂದ ಪ್ರಯೋಗಗೊಂಡವು. ವಾಮನರಾಯರಿಗೆ ಮರಾಠೀ ಚೆನ್ನಾಗಿ ಬರುತ್ತಿತ್ತು. ಸಾಂಗಲಿ ಸಂಸ್ಥಾನದ ಶಹಾಪೂರ ತಾಲೂಕಿನ ಕಡೋಲಿ ಎಂಬಲ್ಲಿ ಅವರು ಕನ್ನಡ ಶಾಲೆಯ ಶಿಕ್ಷಕರಾಗಿದ್ದರು. ಕನ್ನಡ ವಿದ್ಯಾರ್ಥಿಗಳಿಗೂ ಮರಾಠಿಯನ್ನು ಕಡ್ಡಾಯವಾಗಿ ಕಲಿಸಬೇಕಾಗುತ್ತಿತ್ತು. ಹೀಗಾಗಿ ವಾಮನರಾಯರಿಗೆ ಮರಾಠಿ ಅಭ್ಯಾಸ ಅನಿವಾರ್ಯವಾಗಿತ್ತು. ಅಲ್ಲದೆ ಅವರು ಹುಟ್ಟಿ ಬೆಳೆದಿದ್ದು ರಬಕವಿಯಲ್ಲಿ. ಅದು ಕೂಡ ಜಮಖಂಡಿ ಸಂಸ್ಥಾನದ ಪ್ರಭಾವದಲ್ಲಿದ್ದ ಊರು. ಅಲ್ಲಿಯ ಸಂಸ್ಥಾನಿಕರ ಭಾಷೆಯಾದರೂ ಮರಾಠಿಯಾಗಿತ್ತು. ಹೀಗಾಗಿ ಮೊದಲಿನಿಂದಲೂ ಮರಾಠಿ ಮಾತುಕತೆ, ಓದು ಬರಹದ ಪರಿಸರ ಅವರಿಗೆ ಲಭ್ಯವಾಗಿತ್ತು. ಆಗಿನ ಕಾಲದಲ್ಲಿ ಜಮಖಂಡಿ, ಬಾಗಲಕೋಟಿ, ಧಾರವಾಡ, ಹುಬ್ಬಳ್ಳಿ ಭಾಗದಲ್ಲಿ ಮರಾಠಿ ನಾಟಕ ಕಂಪನಿಗಳು ಮೇಲಿಂದ ಮೇಲೆ ಕ್ಯಾಂಪ್ ಮಾಡುತ್ತಿದ್ದವು. 'ಗಂಧರ್ವ ನಾಟಕ ಮಂಡಳಿ'ಯ ನಾಟಕಗಳಂತೂ ಜನರ ಹರಟೆಯ ವಿಷಯವಾಗಿದ್ದವು. ವಾಮನರಾಯರಿಗೂ ಅಂಥ ನಾಟಕಗಳನ್ನು ಕನ್ನಡದಲ್ಲಿ ಪ್ರಯೋಗಿಸಬೇಕೆಂಬ ಆಶೆ ಇತ್ತು. ಸ್ವಂತ ಕಂಪನಿ ಕಟ್ಟಿದ ಮೇಲೆ ಅಂಥ ನಾಟಕಗಳನ್ನಾಡುವ ಆಶೆ ಈಡೇರಿತು. ೧೯೧೭ ರಲ್ಲಿ, ಧಾರವಾಡ ಕ್ಯಾಂಪಿನಲ್ಲಿದ್ದಾಗ ಮರಾಠಿಯ 'ವಿದ್ಯಾಹರಣ' ನಾಟಕವನ್ನು 'ವಿದ್ಯಾಸಾಧನೆ' ಹೆಸರಿನಿಂದ ಕನ್ನಡಕ್ಕೆ ಅನುವಾದಿಸಿದರು ಇದುವೇ ಅವರ ಮೊದಲ ಸ್ವಂತ ನಾಟಕವೆಂದು ಎನ್ನೆ ಅವರು ಹೇಳಿದ್ದಾರೆ[೨೧].

ಮಹಾಭಾರತದ 'ಕಚೋಪಾಖ್ಯಾನ'ದಲ್ಲಿ ಬರುವ ಕಚ-ದೇವಯಾನಿ ಕಥೆಯುಳ್ಳ ನಾಟಕವಿದು. ಮರಾಠಿಯಲ್ಲಿ ಇದನ್ನು ಬರೆದವರು ಕೃಷ್ಣಾಜಿ ಪ್ರಭಾಕರ ಖಾಡಿಲ್ಕರ್. ೧೯೧೩ ರಲ್ಲಿ ಬರೆದ ನಾಟಕವಿದು. ಖಾಡಿಲ್ಕರರು, ಲೋಕಮಾನ್ಯ ತಿಲಕರ ಶಿಷ್ಯರು. ತಿಲಕರ ಆಶಯದಂತೆ ರಾಷ್ಟ್ರೀಯ ಭಾವನೆಗಳ ಜಾಗೃತಿಗಾಗಿ ನಾಟಕಕಲೆಯನ್ನು ಬಳಸಿದವರು. ಕೆಲವು ಕಾಲ ತಿಲಕರ 'ಕೇಸರಿ' ಪತ್ರಿಕೆಯನ್ನು ಸಂಪಾದಿಸಿದರು. ಮರಾಠಿ ರಂಗಭೂಮಿಯಲ್ಲಿಯ ಇವರ ಸಾಧನೆ ಅಗ್ರಮಾನ್ಯವಾದುದು. ಪ್ರಸ್ತುತ ನಾಟಕ ಮದ್ಯಪಾನ ನಿಷೇಧದ ಹಿನ್ನಲೆಯಲ್ಲಿ ರಚನೆಯಾಯಿತು. ಇಂಗ್ಲೀಷರ ಆಡಳಿತದ ಅವಧಿಯಲ್ಲಿ ಭಾರತೀಯರ ಮದ್ಯಪಾನದ ವ್ಯಸನ ವಿಪರೀತ ಬೆಳೆಯಿತು. ಇದರ ಅಪಾಯವನ್ನು ಮನಗಂಡು ತಿಲಕರು ೧೯೦೭ ರಲ್ಲಿ 'ಮದ್ಯಪಾನ ನಿಷೇಧ ಸಭಾ' ಎಂಬ ಸಂಸ್ಥೆಯನ್ನು ಪುಣೆಯಲ್ಲಿ ಸ್ಥಾಪಿಸಿದರು. ಅದರ ಶಾಖೆಗಳನ್ನು ಗ್ರಾಮೀಣ ಭಾಗಕ್ಕೂ ವಿಸ್ತರಿಸಿದರು. ತಿಲಕರ ಮದ್ಯಪಾನ ನಿಷೇಧ ಚಳವಳಿಗೆ ಆಗ ದೊಡ್ಡ ಬೆಂಬಲ ದೊರಯಿತು. ಆ ಚಳುವಳಿಯಲ್ಲಿ ಖಾಡಿಲ್ಕರ್ ಅವರು ಐದು ವರ್ಷ ಸಕ್ರಿಯವಾಗಿ

ಪಾತ್ರವಹಿಸಿದ್ದರು. ಮದ್ಯಪಾನವು ಭಾರತೀಯ ಸಮಾಜದ ಮೇಲೆ ಬೀರುವ ದುಷ್ಪರಿಣಾಮಗಳ ಬಗ್ಗೆ ಭಾಷಣ ಮಾಡಿದ್ದರು. ಭಾಷಣದ ಸಂದರ್ಭದಲ್ಲಿ ಶುಕ್ರಾಚಾರ್ಯರ ಕಥೆಯನ್ನು ಉದಾಹರಿಸುತ್ತಿದ್ದರು. ಈ ಕಥೆಯೇ ವಿಕಾಸವಾಗಿ ಖಾಡಿಲ್ಕರ್ ಅವರಿಂದ ನಾಟಕರೂಪ ತಾಳಿತು. 'ವಿದ್ಯಾಹರಣ' ಎಂಬ ಹೆಸರೂ ಔಚಿತ್ಯಪೂರ್ಣವಾಗಿದೆ. ಮರಾಠಿಯಲ್ಲಿ 'ವಿದ್ಯಾಹರಣ' ಎಂದರೆ 'ವಿದ್ಯೆಯನ್ನು ಸಂಪಾದಿಸು' ಎಂದು ಅರ್ಥ. ಇಂಗ್ಲೀಷರ ಮೂಲಕ ದೊರೆಯುವ ವಿದ್ಯೆಯನ್ನು ಸಂಪಾದಿಸಬೇಕು ಆದರೆ ಅವರ ಮುಕ್ತ ಸಮಾಜದ ರೀತಿ ನೀತಿಗಳನ್ನು ಅನುಸರಿಸಬಾರದು, ವಿದೇಶಿ ತರುಣಿಯರ ಮೋಹಜಾಲಕ್ಕೆ ಬೀಳಬಾರದು ಎಂಬ ತಿಲಕರ ಸಂದೇಶವನ್ನು ಈ ನಾಟಕವು ಕಥನ ರೂಪದಲ್ಲಿ ನಿರೂಪಿಸಿತು. ಕಚನು ಮನಸ್ಸಿನ ಮೇಲೆ ನಿಯಂತ್ರಣವುಳ್ಳ ತರುಣ. ದೇವಯಾನಿಯಂತಹ ಪಶ್ಚಿಮದ ಸುಂದರಿಯರ ಮೋಹಜಾಲಕ್ಕೆ ಸಿಗದೆ ಪಶ್ಚಿಮದ ಜ್ಞಾನವನ್ನು ಸಂಪಾದಿಸಿದ ಸಾಧಕ. ಅವನು ನಮ್ಮ ತರುಣರಿಗೆ ಆದರ್ಶವಾಗಬೇಕೆಂಬ ತಾತ್ಪರ್ಯವನ್ನು 'ವಿದ್ಯಾಹರಣ' ನಾಟಕ ಪ್ರತಿಪಾದಿಸುತ್ತಿತ್ತು.

ನಾಟಕ ಬರೆದ ಖಾಡಿಲ್ಕರ್‌ರು ರಂಗಭೂಮಿಯ ಅನುಭವವುಳ್ಳವರಾಗಿದ್ದರು. ಕಿರ್ಲೋಸ್ಕರ್ ಕಂಪನಿಗಾಗಿ 'ಕೀಚಕ ವಧ', 'ಮಾನಾಪಮಾನ' ನಾಟಕಗಳನ್ನು ಬರೆದು ತಾವೇ ನಿರ್ದೇಶಿಸಿದ್ದರು. 'ವಿದ್ಯಾಹರಣ' ಕೂಡ ಅದೇ ಕಂಪನಿಗಾಗಿ ನಿರ್ದೇಶಿಸಿದರು. ಇದರಲ್ಲಿ ಗೋವಿಂದರಾವ ಟೇಂಬೆ ಅವರು ಕಚನ ಪಾತ್ರವನ್ನು, ಬಾಲಗಂಧರ್ವರು ದೇವಯಾನಿ ಪಾತ್ರವನ್ನು, ಕೃಷ್ಣರಾವ ಗೋರೆಯವರು ಶುಕ್ರಾಚಾರ್ಯನ ಪಾತ್ರವನ್ನು, ಬೋಡಸ ಅವರು ಹಾಸ್ಯ ಪಾತ್ರವನ್ನು ವಹಿಸುತ್ತಿದ್ದರು. ಮರಾಠಿ ರಂಗಸಂಗೀತದಲ್ಲಿ ವಿಶಿಷ್ಟ ಸಾಧನೆಗೈದಿದ್ದ ಗೋವಿಂದರಾವ ಟೇಂಬೆಯವರೇ ಈ ನಾಟಕದ ಸಂಗೀತವನ್ನು ನಿರ್ದೇಶಿಸಿದ್ದರು. ಹಾಡುಗಳಿಗೆ ಕೆಲವು ಧಾಟಿಗಳನ್ನು ಬಾಲಗಂಧರ್ವರು ಮತ್ತು ಭಾಸ್ಕರಬುವಾ ಬಖಲೆ ಒದಗಿಸಿದರು. 'ವಿದ್ಯಾಹರಣ' ಶೃಂಗಾರ ಸಮಾಜದ ಕಥೆಯನ್ನು ಒಳಗೊಂಡಿದ್ದರೂ ಅದರ ದೃಷ್ಟಿ ಮಾತ್ರ ರಾಷ್ಟ್ರೀಯ ಧೋರಣೆಯದ್ದಾಗಿತ್ತು. ೩೧ ಮೇ ೧೯೦೩ ರಂದು ಈ ನಾಟಕ ಪುಣೆಯಲ್ಲಿ ಮೊದಲ ಪ್ರಯೋಗ ಕಂಡಿತು[೨೨]. ಬಾಲಗಂಧರ್ವರ ಅಭಿನಯ ಮತ್ತು ಹಾಡಿನ ಕೌಶಲ್ಯವು ನಾಟಕಕ್ಕೆ ವಿಶೇಷ ಮೆರಗು ತಂದಿತು. ಟೇಂಬೆಯವರ ಹಾಡುಗಾರಿಕೆ, ಕೃಷ್ಣರಾವ ಗೋರೆ ಅವರ ಮಾತುಗಾರಿಕೆ 'ವಿದ್ಯಾಹರಣ'ದ ಜನಪ್ರಿಯತೆಗೆ ಕಾರಣವಾದವು. ಕಿರ್ಲೋಸ್ಕರ್ ಕಂಪನಿ ನಂತರ 'ಗಂಧರ್ವ ನಾಟಕ ಮಂಡಳಿ'ಯಲ್ಲಿಯೂ ಈ ನಾಟಕ ಜಯಭೇರಿ ಹೊಡೆಯಿತು. ಕಿರ್ಲೋಸ್ಕರ ಕಂಪನಿ ಕರ್ನಾಟಕದಲ್ಲಿ ಸಂಚರಿಸುತ್ತಿದ್ದಾಗ ಈ ನಾಟಕ ಕನ್ನಡಿಗರ ಮನಸ್ಸನ್ನು ಸೂರೆಗೊಂಡಿತು. ವಾಮನರಾಯರು ಈ ನಾಟಕ ನೋಡಿ ಕನ್ನಡದಲ್ಲಿ ಪ್ರಯೋಗಿಸಲು ಮುಂದಾದರು. ಕನ್ನಡದಲ್ಲಿ ನಾಟಕದ ಹೆಸರು 'ವಿದ್ಯಾಸಾಧನೆ' ಎಂದಿಟ್ಟರು. ಭಾರತೀಯ ತರುಣ ಸಮುದಾಯವು ಕಚನ ಹಾಗೆ ವಿದ್ಯೆಯನ್ನು ಸಾಧಿಸಬೇಕು. ಇಂಗ್ಲೀಷ ವಿದ್ಯೆಯು ಸಂಜೀವಿನಿ ಇದ್ದ ಹಾಗೆ. ಅದನ್ನು ಸಂಪಾದಿಸುವುದರಲ್ಲಿ ಭಾರತದ ಉಜ್ವಲ ಭವಿಷ್ಯವಿದೆ.

ಆದರೆ ಪಶ್ಚಿಮ ದೇಶದ ಮುಕ್ತ ಸಮಾಜದ ವ್ಯಸನಗಳಿಗೆ ಮಾತ್ರ ನಮ್ಮ ತರುಣರು ಬಲಿಯಾಗಬಾರದೆಂಬ ಎಚ್ಚರವು ನಾಟಕದ ಸಂದೇಶವಾಗಿತ್ತು.

ವಾಮನರಾಯರು ಕಚನ ಪಾತ್ರವನ್ನು, ಸಿದ್ರಾಮಪ್ಪ ದೇವಯಾನಿಯ ಪಾತ್ರವನ್ನು, ಕೇಶವಭಟ್ ಮಿಶ್ರಿಕೋಟಿಯವರು ಶುಕ್ರಾಚಾರ್ಯರ ಪಾತ್ರವನ್ನು, ರಾಣೆಬೆನ್ನೂರಿನ ಮಲ್ಲಪ್ಪ ಶಿಷ್ಯನ ಪಾತ್ರವನ್ನು, ಹುಬ್ಬಳ್ಳಿಯ ಸಂಗಪ್ಪ ವೃಷಪರ್ವದ ಪಾತ್ರವನ್ನು ನಿರ್ವಹಿಸುತ್ತಿದ್ದರು. ಸಂಗೀತ ಮತ್ತು ಅಭಿನಯದ ನಿರ್ದೇಶನ ವಾಮನರಾಯರದೇ ಆಗಿತ್ತು. ಮರಾಠಿ ರಂಗಕೃತಿಯ ಮೋಹಕ ಗುಣಗಳು ಕನ್ನಡ ರಂಗಕೃತಿಯಲ್ಲಿಯೂ ಅವತರಿಸಿದ್ದವು. ಪ್ರೇಕ್ಷಕರಿಂದಲೂ ಒಳ್ಳೆಯ ಪ್ರತಿಕ್ರಿಯೆ ಸಿಕ್ಕಿತು. "ಕೇಶವಭಟ್ಟರು ತುಂಬಿದ ವ್ಯಕ್ತಿ ಕೊನೆಯ ತನಕ ಶುಕ್ರಾಚಾರ್ಯನ ಪಾತ್ರದ ಗಾಂಭೀರ್ಯವನ್ನು ಕಾಯ್ದುಕೊಂಡು ಹೋಗುತ್ತಿದ್ದರು. ಹುಬ್ಬಳ್ಳಿ ಸಂಗಪ್ಪನವರಂತಹ ಸ್ಪಷ್ಟವಾಣಿಯ, ಸಾಭಿನಯ ನಟರು ಅಪರೂಪ. ರಾಣೆಬೆನ್ನೂರಿನ ಮಲ್ಲಪ್ಪನವರು ತಮ್ಮ ನೇತ್ರ ಪಲ್ಲವಿಯಿಂದಲೇ ಮಾತನಾಡುತ್ತಿದ್ದರು. ಅವರ ನಯನಾಭಿನಯವು ಅನನ್ಯ ಸದೃಶವಾದುದು. ಇಂತಹ ಘಟಾನುಘಟಿ ನಟವರ್ಗವು ಏಕಕಾಲಕ್ಕೆ ಮೇಳೈಸುವ ಪ್ರವೇಶಗಳು ದೃಷ್ಟಿ ತಗಲುವಷ್ಟು ಮೋಹಕವಾಗಿ ಕಳೆಕಟ್ಟುವಂತಿದ್ದವು. ಹೀಗಿದ್ದರೂ ವಾಮನರಾಯರು ಈ ನಾಟಕವನ್ನು ನಿಲ್ಲಿಸಬೇಕಾಗಿ ಬಂತು. ಕಾರಣ ಇಷ್ಟೇ ಈ ನಾಟಕದ ಪ್ರಯೋಗವಾದಾಗೊಮ್ಮೆ ವಾಮನರಾಯರು ಅಸ್ವಾಸ್ಥ್ಯದಿಂದ ಹಾಸಿಗೆ ಹಿಡಿಯುತ್ತಿದ್ದರು ದೈವಶ್ರದ್ಧೆಯವರಾದ ವಾಮನರಾಯರು ಜ್ಯೋತಿಷಿಗಳನ್ನು ಕೇಳಲಾಗಿ 'ಈ ನಾಟಕ ನಿಮಗೆ ಏರಿಕೆಯದಲ್ಲ' ಎಂದು ಹೇಳಿದರಂತೆ ಆ ಮಾತು ನಂಬಿ ವಾಮನರಾಯರು 'ವಿದ್ಯಾಸಾಧನೆ' ಗೆ ವಿರಾಮ ಹಾಕಿಬಿಟ್ಟರು[೨೩].

ಮದ್ಯಪಾನ ನಿಷೇಧ, ಪಾಶ್ಚಾತ್ಯ ಭೋಗ ಸಂಸ್ಕೃತಿಯ ಅನುಕರಣೆಯನ್ನು ನಿರಾಕರಿಸುವ ಮತ್ತು ಪಶ್ಚಿಮದ ಜ್ಞಾನವನ್ನು ಸಂಪಾದಿಸುವಂತಹ ಮೌಲಿಕ ವಿಚಾರಗಳನ್ನು ಪುರಾಣ ಕಥೆಯ ಮೂಲಕ ಮನೋಜ್ಞವಾಗಿ ಸಾದರಪಡಿಸುವಂತಹ ನಾಟಕವೊಂದು ವಾಮನರಾಯರ ಪ್ರಯತ್ನದಿಂದ ಕನ್ನಡ ರಂಗಭೂಮಿಯಲ್ಲಿ ಮಿಂಚಿ ಮಾಯವಾಯಿತು ಆದರೆ ಮರಾಠಿ ನಾಟಕಗಳ ಅನುವಾದ ಕಾರ್ಯ ಮುಂದುವರೆಯಿತು. ೧೯೧೮ ರ ಸುಮಾರು ಭಕ್ತಿಪ್ರಧಾನವಾದ 'ಸಂತ ಸಖೂಬಾಯಿ' ನಾಟಕವನ್ನು 'ಸಾಧ್ವಿ ಸಖೂಬಾಯಿ' ಎಂದು ಅನುವಾದಿಸಿದರು. ಸಖೂಬಾಯಿ ಪಂಢರಪುರದ ವಿಠ್ಠಲನನ್ನು ನಿಷ್ಠೆಯಿಂದ ಭಜಿಸಿ ಅವನ ಕೃಪೆಗೆ ಪಾತ್ರಳಾದಳು. ಸಖೂಬಾಯಿಯ ಭಕ್ತಿಯ ಬದುಕನ್ನು ಹಂತ ಹಂತವಾಗಿ ಕಟ್ಟಿಕೊಡುವ ಸನ್ನಿವೇಶಗಳಿಂದ, ಸಣ್ಣ ಸಣ್ಣ ಸಂಭಾಷಣೆಗಳಿಂದ, ಭಕ್ತಿಭಾವ ಹೊಮ್ಮಿಸುವ ಮಧುರ ಹಾಡುಗಳಿಂದ ರಚನೆಯಾದ ಈ ನಾಟಕ 'ವಿಶ್ವಗುಣಾದರ್ಶ'ದ ಯಶಸ್ವಿ ಕೃತಿಯೆನಿಸಿತು. ಸಖೂಬಾಯಿಯ ಕಷ್ಟದ ಪ್ರಸಂಗಗಳಲ್ಲಿ ವೇಷಧಾರಿ ವಿಠ್ಠಲನು ನೆರವಿಗೆ ಬರುವ ಪ್ರಸಂಗಗಳು ಪ್ರೇಕ್ಷಕರ ಹೃದಯದಲ್ಲಿ ಭಕ್ತಿಭಾವ ಹೊಮ್ಮಿಸುವಂತಿದ್ದವು. ಇದರಲ್ಲಿ ವಾಮನರಾಯರು ಮಾಧವನಾಗಿ

(ಸಖೂಬಾಯಿಯ ಪತಿ), ಗುಳ್ಳೇದಗುಡ್ಡ ಗಂಗೂಬಾಯಿ ಸಖೂಬಾಯಿ ಪಾತ್ರದಲ್ಲಿ ಅಭಿನಯಿಸುವುದು ಪ್ರೇಕ್ಷಕರಿಗೆ ಸಂತೋಷದ ಸಂಗತಿಯಾಗಿತ್ತು, ಏಕಾದಶಿಯ ದಿನದಂದು ಪಂಢರಪುರಕ್ಕೆ ಹೋಗಿ ವಿಠ್ಠಲನ ದರುಶನ ಪಡೆಯಬೇಕೆಂಬ ಅದಮ್ಯ ಹಂಬಲವಿಟ್ಟುಕೊಂಡ್ಡಿದ್ದ ಸಖೂಬಾಯಿಯನ್ನು ಪಂಢರಪುರಕ್ಕೆ ಹೋಗದಂತೆ ಅನೇಕ ವಿಘ್ನಗಳನ್ನು ಒಡ್ಡುತ್ತಾಳೆ ಅತ್ತೆ ಚಂಡಿಕಾಬಾಯಿ ಅವಳನ್ನು ಕೋಣೆಯಲ್ಲಿ ಹಾಕಿ ಬಂಧಿಸಿಡುತ್ತಾಳೆ. ಬಿಡುವು ಸಿಗದಂತೆ ಗುಡ್ಡದಂತೆ ಕೆಲಸಗಳನ್ನು ಮಾಡಿಸುತ್ತಾಳೆ. ಇಂಥ ಅನೇಕ ತೊಂದರೆಗಳನ್ನು ದಾಟಿ ಸಖೂಬಾಯಿ ಪಂಢರಪುರದ ಶ್ರೀ ವಿಠ್ಠಲನ ದರುಶನ ಪಡೆಯುತ್ತಾಳೆ. ಈ ಚಮತ್ಕಾರ ನೋಡಿ ಅತ್ತೆಯು ಸಖೂಬಾಯಿಯ ಭಕ್ತಿ ಪರಾಕಾಷ್ಠೆಗೆ ಬೆರಗಾಗುತ್ತಾಳೆ. ಅವಳ ಶ್ರದ್ಧೆಯ ಬದುಕಿಗೆ ಶರಣಾಗುತ್ತಾಳೆ. ಹೇಮರಡ್ಡಿ ಮಲ್ಲಮ್ಮನ ಭಕ್ತಿಯ ಬದುಕನ್ನು ಹೋಲುವ ಸಖೂಬಾಯಿಯ ಕಥೆಯು ವಾಮನರಾಯರ ಅನುವಾದದಿಂದ ಜನಪ್ರಿಯ ರಂಗಕೃತಿಯಾಗಿ ಮೆರೆಯಿತು. ಸ್ವತಃ ವಾಮನರಾಯರು ದೈವಭಕ್ತರಾಗಿದ್ದರಿಂದ ನಾಟಕದ ಭಾಷೆ ಭಕ್ತಿಯ ಭಾಷೆಯಲ್ಲಿ ಮೂಡಿ ನಿಲ್ಲಲು ಸಾಧ್ಯವಾಯಿತು.

ವಿಶ್ವಗುಣಾದರ್ಶ ಕಂಪನಿಯ ಇನ್ನೊಂದು ಭಕ್ತಿಪ್ರಧಾನ ನಾಟಕವೆಂದರೆ 'ಭಕ್ತ ಪುಂಡಲೀಕ' ಇದನ್ನು ೧೯೨೦ ರಲ್ಲಿ ಅನುವಾದಿಸಿದರು. ಪುಂಡಲೀಕನಾದರೂ ಪಂಢರಪುರದ ವಿಠ್ಠಲನ ಪರಮಭಕ್ತ ವಿಠ್ಠಲನ ನಾಮ ಸಂಕೀರ್ತನೆಯೇ ಇವನ ದೊಡ್ಡ ಆಸ್ತಿ. ಅದನ್ನವನು ಬಳಸಿದಷ್ಟೂ ಬೆಳೆಯುವಂತ ಅಮೂಲ್ಯ ಆಸ್ತಿ. ವಿಠ್ಠಲನ ನಿರಂತರ ನಾಮಸ್ಮರಣೆಯಿಂದ ಅವನನ್ನು ಕಟ್ಟಿ ಹಾಕಿದವನು ಪುಂಡಲೀಕ. ವಾಮನರಾಯರು ಭಕ್ತಿ ಭಾವದಿಂದಲೇ ಅನುವಾದಿಸಿದರು. ಅವರ ಸಂಭಾಷಣೆ, ಸಂಗೀತದ ಸೊಗಸುಗಾರಿಕೆಯಿಂದ ನಾಟಕ ಸಾಕಷ್ಟು ಪ್ರಸಿದ್ಧಿ ಪಡೆಯಿತು. ಮೈಸೂರು ಭಾಗದಲ್ಲಿ ವಿಶೇಷವಾಗಿ ಮೈಸೂರು ಮಹಾರಾಜರು ಈ ನಾಟಕ ನೋಡಿ ತುಂಬ ಮೆಚ್ಚಿಕೊಂಡಿದ್ದರು. ಮರಾಠಿಯಿಂದ ಅನುವಾದಿಸಿದ ನಾಟಕಗಳಿಗೆ ಪ್ರೇಕ್ಷಕರ ಪ್ರತಿಕ್ರಿಯೆ ಪ್ರೋತ್ಸಾಹದಾಯಕವಾಗಿದ್ದರಿಂದ ಅಲ್ಲಿ ಸುಪ್ರಸಿದ್ಧವಾಗಿದ್ದ ಒಂದೊಂದೇ ನಾಟಕಗಳನ್ನು ಅನುವಾದಕ್ಕೆತ್ತಿಕೊಂಡರು.

ಧಾರವಾಡವು ಮುಕ್ಕಾಮ ನಾಟಕಗಳ ಅನುವಾದಕ್ಕೆ ಪ್ರಶಸ್ತವಾಗಿತ್ತು. ನಾಟಕದಲ್ಲಿ ಆಸಕ್ತಿಯುಳ್ಳ ಕೆಲವು ಆಪ್ತಗೆಳೆಯರು ಅಲ್ಲಿದ್ದರು. ಮರಾಠಿ ನಾಟಕಗಳ ಅನುವಾದಕ್ಕೆ ಒತ್ತಾಯಿಸುತ್ತಿದ್ದರು. ನಾಟಕದ ರಚನೆಯ ಸಂದರ್ಭದಲ್ಲಿಯೇ ಓದಿ ಸಲಹೆ ಸೂಚನೆಗಳನ್ನು ಕೊಡುತ್ತಿದ್ದರು. ಧಾರವಾಡದ ಈ ವಾತಾವರಣದಲ್ಲಿ ರಾಯರು ಹಲವಾರು ನಾಟಕಗಳನ್ನು ಅನುವಾದಿಸಿದರು. ೧೯೨೫ ರಿಂದ ೧೯೨೬ ರವರೆಗೆ ವರುಷಕ್ಕೊಂದರಂತೆ ಏಳೆಂಟು ನಾಟಕಗಳನ್ನು ಮರಾಠಿಯಿಂದ ಕನ್ನಡಕ್ಕೆ ಅನುವಾದಿಸಿದರು. ಅವುಗಳಲ್ಲಿ 'ಪಾರ್ವತೀ ಸತ್ವ ಪರೀಕ್ಷೆ', 'ಸಂದೇಹ ಸಾಮ್ರಾಜ್ಯ', 'ಶ್ರೀ ಕೃಷ್ಣಾರ್ಜುನ ಯುದ್ಧ', '೨ನೇ ಬಾಜೀರಾವ ಪೇಶವೆ', 'ವೀರ ಅಭಿಮನ್ಯು' ಪ್ರಮುಖವಾಗಿವೆ. ನಾಟಕ ರಚನೆಯಿಂದ ಹಿಡಿದು ಅವುಗಳ

ರಂಗ ಪ್ರಯೋಗದವರೆಗಿನ ಚಟುವಟಿಕೆಗಳಲ್ಲಿ ರಾಯರ ಶ್ರದ್ಧೆ, ಶ್ರಮ ಎದ್ದು ಕಾಣುತ್ತಿತ್ತು. ಅವರ ಕಂಪನಿಯಲ್ಲಿ ಅವರೇ ನಾಯಕ–ನಟರಾಗಿದ್ದರಿಂದ. ತಮ್ಮ ವ್ಯಕ್ತಿತ್ವಕ್ಕೆ, ಅಭಿನಯ ಕೌಶಲ್ಯಕ್ಕೆ, ಹಾಡುಗಾರಿಕೆಗೆ ಹೊಂದುವಂತೆ ಪಾತ್ರಗಳನ್ನು ರೂಪಿಸುತ್ತಿದ್ದರು. ಇತರ ನಟರ ವಿಷಯದಲ್ಲಿಯೂ ಅದೇ ಎಚ್ಚರ. ಕಂಪನಿ ನಟ ನಟಿಯರ ವ್ಯಕ್ತಿತ್ವವನ್ನು ಕಣ್ಮುಂದೆ ಇಟ್ಟುಕೊಂಡು ಮಾತುಗಳನ್ನು, ಹಾಡುಗಳನ್ನು ರಚಿಸುತ್ತಿದ್ದರು[೨೪]. ಇದರಿಂದ ನಾಟಕಗಳ ಪ್ರಯೋಗಕ್ಕೆ ಪ್ರೇಕ್ಷಕರಿಂದ ಒಳ್ಳೆಯ ಪ್ರೋತ್ಸಾಹ ಸಿಗುತ್ತಿತ್ತು.

**ಊ: ನಾಟಕ ಕಂಪನಿ ಮಾಲೀಕರು:**

ನಾಡು ನುಡಿ ಅಭಿಮಾನದಿಂದ ಪ್ರೇರಿತವಾದ ಅಂದಿನ ಕಂಪನಿಗಳು ಅರೆವೃತ್ತಿ ಸ್ವರೂಪದ್ದಾಗಿದ್ದವು ಎಂಬುದನ್ನು ಹಿಂದಿನ ಅಧ್ಯಾಯದಲ್ಲಿ ಗಮನಿಸಿದ್ದೇವೆ. ವೃತ್ತಿಸ್ವರೂಪವನ್ನು ಪಡೆದುಕೊಂಡ ಮೊದಲನೆಯ ನಾಟಕ ಮಂಡಳಿಯೆಂದರೆ 'ಕೊಣ್ಣೂರ ನಾಟಕ ಕಂಪನಿ' ಇದು ೧೯೦೦ರ ಸುಮಾರು ಪ್ರಾರಂಭವಾಯಿತು. ೧೯೦೫ ರ ಸುಮಾರು ವೆಂಕೋಬರಾಯರ 'ಶಿರಹಟ್ಟಿ ನಾಟಕ ಕಂಪನಿ' ಪ್ರಾರಂಭವಾಯಿತು. ೧೯೧೪ ರಲ್ಲಿ ವಾಮನರಾವ ಮಾಸ್ತರರ 'ವಿಶ್ವಗುಣಾದರ್ಶ ನಾಟಕ ಮಂಡಳಿ' ಪ್ರಾರಂಭವಾಯಿತು. ಉತ್ತರ ಕರ್ನಾಟಕದಲ್ಲಿ ವೃತ್ತಿರಂಗಭೂಮಿ ತನ್ನ ಅಡಿಪಾಯವನ್ನು ಭದ್ರಗೊಳಿಸಿಕೊಳ್ಳುತ್ತಿದ್ದ ಕಾಲದಲ್ಲಿಯೇ ವಾಮನರಾಯರು ನಾಟಕ ಕಂಪನಿಯೊಂದರ ಮಾಲೀಕರಾದರೆಂಬುದು ಗಮನಾರ್ಹವಾದ ಸಂಗತಿ. ಕೊಣ್ಣೂರು ಕಂಪನಿಯ ಮಾಲೀಕರಾಗಿದ್ದ ಶಿವಮೂರ್ತಿಸ್ವಾಮಿಗಳ ಆಡಳಿತವನ್ನು ಅವರು ನೋಡಿದ್ದರು, ಶಿರಹಟ್ಟಿ ಕಂಪನಿಯ ಮಾಲೀಕರಾಗಿದ್ದ ವೆಂಕೋಬರಾಯರ ಆಡಳಿತವನ್ನು ಪ್ರತ್ಯಕ್ಷವಾಗಿ ಗಮನಿಸಿದ್ದರು ಮತ್ತು ಅನುಭವಿಸಿದ್ದರು. ಇಂಥ ಹಿನ್ನಲೆಯಿಂದಲೇ ಅವರು ಸ್ವಂತ ಕಂಪನಿಯ ಮಾಲೀಕತ್ವದ ಹೊಣೆಯನ್ನು ನಿಭಾಯಿಸಿದರು. ಶಿವಮೂರ್ತಿಸ್ವಾಮಿ ಕಣಬರಗಿಮಠ ಮತ್ತು ಶಿರಹಟ್ಟಿ ವೆಂಕೋಬರಾಯರಿಗಿದ್ದ ಆರ್ಥಿಕ ಬಲ ವಾಮನರಾಯರಿಗೆ ಇರಲಿಲ್ಲ. ಅವರಂತೆ ಇವರು ವ್ಯವಹಾರಚತುರರೂ ಅಲ್ಲ. ಆದರೂ 'ಒಳ್ಳೆಯ ಮಾಲೀಕರು' ಎಂಬ ಗೌರವಕ್ಕೆ ಪಾತ್ರರಾಗಿದ್ದರು. ಬಹುಶಃ ರಂಗಭೂಮಿಯ ಬಗೆಗಿದ್ದ ಪ್ರೀತಿ, ಗೌರವ, ಶ್ರದ್ಧೆಯ ಗುಣಗಳಿಂದ, ನಾಟ್ಯರಚನೆ, ನಟನೆ, ಗಾಯಕನ ಪ್ರತಿಭೆಯಿಂದ ಮತ್ತು ಇವುಗಳಿಗೆ ಮೆರಗು ತರುವಂತಹ ಶುದ್ಧ ಚಾರಿತ್ರ್ಯದಿಂದ ಅಂದು ರಂಗಭೂಮಿಯಲ್ಲಿ ವಾಮನರಾಯರು 'ಮಾಲೀಕತನಕ್ಕೆ' ಮೌಲ್ಯ ತಂದುಕೊಟ್ಟರೆಂದು ಹೇಳಬಹುದು.

ಮರಾಠಿ ನಾಟಕ ಮತ್ತು ನಟರ ನಿಕಟ ಸಂಪರ್ಕದಲ್ಲಿ ವಾಮನರಾಯರು ನಾಟಕ ಕುರಿತು ಬಹಳಷ್ಟು ಕಲಿತಿದ್ದರು. ಮರಾಠಿ ರಂಗಭೂಮಿಗೆ ಲೋಕಮಾನ್ಯ ತಿಲಕರು ಗುರುಸ್ಥಾನದಲ್ಲಿ ನಿಂತು ಅವುಗಳ ರೀತಿ ನೀತಿಯನ್ನು ರೂಪಿಸಿದ್ದರು. ಸ್ವರಾಜ್ಯದ ಸಾಧನೆಗೆ ಜನಸಾಗರ ತುಂಬ ಅವಶ್ಯವೆಂದು ನಾಟಕ, ಕೀರ್ತನೆಯಂಥ ಕಲೆಗಳು ಮಾಧ್ಯಮಗಳಾಗಿ ಬಳಕೆಯಾಗಬೇಕೆಂದು ತಿಲಕರು ಹೇಳುತ್ತಿದ್ದರು. ಕೆಲವು ಕಂಪನಿಗಳಿಗೆ, ಕಲಾವಿದರಿಗೆ ಅವರ ಮಾತೇ ಮಂತ್ರವಾಗಿತ್ತು. ಮರಾಠಿ ರಂಗಭೂಮಿಯ ದಿಗ್ಗಜರೆನಿಸಿದ ಕಿರ್ಲೋಸ್ಕರ, ಗೋವಿಂದ ಬಲ್ಲಾಳ, ದೇವಳ ಖಾಡಿಲ್ಕರ್, ಕೊಲ್ಹಟಕರ, ಬಾಲಗಂಧರ್ವ ಮೊದಲಾದವರು ತಿಲಕರು ತೋರಿಸಿದ ಹಾದಿಯಲ್ಲಿಯೇ ರಂಗಭೂಮಿಯನ್ನು ಕಟ್ಟಿ ನಡೆಸುತ್ತಿದ್ದರು. ಇವರ ಪ್ರಯತ್ನದಿಂದ ರಂಗಭೂಮಿ ಸಾಮಾಜಿಕರ ಕಣ್ಣಲ್ಲಿ ಗೌರವದ ಸ್ಥಾನಮಾನ ಪಡೆಯತೊಡಗಿತ್ತು. ವಾಮನರಾಯರು ರಂಗಭೂಮಿ ಪ್ರವೇಶಿಸುವುದಕ್ಕಿಂತ ಮೊದಲು ಈ ಎಲ್ಲ ಚಟುವಟಿಕೆಗಳನ್ನು

ಗಮನಿಸಿದ್ದರು. ಅದೇ ಮಾದರಿಯಲ್ಲಿ ಕನ್ನಡ ರಂಗಭೂಮಿಯನ್ನು ಸಜ್ಜುಗೊಳಿಸುವ ಕನಸು ಕಾಣುತ್ತಿದ್ದರು. ರಂಗಭೂಮಿ ಪ್ರವೇಶಿಸಿದ ನಂತರ ಅದನ್ನೇ ತಮ್ಮ ಲಕ್ಷ್ಯವಾಗಿರಿಸಿಕೊಂಡು ನಟನೆ, ನಾಟಕ ಕಂಪನಿಯ ವ್ಯವಸ್ಥೆಯನ್ನು ನೋಡಿಕೊಂಡರು.

ಶಿರಹಟ್ಟಿ ಕಂಪನಿಯಿಂದ ಹೊರ ಬಂದ ಮೇಲೆ ರಾಯರು ಪಾಲುದಾರಿಕೆ ಆಧಾರದ ಮೇಲೆ ಕಂಪನಿ ಕಟ್ಟಿ, ಪಾಲುದಾರರ ಅಹಂಕಾರದ ವರ್ತನೆಗಳಿಂದ ತುಂಬ ನೊಂದುಕೊಂಡರು. ಆ ಕಂಪನಿ ನಿಲ್ಲಿಸಿದರು. ಸ್ವಂತ ಒಡೆತನದಲ್ಲಿಯೇ ಕಂಪನಿ ಕಟ್ಟಲು ಯೋಚಿಸಿದರು. ಆದರೆ ಅದಕ್ಕೆ ಬೇಕಾಗುವಷ್ಟು ಹಣ ಅವರಲ್ಲಿರಲಿಲ್ಲ, ಬರಿಗೈಯಲ್ಲಿದ್ದರು. ಆಗ ಅವರ ಷಡ್ಡಕ ಭೀಮಭಟ್ಟರು, ಹಿತೈಷಿ ದತ್ತಭಟ್ಟರು, ಗೋಪಾಲಸಿಂಗ್, ಶೆಟ್ಟರ ಶೀನಪ್ಪ ಮೊದಲಾದವರು ಒಂದು ಸಾವಿರ ರೂಪಾಯಿ ಕೂಡಿಸಿ ಕೊಟ್ಟರು ಆಗ ವಾಮನರಾಯರು ಆ ಹಣವನ್ನು ಸಹಾಯಧನವೆಂದು ಸ್ವೀಕರಿಸದೆ ಸಾಲವೆಂದು ತೆಗೆದುಕೊಂಡರು, ಧಾರವಾಡದಲ್ಲಿದ್ದ ಮಧ್ವರಾವ್ ಬಳ್ಳಾರಿಯವರ ನೆರವಿನಿಂದ ಮತ್ತೊಂದು ಸಾವಿರ ರೂಪಾಯಿ ಸಾಲ ಮಾಡಿದರು. ಕಂಪನಿ ಪ್ರಾರಂಭವಾದ ಒಂದು ವರ್ಷದಲ್ಲಿ ಸಾಲವನ್ನು ಮರಳಿಸಿದರು. ಹಿತೈಷಿಗಳ ನೆರವನ್ನು ಜೀವನದುದ್ದಕ್ಕೂ ಸ್ಮರಿಸಿದರು.

ಕಲೆ, ಕಲಾವಿದರ ಸಂಬಂಧವನ್ನು ವಾಮನರಾಯರು ಚೆನ್ನಾಗಿ ಅರಿತಿದ್ದರು. ಕಲಾವಿದರ ಸಾಧನೆ, ಸನ್ನಡತೆಯಿಂದ ಕಲೆಗೆ ಗೌರವ ಪ್ರತಿಷ್ಠೆ ಎಂಬುದು ಅವರ ನಿಲುವಾಗಿತ್ತು. ಸಮಯ ಸಿಕ್ಕಾಗಲೆಲ್ಲ ಕಲಾವಿದರನ್ನು ಕೂಡಿಸಿಕೊಂಡು ನಿರ್ವ್ಯಸನಿಗಳಾಗಿ, ನೀತಿವಂತರಾಗಿ ಹೇಗೆ ಬದುಕಬೇಕೆಂಬುದನ್ನು ಹೇಳುತ್ತಿದ್ದರಂತೆ. ಇವರ ಉಪಚಾರ, ಸ್ನೇಹಪರ ವಾತಾವರಣದಿಂದಾಗಿ ಕೆಲವು ಕಲಾವಿದರು ಕಂಪನಿಯ ಆರಂಭದಿಂದ ಕಂಪನಿ ಮುಚ್ಚುವವರೆಗೂ ಇದ್ದರು. ಕೇಶವ ಭಟ್ಟ ಮಿಶ್ರಿಕೋಟಿ, ಸಂಗನಬಸಪ್ಪ ಕುಕನೂರ ಮೊದಲಾದವರಿಗೆ ವಿಶ್ವಗುಣಾದರ್ಶ ಕಂಪನಿಯೇ ಮನೆಯಾಗಿತ್ತು. ನಟರ ಸಂಬಳದ ಬಗೆಗೆ ಕಲಾವಿದರ ಉಪಚಾರದ ಬಗೆಗೆ ವಾಮನರಾಯರ ರೀತಿ ನೀತಿಗಳು ಹೇಗಿದ್ದವು ಎಂಬುದನ್ನು ಕಂಪನಿಯ ಕಲಾವಿದ ಬಸವರಾಜ ಮನಸೂರ ಹೇಳುವ ಮಾತುಗಳು ಹೀಗಿವೆ.

"ವಿಶ್ವಗುಣಾದರ್ಶದಲ್ಲಿ ನಮಗೆ ಸಂಬಳ ಪ್ರತಿವಾರವೂ ದೊರೆಯುತ್ತಿತ್ತು. ಕಲೆಕ್ಷನ್ ಕುಸಿದರೆ ಕೊಂಚ ವಿಳಂಬವಾಗುತ್ತಿತ್ತು. ನಟರ ಸೀನಿಯಾರಿಟಿ ಮುಖ್ಯವಾಗಿರಲಿಲ್ಲ. ಅವರು ತೋರುವ ಪ್ರತಿಭೆ, ಆಸಕ್ತಿ, ಚಟುವಟಿಕೆ, ಪರಿಶ್ರಮಗಳ ಮೇಲೆ ಸಂಬಳ ನಿರ್ಧಾರ. ಸರಕಾರ ನಿಯಮದಂತೆ ವರ್ಷಕ್ಕೊಮ್ಮೆ ಇನ್‌ಕ್ರಿಮೆಂಟ್ ಪದ್ಧತಿ ಇಲ್ಲ, ಓರ್ವನಟ ತನ್ನ ಸಾಮರ್ಥ್ಯ ದಿನದಿನಕ್ಕೆ ಹೆಚ್ಚಿಸುತ್ತಿದ್ದರೆ ಅಂಥವನಿಗೆ ವರ್ಷಕ್ಕೆ ಐದಾರು ಇನ್‌ಕ್ರಿಮೆಂಟ್ ದೊರೆಯುತ್ತಿತ್ತು. ಅದೇ ತನ್ನ ಕೆಲಸದಲ್ಲಿ ಆಲಸ್ಯ ತೋರಿದರೆ ಇದ್ದ ಸಂಬಳದಲ್ಲಿ ಕಡಿತವಾಗುತ್ತಿದ್ದುದೂ ಉಂಟು. ಇನ್‌ಕ್ರಿಮೆಂಟ್ ಮೊತ್ತವೂ ನಿರ್ದಿಷ್ಟವಲ್ಲ. ಅದು ಗುರುಗಳಾದ ವಾಮನರಾಯರ 'ಮೂಡ'ನ್ನು ಅವಲಂಬಿಸಿತ್ತು. ಒಮ್ಮೆ ಯುವಕ ನಟ ಮಡಿವಾಳಯ್ಯ

ಪುಂಡಲೀಕನ ವೃದ್ಧಪಿತನ ಪಾತ್ರ ವಹಿಸಿದ್ದನ್ನು ನೋಡಿ ಮೆಚ್ಚಿದ ವಾಮನರಾಯರು ಆತ ಸೈಡವಿಂಗ್ ಬರುವ ಮುನ್ನವೇ ಅವನಿಗೆ ಬಡ್ತಿ ಘೋಷಿಸಿದ್ದರು. ಅದೇ ನಟ ಕೆಲದಿನಗಳ ನಂತರ ತನಗೆ ಬಡ್ತಿ ದೊರೆಯಬೇಕೆಂದು ಏನೇನೋ ತಂತ್ರ ಹೂಡಿದಾಗ ಕುಪಿತರಾದ ರಾಯರು ಆತನ ಲೆಕ್ಕ ಬಗೆಹರಿಸಿ ಕಳಿಸಿದ್ದರು! ಕೇವಲ ಸಂಬಳ–ಬಡ್ತಿಗಳ ಮೇಲೆಯೇ ಕಣ್ಣರಳಿಸಿ ಮೈಗಳ್ಳರಾಗಿರುವವರಿಗೆ ರಾಯರಿಂದ ಪುರಸ್ಕಾರ ಸಿಗುತ್ತಿರಲಿಲ್ಲ. ಕಲೆಕ್ಷನ್ ಚೆನ್ನಾಗಿದ್ದರೆ ಎಲ್ಲರಿಗೂ ಅವರವರ ಸಂಬಳ ಕೊಟ್ಟು 'ಖುಷಿ' ಎಂದು ಮೇಲ್ಪಾಸುಗಳನ್ನು ಕೊಡುತ್ತಿದ್ದರು. ನಟರಿಗೆ ಹೊಸ ಬಟ್ಟೆ, ಮೃಷ್ಟಾನ್ನ ಭೋಜನ, ಸತ್ಯ ನಾರಾಯಣ ಪೂಜೆ, ದಾನಧರ್ಮಗಳಿಗೆ ಕೊರತೆಯಿರಲಿಲ್ಲ[೨೫]. ಇಂಥ ಚಟುವಟಿಕೆಗಳಿಂದ ಕಂಪನಿಯ ಹೆಸರು ಸಾರ್ಥಕವೆನಿಸಿತ್ತು.

ವಾಮನರಾಯರ ಕಂಪನಿ ನೀತಿ ನಿಯಮಗಳು ಇತರ ಕಂಪನಿಗಳಿಗೆ ಅನುಕರಣೀಯವಾಗಿದ್ದವು. ಗುಳ್ಳೇದಗುಡ್ಡ ಗಂಗೂಬಾಯಿ, ಬಸವರಾಜ ಮನಸೂರ, ಯರಾಸಿ ಭರಮಪ್ಪ, ಕೊಟ್ಟೂರ ಬಸಪ್ಪ ಮೊದಲಾದ ಹಿರಿಯರು ಸ್ವಂತ ಕಂಪನಿಗಳನ್ನು ಪ್ರಾರಂಭಿಸಿದಾಗ ರಾಯರ ನೀತಿ ಸಂಹಿತೆಯನ್ನು ಅನುಸರಿಸಲು ಪ್ರಯತ್ನಿಸಿದರು. ಆದರೆ ವಿಶ್ವಗುಣಾದರ್ಶ ಸಾಧಿಸಿದ ಗುಣಮಟ್ಟ, ಇಟ್ಟುಕೊಂಡ ಆದರ್ಶಗಳು ಇತರ ಕಂಪನಿಗಳಿಗೆ ಕಷ್ಟಸಾಧ್ಯವಾಯಿತೆಂದೇ ಹೇಳಬೇಕು. ರಂಗಭೂಮಿ ವ್ಯಸನಿಗಳ, ಕೀಳುಮಟ್ಟದ ಜನರ ಕ್ಷೇತ್ರವೆಂಬ ಅಪವಾದವನ್ನು ವಾಮನರಾಯರು ತೊಡೆದುಹಾಕಿದರು.

ಕಲಾವಿದರ ಸಜ್ಜನಿಕೆಯನ್ನು ಎಷ್ಟು ಆದರಿಸುತ್ತಿದ್ದರೋ ಅವರ ಅಹಂಕಾರವನ್ನು ಅಷ್ಟೇ ತೀವ್ರವಾಗಿ ವಿರೋಧಿಸುತ್ತಿದ್ದರು ಕೂಡ. ಮೈಸೂರು ಕ್ಯಾಂಪಿನಲ್ಲಿ ನಡೆದ ಒಂದು ಪ್ರಸಂಗ ಇಲ್ಲಿ ಉಲ್ಲೇಖನೀಯ. ಅರಮನೆಯಲ್ಲಿ ನಾಟಕ ಪ್ರದರ್ಶಿಸಿದ ಬಳಿಕ ಕಂಪನಿ ಮೈಸೂರಿನಲ್ಲಿಯೇ ಬೀಡು ಬಿಟ್ಟಿತು ಗುರುಲಿಂಗಪ್ಪ ಹಾಗೂ ಗಂಗೂಬಾಯಿ ಕಂಪನಿ ಬಿಡಲು ಸಂಚು ಹೂಡಿದರು. ಒಂದು ದಿನ ಗುರುಲಿಂಗಪ್ಪ ರಾಯರಿಗೆ ಚುಚ್ಚಿ ಮಾತನಾಡಿದರು. ಭಾವಜೀವಿಯಾಗಿದ್ದ ವಾಮನರಾಯರು ಸಹಿಸಲಿಲ್ಲ. ತಕ್ಷಣ ಮ್ಯಾನೇಜರ್ ದೇಸಾಯಿ ಅವರನ್ನು ಕರೆದರು "ಈಗಿಂದೀಗಲೇ ಗುರುಲಿಂಗಪ್ಪ ಮತ್ತು ಗಂಗೂಬಾಯಿಯ ಲೆಕ್ಕವನ್ನು ಚುಕ್ತಾ ಮಾಡಿ ಕಳಿಸು. ನೀನು ಆ ವ್ಯವಹಾರ ಮುಗಿಸಿ ಬರುವವರೆಗೆ ಊಟಕ್ಕೆ ಹೋಗುವದಿಲ್ಲ" ಎಂದು ಕುಳಿತು ಬಿಟ್ಟರು. ಮ್ಯಾನೇಜರ್ ದೇಸಾಯಿ ವ್ಯವಹಾರ ಬಗೆಹರಿಸಿ, ಅವರಿಬ್ಬರನ್ನು ಕಳುಹಿಸಿ ಬಂದ ಮೇಲೆಯೆ ವಾಮನರಾಯರು ಊಟಕ್ಕೆ ಹೋದರು[೨೬] ಕಲಾವಿದರಿಗೆ ಕೊಡಬೇಕಾಗಿದ್ದ ಸಂಬಳದ ಬಾಕಿ ಹಣ ಹೆಚ್ಚಿದಾಗ ಹೆಂಡತಿಯ ಮೈಮೇಲಿನ ಆಭರಣ ಮಾರಿ ತೀರಿಸುತ್ತಿದ್ದರು. ಕೈಯಲ್ಲಿ ಸಾಕಷ್ಟು ಹಣವಿದ್ದಾಗ ಮುಂಗಡವಾಗಿ ಸಂಬಳ ಕೊಡುತ್ತಿದ್ದರು. ಮೈಸೂರಿನ ಮಹಾರಾಜರು ಒಮ್ಮೆ ಮೂರು ನಾಟಕಗಳನ್ನು ಆಡಿಸಿ ಐದು ಸಾವಿರ ರೂಪಾಯಿ ಕೊಟ್ಟರಂತೆ. ವಾಮನರಾಯರು ತಕ್ಷಣ ನಟರ ಸಂಬಳ ಕೊಟ್ಟರಲ್ಲದೆ ಮೂರು ತಿಂಗಳ ಅಡ್ವಾನ್ಸ್ ಕೂಡ ಕೊಟ್ಟರಂತೆ[೨೭].

ವಾಮನರಾಯರು ಕಲಾವಿದರ ಸಂಬಳದ ಬಾಕಿ ಹಣವನ್ನು ಎಂದೂ ಇಟ್ಟುಕೊಂಡವರಲ್ಲ. ಕಾರಣಾಂತರಗಳಿಂದ ಉಳಿದಿದ್ದರೆ ಗಲ್ಲಾಪೆಟ್ಟಿಗೆಯಲ್ಲಿ ಹಣ ಕೂಡಿದಾಗ ಮರಳಿಸಿಬಿಡುತ್ತಿದ್ದರು. ಕೇಶವಭಟ್ಟ ವಾಡೇದ (ಮಿಶ್ರಿಕೋಟಿ) ಕಂಪನಿ ಆರಂಭವಾದಾಗಿನಿಂದ ಕಂಪನಿಯಲ್ಲಿದ್ದ ನಟ. ಮದುವೆಯಾಗಿರಲಿಲ್ಲ. ಖರ್ಚಿಗೆ ಬೇಕಾದಷ್ಟು ಹಣವನ್ನು ಮಾತ್ರ ವಾರಕೊಮ್ಮೆ ಪಡೆಯುತ್ತಿದ್ದರು. ಹನ್ನೆರಡು ವರುಷ ಇದೇ ರೀತಿಯ ದಿನಚರಿ ಅವರದು. ಒಂದು ಸಲ ಬಾಕಿ ಹಣದ ಬಗ್ಗೆ ಭಟ್ಟರು ಮ್ಯಾನೇಜರ್ ಬಳಿ ಗೊಣಗಾಡಿದರಂತೆ. ಈ ವಿಷಯ ಮ್ಯಾನೇಜರ್‌ನಿಂದ ವಾಮನರಾಯರ ಕಿವಿಗೂ ತಲುಪಿತು. ಆಗ ಕಂಪನಿಯು ರಾಯಚೂರ ಕ್ಯಾಂಪಿನಲ್ಲಿತ್ತು. ಕಲೆಕ್ಷನ್ ಕೂಡ ಚೆನ್ನಾಗಿತ್ತು. ಕೂಡಲೇ ರಾಯರು ಮ್ಯಾನೇಜರ್ ನರಸಪ್ಪ ದೇಸಾಯಿ ಅವರನ್ನು ಕರೆದು ಕಂಪನಿ ಆರಂಭವಾದಾಗಿನಿಂದ ಉಳಿದಿರುವ ಸಂಬಳದ ಬಾಕಿಯನ್ನು ಮತ್ತು ವರುಷ ವರುಷ ಬಡತಿಯಾದಾಗ ಹೆಚ್ಚಿರುವ ಸಂಬಳದ ಲೆಕ್ಕವನ್ನು ಕರಾರುವಾಕ್ಕಾಗಿ ಮಾಡಿ ಆ ಮೊತ್ತವನ್ನು ಕೇಶವಭಟ್ಟರಿಗೆ ಮುಟ್ಟಿಸಲು ಹೇಳಿದರು. ಆಗ ಹನ್ನೆರಡು ವರುಷದ ಲೆಕ್ಕವನ್ನು ಪೂರ್ತಿಗೊಳಿಸಲು ಒಂದು ವಾರ ಹಿಡಿಯಿತಂತೆ. 'ಬಾಕಿ ತೀರಿಸುವುದಕ್ಕಾಗಿ ಪ್ರತಿ ನಾಟಕಕ್ಕೆ ಮೂರುನೂರು ರೂಪಾಯಿಯಂತೆ ಕೇಶವಭಟ್ಟರಿಗೆ ಥೇಟರಿನಲ್ಲಿಯೇ ಕೊಟ್ಟು ಗಲ್ಲೆಪೆಟ್ಟಿಗೆಯನ್ನು ಮನೆಗೆ ತರಲು ದೇಸಾಯಿಯರಿಗೆ ಆಜ್ಞಾಪಿಸಿದರು. ಸುಮಾರು ಎರಡು ಸಾವಿರ ರೂಪಾಯಿ ಮುಟ್ಟುವ ತನಕ ಈ ಕ್ರಮ ನಡೆದಿತ್ತು[೨೮]. ಇದರಿಂದ ಕೇಶವಭಟ್ಟರುಗೆ ಮುಜುಗುರ ಮತ್ತು ಸಂತೋಷ. ಬಾಕಿ ಹಣವೆಲ್ಲ ಮುಟ್ಟಿದ ಮೇಲೆ ವಾಮನರಾಯರು ಯಥಾರೀತಿಯಲ್ಲಿಯೇ ಕೇಶವಭಟ್ಟರ ಜೊತೆಗಿದ್ದರು. ನಟರ ಬಗೆಗೆ ಅವರಿಗೆ ಪ್ರೀತಿ, ಅಭಿಮಾನ, ಗೌರವವಿತ್ತು. ಅವರನ್ನು ಎಂದೂ ಸೇವಕರಂತೆ ನೋಡಲಿಲ್ಲ, ನಡೆಸಿಕೊಳ್ಳಲಿಲ್ಲ. ಎನ್ಕೆ ಅವರು ಬರೆದ ಹಾಗೆ 'ವಾಮನರಾಯರು ಒಂದಿಷ್ಟು ಪ್ರಸನ್ನಚಿತ್ತರಾಗಿದ್ದರೆ ಸಾಕು ನಟವರ್ಗವನ್ನೆಲ್ಲ ಉಣಿಸಿ, ತಿನ್ನಿಸಿ ಖುಷಿಯಿಂದ ಇಡುತ್ತಿದ್ದರು. ಅವರದು ಸ್ನೇಹಿತರನ್ನು ಹಚ್ಚಿಕೊಳ್ಳುವ ಸ್ವಭಾವ, ನಾಟಕದ ಊಟದ ಮನೆಯಲ್ಲಿ ನಿತ್ಯವೂ ಅತಿಥಿಗಳು, ನಿತ್ಯವೂ ಅನ್ನ ಸಂತರ್ಪಣೆ, ಬಹಳ ಅಗ್ಗಳತೆಯ ಕಾಲವಾದುದರಿಂದ ಕಂಪನಿಯ ಜನಕ್ಕೆಲ್ಲ ಸುಗ್ರಾಸ ಭೋಜನ ದೊರೆಯುತ್ತಿತ್ತು. ತಿಂಗಳಿಗೊಮ್ಮೆ ಶ್ರೀ ಸತ್ಯನಾರಾಯಣನ ಪೂಜೆ, ನೈವೇದ್ಯ ಸಲ್ಲಿಸುವ ಸಂಪ್ರದಾಯವನ್ನಿಟ್ಟುಕೊಂಡಿದ್ದರು. ಶ್ರೀಸತ್ಯನಾರಾಯಣ ಪೂಜೆಯಂದು ಹೋಳಿಗೆ ತುಪ್ಪದ ಊಟ'[೨೯]. ನಾಟಕಗಳು ಚೆನ್ನಾಗಿ ನಡೆದಾಗ ಕೈಯಲ್ಲಿ ದುಡ್ಡಿದ್ದಾಗ ಕಂಪನಿ ಜನರಿಗೆ ಕೊರತೆ ಇರುತ್ತಿರಲಿಲ್ಲ. ಕಲಾವಿದರು ಖುಷಿಯಿಂದ ಇದ್ದಾಗ ಮಾತ್ರ ನಾಟಕ ಕಳೆಕಟ್ಟುತ್ತದೆ, ಕಲಾವಿದರು ಮನಃಪೂರ್ವಕವಾಗಿ ಅಭಿನಯಿಸಿದಾಗ ಮಾತ್ರ ಪ್ರೇಕ್ಷಕರಿಗೆ ರಸಾನುಭವ ಎಂಬುದು ವಾಮನರಾಯರ ಅಭಿಪ್ರಾಯ.

ಕಲಾವಿದರು ಸಂಬಳದ ಕೊರತೆಯಿಂದ ಕಷ್ಟದಲ್ಲಿದ್ದಾಗ ಹೆಂಡತಿಯ ಹತ್ತಿರವಿದ್ದ ಆಭರಣಗಳನ್ನು ಮಾರಲು ರಾಯರು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಅಷ್ಟೇ ಅಲ್ಲ ಕಂಪನಿಯನ್ನು ನಿಲ್ಲಿಸಲೂ ಸಿದ್ಧರಾಗುತ್ತಿದ್ದರು. ಕಲಾವಿದರು ಮುಂದಾಗಿ 'ಕಂಪನಿ ನಿಲ್ಲುವುದು ಬೇಡ' 'ಸಂಬಳ ಅನುಕೂಲವಾದಾಗ

ಕೊಡಿ' ಎಂದು ರಾಯರಿಗೆ ಒತ್ತಾಯಿಸಿದ ಘಟನೆಗಳೂ ವಿಶ್ವಗುಣಾದರ್ಶದ ಜೀವನದಲ್ಲಿ ನಡೆದಿವೆ. ಬಸವರಾಜ ಮನಸೂರ ಅವರು ಹೇಳಿರುವ ಒಂದು ಘಟನೆಯನ್ನು ಇಲ್ಲಿ ಪ್ರಸ್ತಾಪಿಸಬೇಕು.

'ವಾಮನರಾಯರು ಕೈಯಲ್ಲಿದ್ದಾಗ ಯಾರಿಗೂ ವಂಚನೆ ಮಾಡಿದವರಲ್ಲ ೮-೧೦ ಸಾವಿರ ಸಾಲವಾಗಿತ್ತು. ಹೆಂಡತಿಯ ಆಭರಣ ಗಿರವಿ ಇಟ್ಟಿದ್ದರು. ನಟರ ಜೀವನ ನಿರ್ವಹಣೆ ಕಠಿಣವಾಯಿತು. ಒಂದೂರಿನಿಂದ ಇನ್ನೊಂದು ಊರಿಗೆ ಕಂಪನಿ ಸ್ಥಳಾಂತರಿಸುವಾಗ ನಟರೇ ಸಾಮಸುಗಳನ್ನು ಕಟ್ಟಿ ವಾಹನ ಏರಿಸಿ ಮುಂದಿನ ಕ್ಯಾಂಪಿನಲ್ಲಿ ಇಳಿಸಿ, ಡೇರೆ ಕಟ್ಟುವುದನ್ನು ಇತರ ಕಂಪನಿಯ ನಟರು ನೋಡಿದ್ದುಂಟು. ನಮ್ಮಲ್ಲಿರುವ ಸಹಕಾರ ಮನೋಭಾವದಿಂದ ಎಂಥ ಕಷ್ಟ ಬಂದರೂ ಎದುರಿಸುವ ಧೈರ್ಯ ನಮ್ಮಲ್ಲಿತ್ತು. ಒಂದು ದಿನ ಚೆನ್ನಪಟ್ಟಣ ಕ್ಯಾಂಪಿನಲ್ಲಿ ವಾಮನರಾಯರು ಎಲ್ಲ ನಟರನ್ನು ಸಭೆ ಕರೆದು "ನೀವು ಕಳೆದ ಆರು ತಿಂಗಳಿನಿಂದ ಸಂಬಳ ಕಂಡಿಲ್ಲ. ನೀವು ನೀಡಿದ ಸಹಕಾರ ಎಂದೆಗೂ ಮರೆಯಲಾರೆ. ಇದೇ ರೀತಿ ಕಂಡಕಂಡಲ್ಲಿ ಸಾಲ ಮಾಡಿ ಕಂಪನಿ ನಡೆಸುವುದು ಸಾಧ್ಯವಿಲ್ಲ. ಹೆಂಡತಿಯ ಮೈಮೇಲೆ ಕೆಲವು ಬಂಗಾರ ಇದೆ ಅದನ್ನೂ ಮಾರಿ ನಿಮಗೆ ಕೊಡಬೇಕಾದ ಬಾಕಿಹಣ ತೀರಿಸುತ್ತೇನೆ. ನೀವು ಬೇಸರಿಸದೆ ನಿಮ್ಮ ನಿಮ್ಮ ಮನೆಗೆ ಹೋಗಿಬಿಡಿ, ಕಂಪನಿ ಮುಚ್ಚಿ ಬಿಡೋಣ" ಎಂದಾಗ ರಾಯರ ಕಂಠ ಗದ್ಗದಿತವಾಯಿತು. ಆಗ ಎಲ್ಲರೂ ಏಕಕಂಠದಿಂದ "ಕಂಪನಿ ಮುಚ್ಚುವುದು ಬೇಡ, ನೀವು ಸಂಬಳ ಕೊಡದಿದ್ದರೂ ಸರಿ, ಕಂಪನಿ ನಡೆಸೋಣ" ಎಂದು ಧೈರ್ಯ ತುಂಬಿದರು[೬೦].

ವಾಮನರಾಯರ ಕೈಯಲ್ಲಿ ಧಾರಾಳವಾಗಿ ಹಣವಿರದಿದ್ದರೂ ಹೃದಯದಲ್ಲಿ ಉದಾರ ಗುಣಗಳಿದ್ದವು. ನಟರನ್ನು ಪ್ರೀತಿಯಿಂದ ಅಂತಃಕರಣದಿಂದ ನೋಡಿಕೊಳ್ಳುತ್ತಿದ್ದರು. ಅದಕ್ಕಾಗಿಯೇ ಅವರ ಕಂಪನಿಯ ಕಲಾವಿದರಾದರೂ ಕಂಪನಿಯ ಶ್ರೇಯೋಭಿವೃದ್ಧಿಗಾಗಿ ಶ್ರಮಿಸುತ್ತಿದ್ದರು. ವಾಮನರಾಯರ ನಾಟಕ ಕಂಪನಿಯು ಒಂದು ಆದರ್ಶ ಕುಟುಂಬದ ಸಂಬಂಧಗಳನ್ನು ಒಳಗೊಂಡಿತ್ತು. ವಾಮನರಾಯರ ಧರ್ಮಪತ್ನಿ ಸೌ. ಕಾಶೀಬಾಯಿಯವರಾದರೂ ಅವರ ಜವಾಬ್ದಾರಿಯನ್ನು ತಿಳಿದು ಅವರ ರಂಗಯಾತ್ರೆಯ ಸಹಪಥಿಕರಾಗಿದ್ದರು. ಇಂಥ ಮಾನವೀಯ ಸಂಬಂಧಗಳಿಂದಾಗಿ ವಿಶ್ವಗುಣಾದರ್ಶ ನಾಟಕ ಕಂಪನಿ ಇಪ್ಪತ್ತು ವರ್ಷ ನಿರಂತರ ರಂಗಸೇವೆ ಮಾಡಲು ಸಾಧ್ಯವಾಯಿತು. ನರಸಪ್ಪ ದೇಸಾಯಿ ಈ ಕಂಪನಿಯ ಮ್ಯಾನೇಜರ ಆಗಿ ಬಹಳ ವರ್ಷ ಸೇವೆ ಸಲ್ಲಿಸಿರುವುದು ಸ್ಮರಣೀಯ.

**ಕುಟುಂಬ ವತ್ಸಲ:**

ಶಿರಹಟ್ಟಿ ಕಂಪನಿ ಪ್ರವೇಶಿಸುವುದಕ್ಕಿಂತ ಮುಂಚೆಯೇ ವಾಮನರಾಯರು ಕಾಶೀಬಾಯಿ ಎಂಬ ಸುಲಕ್ಷಣ ಕಣ್ಯೆಯ ಕೈ ಹಿಡಿದಿದ್ದರು. ಇವರ ದಾಂಪತ್ಯ ಜೀವನ ಅನ್ಯೋನ್ಯವಾಗಿತ್ತು. ವಾಮನರಾಯರು ಸ್ವಂತ ಕಂಪನಿ ಮಾಡಿದ ಮೇಲೆ ಕಾಶೀಬಾಯಿ ರಾಯರ ಜೊತೆಯಲ್ಲಿ ಕಂಪನಿಯಲ್ಲಿಯೇ ಇರುತ್ತಿದ್ದರು. ಸೌ. ಕಾಶೀಬಾಯಿಯವರು ಹೊತ್ತಿಗೆ ಸರಿಯಾಗಿ ತಮ್ಮ

ಕುಟುಂಬದ ನಿರ್ವಹಣೆಯ ಜೊತೆಜೊತೆಗೆ ಕಲಾವಿದರ ಊಟದ ವ್ಯವಸ್ಥೆ, ಹಬ್ಬ ಹರಿದಿನ, ಪೂಜೆ ಪುನಸ್ಕಾರಗಳು. ಕಂಪನಿಯ ನೌಕರರ ಯೋಗಕ್ಷೇಮವನ್ನೆಲ್ಲ ಅತ್ಯಂತ ಪ್ರೀತಿಯಿಂದ ಮಾಡುತ್ತಿದ್ದರು. ವಾಮನರಾಯರು ಧಾರ್ಮಿಕ ಶ್ರದ್ಧೆಯುಳ್ಳವರು. ಹೀಗಾಗಿ ಪ್ರತಿ ತಿಂಗಳು 'ಸತ್ಯನಾರಾಯಣ ವ್ರತ' ಮಾಡುತ್ತಿದ್ದರು. ರಾಯರು ಭೋಜನಪ್ರಿಯರಾಗಿದ್ದರು. ವಿಶೇಷವಾಗಿ 'ಶ್ರೀಖಂಡ' ಪ್ರಿಯರಾದುದರಿಂದ ಅವರ ಧರ್ಮಪತ್ನಿ ಕಾಶೀಬಾಯಿಯವರು ಪ್ರೀತಿಯಿಂದ ಮಾಡಿ ಉಣಬಡಿಸುತ್ತಿದ್ದರು. ತಮ್ಮ ಮನೆಯ ಯಾವುದೇ ಕಾರ್ಯಕ್ರಮಗಳಲ್ಲಿಯ ಸಂಭ್ರಮದ ಆಚರಣೆಯಲ್ಲಿ ಕಂಪನಿಯ ಎಲ್ಲರೂ ಪಾಲ್ಗೊಳ್ಳಬೇಕೆಂಬುದು ರಾಯರ ಒತ್ತಾಸೆಯಾಗಿತ್ತು. ಹೀಗಾಗಿ ಕಂಪನಿ ಎಂದರೆ ನನ್ನ ಕುಟುಂಬ, ತನ್ನ ಕುಟುಂಬವೇ ಕಂಪನಿ ಎಂಬ ಭಾವ ಅವರ ಹೃದಯ ಶ್ರೀಮಂತಿಕೆಯನ್ನು ತೋರಿಸುತ್ತದೆ. ಕುಟುಂಬ ವತ್ಸಲರಾದ ವಾಮನರಾಯರು ಸಹ ತಮ್ಮ ವೃತ್ತಿಜೀವನದಲ್ಲಿ ಎಂದಿಗೂ ಕುಟುಂಬ ಕ್ಷೇಮವನ್ನು ಕಡೆಗಣಿಸಿದವರಲ್ಲ. ಬಾಳ ಸಂಗಾತಿ ಕಾಶೀಬಾಯಿ ಅವರನ್ನು ಯಾವಾಗಲೂ ನಿರ್ಲಕ್ಷಿಸುತ್ತಿರಲಿಲ್ಲ. ನಾಟಕದ ಚಟುವಟಿಕೆಗಳಿರಲಿ ಮನೆತನದ ವ್ಯವಹಾರವಿರಲಿ ಅವರೊಂದಿಗೆ ಮೊದಲು ಚರ್ಚಿಸಿ ಆ ಮೇಲೆ ನಿರ್ಣಯ ತೆಗೆದುಕೊಳ್ಳುತ್ತಿದ್ದರು. ೧೯೨೬ ರ ಸುಮಾರು ಮಗ ವೆಂಕಣ್ಣನಿಗಾಗಿ ಧಾರವಾಡದ ಮೆಣಸಿನಕಾಯಿ ಓಣಿಯಲ್ಲಿ ಮನೆ ಖರೀದಿಸಿದರು. ೧೯೩೦ರ ಸುಮಾರು 'ವೀರ ಅಭಿಮನ್ಯು' ನಾಟಕದ ಆದಾಯ ಸಾಕಷ್ಟು ಉಳಿದಾಗ ಅಣ್ಣಿಗೇರಿಯಲ್ಲಿ ಒಂದು ಹೊಲವನ್ನು ಖರೀದಿಸಿದರು. ಮಕ್ಕಳು ಮೊಮ್ಮಕ್ಕಳು ಸುಖವಾಗಿರಬೇಕು. ಸಂತೋಷದಿಂದ ಇರಬೇಕು ಎಂಬ ಆಸೆ ಅವರದು ಮಗನ ಹೊಟ್ಟೆಯಿಂದ ಚೊಚ್ಚ ಮೊಮ್ಮಗ ಹುಟ್ಟಿದಾಗ ವಾಮನರಾಯರ ಸಂತೋಷ ಹೇಳತೀರದು. ಆಗ ಕಂಪನಿ ತಾಳಿಕೋಟೆಯಲ್ಲಿದ್ದರೂ ನಾಟಕ ಮುಗಿಸಿಕೊಂಡು ಎರಡು ದಿನ ಬಿಡುವು ಮಾಡಿಕೊಂಡು ಗದುಗಿಗೆ ಬಂದು ಮೊಮ್ಮಗನ ಮುಖ ನೋಡಿ ಸಂತೋಷಪಟ್ಟರು.

ವಾಮನರಾಯರಿಗೆ ನಾಟಕ ಕಂಪನಿ ಚೆನ್ನಾಗಿ ನಡೆಯಬೇಕೆಂಬ ಅದಮ್ಯ ಹಂಬಲ. ಹಗಲು ರಾತ್ರಿ ಎನ್ನದೆ ಕಂಪನಿಯ ಕ್ಷೇಮ ಚಿಂತೆ ಎರಡೂ ಇತ್ತು. ಹಾಗೆಯೇ ಕಂಪನಿಯ ಆದಾಯದಲ್ಲಿ ತಮ್ಮ ಕೌಟುಂಬಿಕ ಜೀವನವೂ ಸುಖಮಯವಾಗಿ ಸಾಗಬೇಕೆಂದು ಆಶಿಸುತ್ತಿದ್ದರು. ಕಂಪನಿಯ ಆದಾಯದಿಂದ ಕುಟುಂಬವು ಉದ್ಧಾರವಾಗಬೇಕು, ಕುಟುಂಬದ ಸದಸ್ಯರು ನೆಮ್ಮದಿಯಿಂದ ಜೀವನ ಸಾಗಿಸಬೇಕು ಎಂದು ಸತತ ಪರಿಶ್ರಮ ಮಾಡುತ್ತಿದ್ದರು. ವಾಮನರಾಯರಿಗೆ ಜೋತಿಷ್ಯಶಾಸ್ತ್ರದಲ್ಲಿ ನಂಬಿಕೆ ಹೆಚ್ಚು ಯಾವುದೇ ಕಾರಣಕ್ಕೂ ಮುನ್ನ ಜೋತಿಷ್ಯ ಕೇಳಿಯೇ ಕಾರ್ಯಕೈಗೊಳ್ಳುತ್ತಿದ್ದರು. ವಾಮನರಾಯರ ಏಕೈಕ ಸಂತಾನ ಶ್ರೀವೆಂಕಟರಾವ ಸವಣೂರ ಅವರು ಸದ್ಗುಣಿಯಾಗಿದ್ದರು. ಲೌಕಿಕ ಜ್ಞಾನ ಹೊಂದಿದವರಾಗಿದ್ದರು. ತಂದೆಯಂತೆ ಅಭಿನಯಕೌಶಲ್ಯವನ್ನು ರೂಢಿಸಿಕೊಳ್ಳಲಿಲ್ಲ ಹೆಚ್ಚಿನ ವಿದ್ಯಾವಂತರೂ ಆಗಿರಲಿಲ್ಲ. ಶಿಕ್ಷಣ ಕೇವಲ ೬ನೇ ತರಗತಿಗೆ ಮಾತ್ರ. ಹಾಡುಗಾರಿಕೆಯಲ್ಲಿ ಆಸಕ್ತಿ ಇತ್ತು. ವೆಂಕಟರಾವರ ಒಳ್ಳೆಯ ಗುಣ ಎಂದರೆ, ತಂದೆಯವರು ಕಟ್ಟಿದ 'ವಿಶ್ವಗುಣಾದರ್ಶ ಕಂಪನಿ'ಯ ಆಡಳಿತ ವ್ಯವಸ್ಥೆಗೆ ಸ್ವಲ್ಪ ಸಹಾಯ

ಮಾಡಿದ್ದಲ್ಲದೆ ತಂದೆ ಗಳಿಸಿದ್ದ ಆಸ್ತಿಯನ್ನು ಹಾಳು ಮಾಡಲಿಲ್ಲ. ಹಾಗಂತೆ ತಾನೂ ಗಳಿಸಿಡಲಿಲ್ಲ. ಐಶಾರಾಮೀ ಜೀವನವನ್ನೇ ನಡೆಸಿದರು. ತಂದೆಯವರು ಕಂಪನಿಗಳಿಸಿದ ಲಾಭದಲ್ಲಿ ಕೊಂಚ ತೆಗೆದಿಟ್ಟು ಮಾಡಿದ್ದ ಮನೆ, ಹೊಲ, ಬಂಗಾರ, ಬೆಳ್ಳಿ, ಮುಂತಾದವುಗಳನ್ನೇ ಬಳಸಿ ಮಕ್ಕಳ ವಿದ್ಯಾಭ್ಯಾಸ ಪೂರೈಸಿದರು. ಪತ್ನಿ ಶ್ರೀಮತಿ ಪದ್ಮಾವತಿ ಜೊತೆಗೆ ಎಂಟು ಜನ ಮಕ್ಕಳು. ಸಂತೃಪ್ತ, ಸಮೃದ್ಧ ಕುಟುಂಬ ವೆಂಕಟರಾಯರದು.

**ಮಕ್ಕಳು ಮತ್ತು ಅವರ ಸಂಗಾತಿಗಳು:**

| | | |
|---|---|---|
| ೧. | ರಾಘವೇಂದ್ರ | ಸುಶೀಲಾ (ಧಾರವಾಡ) |
| ೨. | ಶ್ರೀಕೃಷ್ಣ | ಇಂದು (ಧಾರವಾಡ) |
| ೩. | ಸುಭದ್ರ | ಕಮಲಾಕರ ಕೊಪ್ಪರ (ಬೆಂಗಳೂರು) |
| ೪. | ಪ್ರಭಾವತಿ | ಮೋಹನರಾವ ಕಂಚಿ (ಪುಣೆ) |
| ೫. | ಚಕ್ರಪಾಣಿ | ನಲಿನಿ (ಗದಗ) |
| ೬. | ಗೀತಾ | ವ್ಯಾಸರಾವ ಕೆರೂರ (ಧಾರವಾಡ) |
| ೭. | ಜಲಜಾಕ್ಷಿ | ಮಾಧವರಾವ ಪಾಟೀಲ (ಹರಿಹರ) |
| ೮. | ಸತ್ಯಬೋಧ | ಮೀನಾಕ್ಷಿ (ಧಾರವಾಡ) |

ವಾಮನರಾಯರು ಇರುವಾಗ ಈ ಎಂಟು ಜನ ಮೊಮ್ಮಕ್ಕಳಲ್ಲಿ ರಾಘವೇಂದ್ರ, ಶ್ರೀಕೃಷ್ಣ ಇಬ್ಬರು ಮಾತ್ರ ಹುಟ್ಟಿದ್ದರು. ಈ ಇಬ್ಬರನ್ನು ಎತ್ತಿ ಆಡಿಸಿದ ವಾಮನರಾಯರು ೧೯೩೫ರ ಆಗಷ್ಟ ೧೧ ರಂದು ಮಧುಮೇಹ ರೋಗ ಉಲ್ಬಣಿಸಿ ನಿಧನರಾದರು. ಅಂದು ವೃತ್ತಿರಂಗಭೂಮಿಯ ಶ್ರೇಷ್ಠ ಗಾಯಕನನಟನ ಪರಂಪರೆ ಸಂಪೂರ್ಣ ನಿಂತಂತಾಯಿತು.

**ಅಡಿ ಟಿಪ್ಪಣಿಗಳು :**

೧. ರಂಗ ಅಂತರಂಗ ಕಥನ: ಕೊಟ್ಟೂರಪ್ಪನವರ ಆತ್ಮ ಕಥೆ: ಕೆ.ಬಿ. ಪ್ರಭುಪ್ರಸಾದ್ ಪು. ೧೮.

೨. ಚಿಗುರು ನೆನಪು: ನಟಶೇಖರ ಬಸವರಾಜ ಮನಸೂರರ ಆತ್ಮಕಥೆ, ಪು ೧೩

೩. ನಟನಾಟಕಕಾರ ವಾಮನರಾವ ಮಾಸ್ತರ: ಎನ್ಕೆ, ಪು ೯

೪. ವಾಮನರಾವ ಮಾಸ್ತರ: ನಾಡಿಗೇರ ಕೃಷ್ಣರಾವ್, ಪು. ೯.

೫. ನಟನಾಟಕಕಾರ ವಾಮನರಾವ ಮಾಸ್ತರ: ಎನ್ಕೆ, ಪು ೧೦

೬. ಅದೇ ಪು. ೧೧

೭. ಅದೇ ಪು. ೧೧

೮. ವೀರ ಅಭಿಮನ್ಯು ನಾಟಕದ ಪ್ರಸ್ತಾವನೆ: ಬಾಳೆಹೊಸೂರ ರಾಮರಾಯರು: ಪು. ೪

೯. ಅದೇ ಪು. ೬

೧೦. ಗಂಧರ್ವಯುಗ (ಚಾರಿತ್ರಿಕ ಕಾದಂಬರಿ) ಮೂಲ ಮರಾಠಿ: ಗಂಗಾಧರ ಗಾಡ್ಗೀಳ, ಕನ್ನಡಕ್ಕೆ: ಚಂದ್ರಕಾಂತ ಪೋಕಳೆ, ಪು ೪೮

೧೧. ನಟ ನಾಟಕಕಾರ ವಾಮನರಾವ ಮಾಸ್ತರ: ಎನ್ಕೆ, ಪು. ೧೮

೧೨. ಸಂದರ್ಶನ: ಏಣಗಿ ಬಾಳಪ್ಪನವರು, ಸ್ಥಳ: ಧಾರವಾಡ, ದಿನಾಂಕ: ೧೦-೫-೨೦೦೯

೧೩. ನಾಟ್ಯಭೂಷಣ-ರಂಗನಟ ಮತ್ತು ನಟನ ಕಲೆ ಲೇಖನ: ಸಿ. ನಾಗಣ್ಣ ಪು ೧೩೭

೧೪. ನಟ ನಾಟಕಕಾರ ವಾಮನರಾವ ಮಾಸ್ತರ: ಎನ್ಕೆ, ಪು. ೧೮

೧೫. ಅದೇ ಪು. ೪೮

೧೬. ವೀರ ಅಭಿಮನ್ಯು ನಾಟಕದ ಪ್ರಸ್ತಾವನೆ: ಬಾಳೆಹೊಸೂರ ರಾಮರಾಯರು: ಪು. ೭

೧೭. ಅದೇ ಪು. ೭

೧೮. ರಂಗ ಅಂತರಂಗ ಕಥನ: ಕೊಟ್ಟೂರಪ್ಪನವರ ಆತ್ಮ ಕಥೆ: ಕೆ.ಬಿ. ಪ್ರಭುಪ್ರಸಾದ್: ಪು. ३೮.

೧೯. ನಟ ನಾಟಕಕಾರ ವಾಮನರಾವ ಮಾಸ್ತರ: ಎನ್ಕೆ, ಪು. ೧೩

೨೦. ಅದೇ ಪು. ೨೨

೨೧. ಅದೇ ಪು. ೨೧

೨೨. ಪೌರಾಣಿಕ ನಾಟಕ; ನವಾಅನ್ವಯಾರ್ಥ ಅರುಣ ಪ್ರಭುಣೆರಂಗ, ಪು. ?

೨೩. ನಟ ನಾಟಕಕಾರ ವಾಮನರಾವ ಮಾಸ್ತರ: ಎನ್ಕೆ, ಪು. ೨೨

೨೪. ಸಂದರ್ಶನ: ಏಣಗಿ ಬಾಳಪ್ಪನವರು, ಸ್ಥಳ: ಧಾರವಾಡ, ದಿನಾಂಕ: ೧೧-೫-೨೦೦೯

೨೫. ಚಿಗುರು ನೆನಪು: ನಟಶೇಖರ ಬಸವರಾಜ ಮನಸೂರರ ಆತ್ಮಕಥೆ, ಪು. ೨೯

೨೬. ಚಿಗುರು ನೆನಪು: ನಟಶೇಖರ ಬಸವರಾಜ ಮನಸೂರರ ಆತ್ಮಕಥೆ, ಪು. ೩೦

೨೭. ಚಿಗುರು ನೆನಪು: ನಟಶೇಖರ ಬಸವರಾಜ ಮನಸೂರರ ಆತ್ಮಕಥೆ, ಪು. ೩೨

೨೮. ನಟ ನಾಟಕಕಾರ ವಾಮನರಾವ ಮಾಸ್ತರ: ಎನ್ಕೆ, ಪು. ೪೫

೨೯. ಅದೇ ಪು. ೧೮

೩೦. ಚಿಗುರು ನೆನಪು: ನಟಶೇಖರ ಬಸವರಾಜ ಮನಸೂರರ ಆತ್ಮಕಥೆ, ಪು. ೩೫

# ಅಧ್ಯಾಯ - ನಾಲ್ಕು
# ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿ

ಅ) ಪ್ರಮುಖ ಕಲಾವಿದರು

ಆ) ಪ್ರಮುಖ ಕಲಾವಿದೆಯರು

ಇ) ಮಂಡಳಿಯ ವ್ಯವಸ್ಥೆ

# ಅಧ್ಯಾಯ : ನಾಲ್ಕು

## ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿ

### ೧೯೧೪-೧೯೩೪

**ಪೀಠಿಕೆ:**

ವಿಶ್ವಗುಣಾದರ್ಶ ಹೆಸರಿನ ಸ್ವಂತ ಕಂಪನಿ ಕಟ್ಟುವದಕ್ಕಿಂತ ಮೊದಲು ವಾಮನರಾಯರು ಶಿರಹಟ್ಟಿ ವೆಂಕೋಬರಾಯರ ಕಂಪನಿಯಲ್ಲಿದ್ದರು. ಅಲ್ಲಿಯ ಸಂಗೀತ ನಾಟಕಗಳಲ್ಲಿ ತಮ್ಮ ಗಾನಾಭಿನಯ ಕೌಶಲ್ಯವನ್ನು ಪ್ರದರ್ಶಿಸಿ. ಪ್ರಖ್ಯಾತ ನಟರೆಂದು ಹೆಸರು ಗಳಿಸಿದ್ದರು. ಶಿರಹಟ್ಟಿ ವೆಂಕೋಬರಾಯರಾದರೂ ವಾಮನರಾಯರ ಪ್ರತಿಭೆಗೆ ತಕ್ಕಂತೆ ಪ್ರೋತ್ಸಾಹಿಸಿ ಗೌರವಿಸುತ್ತಿದ್ದರು. ಶಿರಹಟ್ಟಿ ಕಂಪನಿ ಮೈಸೂರು, ಕೊಯಿಮತ್ತೂರು, ಮಂಗಳೂರು, ಮುಂತಾದೆಡೆ ಕ್ಯಾಂಪ್ ಮಾಡಿ ನಾಟಕಗಳನ್ನು ಪ್ರಯೋಗಿಸುತ್ತಿದ್ದಾಗ ವಾಮನರಾಯರ ಪಾತ್ರ ಅಪಾರ ಜನಮೆಚ್ಚುಗೆ ಪಡೆಯಿತು. ೧೯೧೦ ರಲ್ಲಿ ಕಂಪನಿ ಮೈಸೂರಿನಲ್ಲಿ ಆಡುತ್ತಿದ್ದ 'ಕವಿರತ್ನ ಕಾಳಿದಾಸ' ನಾಟಕದಲ್ಲಿ ವಾಮನರಾಯರ ಕಾಳಿದಾಸನ ಪಾತ್ರ ಅದ್ಭುತ ಯಶಸ್ಸನ್ನು ಸಾಧಿಸಿತು. ಈ ವಾರ್ತೆ ಆಗಿನ ಮೈಸೂರು ಮಹಾರಾಜರಿಗೂ ತಲುಪಿತು. ಆಗ ಅರಮನೆಯಲ್ಲಿ 'ಕವಿರತ್ನ ಕಾಳಿದಾಸ' ನಾಟಕದ ಪ್ರದರ್ಶನಕ್ಕೆ ಏರ್ಪಾಟು ಆಯಿತು. ವಾಮನರಾಯರ 'ಕಾಳಿದಾಸನ' ಪಾತ್ರವನ್ನು ನೋಡಿ ಮಹಾರಾಜರು ತುಂಬಾ ಸಂತೋಷಪಟ್ಟರು ಮತ್ತು ಅವರಿಗೆ ಬಂಗಾರದ ಪದಕ, ಪಾರಿತೋಷಕ ನೀಡಿ ಸತ್ಕರಿಸಿದರು. ಶಿರಹಟ್ಟಿ ಕಂಪನಿಯಲ್ಲಿದ್ದಾಗ ವಾಮನರಾಯರ ಪಾತ್ರದ ಪರಿಣತಿಗೆ ಇದೊಂದು ನಿದರ್ಶನ.

ಮುಂದೆ ಕಂಪನಿ ಹಾವೇರಿ ಭಾಗದಲ್ಲಿ ನಾಟಕಗಳನ್ನಾಡುತ್ತಿದ್ದಾಗ ಜರುಗಿದ ಒಂದು ಘಟನೆಯಿಂದ ವಾಮನರಾಯರ ರಂಗಭೂಮಿ ಬದುಕು ಮಹತ್ವದ ತಿರುವನ್ನು ಪಡೆಯಿತು. ಕಂಪನಿ 'ಕವಿರತ್ನ ಕಾಳಿದಾಸ' ನಾಟಕವನ್ನು ಆಡುತ್ತಿತ್ತು. ವಾಮನರಾಯರು ಮಗನ ಹುಟ್ಟುಹಬ್ಬಕ್ಕೆಂದು ಬಂಕಾಪುರಕ್ಕೆ ಹೋಗಿ ಬಂದರು. ಕರಿದ ಪದಾರ್ಥಗಳನ್ನು ತಿಂದದ್ದರಿಂದ ಅವರ ಧ್ವನಿ ಕರ್ಕಶವಾಯಿತು. ಇದರಿಂದ ಅವರು ಅಭಿನಯಿಸಿದ ಪಾತ್ರ ಕಳೆ ಕಟ್ಟಲಿಲ್ಲ. ಇದು ಇಡೀ ನಾಟಕದ ಮೇಲೆ ಕೆಟ್ಟ ಪರಿಣಾಮ ಬೀರಿತು. ವೆಂಕೋಬರಾಯರು ನಾಟಕ ಮುಗಿದ ಮೇಲೆ ಒಂದಿಷ್ಟು ಕೋಪಿಸಿಕೊಂಡು ಮಾತನಾಡಿದರು. ಸ್ವಾಭಿಮಾನಿ ವಾಮನರಾಯರಿಗೆ ಇದು ಸರಿ ಬರಲಿಲ್ಲ. ಬಣ್ಣ ಒರೆಸಿಕೊಂಡು ಆ ಕ್ಷಣವೇ ಉಟ್ಟ ಬಟ್ಟೆಯ ಮೇಲೆ ಕಂಪನಿಯಿಂದ ಹೊರಬಿದ್ದರು. ಈ ಸಂದರ್ಭದಲ್ಲಿ ಕಂಪನಿಯಲ್ಲಿ ಶ್ರೇಷ್ಠ ನಟರಾಗಿದ್ದ ವರವಿ ಚೆನ್ನಯ್ಯ, ರೊಟ್ಟಿ ಗೋವಿಂದಾಚಾರ್ಯರು ಅವರನ್ನು ಅನುಸರಿಸಿದರು.

ಶಿರಹಟ್ಟಿ ಕಂಪನಿ ಬಿಟ್ಟು ಬಂದ ಮೇಲೆ ವಾಮನರಾಯರ ನೇತೃತ್ವದಲ್ಲಿ ಪಾಲುದಾರಿಕೆ ಕಂಪನಿಯೊಂದು ಅಸ್ತಿತ್ವಕ್ಕೆ ಬಂದಿತು. ವಾಮನರಾಯರಿಗೆ ಎಂಟಾಣೆ ಪಾಲು, ಚೆನ್ನಯ್ಯ ಮತ್ತು

ಗೋವಿಂದಾಚಾರ್ಯರಿಗೆ ತಲಾ ನಾಲ್ಕಾಣೆ ಪಾಲು, ಆರಂಭದಲ್ಲಿ ಕಂಪನಿ ಚೆನ್ನಾಗಿಯೇ ನಡೆಯಿತು. ಗೋವಿಂದಾಚಾರ್ಯರು 'ರಾಜಾ' ಪಾತ್ರಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಮಾಡುತ್ತಿದ್ದರು. ಅದಕ್ಕೆ ತಕ್ಕ ವ್ಯಕ್ತಿತ್ವ ಅವರಿಗಿತ್ತು. ವರವಿ ಚೆನ್ನಯ್ಯನವರ ಸುಂದರ ರೂಪ. ಮಧುರ ಕಂಠ, ಸಂಗೀತ ಮತ್ತು ಅಭಿನಯಗಳಲ್ಲಿಯ ಕೌಶಲ್ಯ ಕೂಡ ನಾಟಕಗಳ ಗೆಲುವಿಗೆ ಕಾರಣವಾಗಿತ್ತು.

ಮರಾಠಿ ರಂಗನಟ 'ಬಾಲಗಂಧರ್ವರ ಸ್ತ್ರೀ ಪಾತ್ರದ ಮೋಹಕತೆ ಚೆನ್ನಯ್ಯನವರಲ್ಲಿತ್ತೆಂದು ಗೊತ್ತಾಗುತ್ತದೆ. ಇಂಥ ಕಲಾವಿದರೊಂದಿಗೆ ವಾಮನರಾಯರು ಕಂಪನಿಯನ್ನು ಚೆನ್ನಾಗಿ ನಡೆಸಿದರು. ಹುಬ್ಬಳ್ಳಿ-ಧಾರವಾಡ, ಬೆಳಗಾವಿಗಳಲ್ಲಿ ಅನೇಕ ಪ್ರದರ್ಶನಗಳು ನಡೆದವು. ಆದರೆ ವ್ಯವಹಾರದ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿದವು.

ನಾಲ್ಕಾಣೆಯ ಪಾಲುದಾರಿಕೆ ಆದರೇನಂತೆ? ತಾವೂ ಸಹ ಕಂಪನಿಯ ಮಾಲೀಕರೆಂದು ತೋರಿಸಲು ಉಳಿದಿಬ್ಬರು ಬಂಗಾರದ ಖಡೆಗಳನ್ನು ತೊಟ್ಟುಕೊಂಡು ರಂಗದ ಮೇಲೆ ಪ್ರದರ್ಶಿಸುತ್ತಿದ್ದರಂತೆ, ಈ ವರ್ತನೆ ವಾಮನರಾಯರಿಗೆ ಹಿಡಿಸಲಿಲ್ಲ. ಒಂದು ದಿನ ರಾಯರು "ಇಂಥ ಚಟುವಟಿಕೆಗಳು ರಂಗಭೂಮಿಗೆ ಶೋಭೆ ತರುವುದಿಲ್ಲ. ಕುಚೋದ್ಯತನ ಬಿಟ್ಟು, ನಿಮ್ಮ ಕೆಲಸದ ಕಡೆಗೆ ಗಮನ ಹರಿಸಿರಿ" ಎಂದು ಖಾರವಾಗಿ ನುಡಿದರು.[೧] ಅದಕ್ಕೆ ಪ್ರತಿಯಾಗಿ ಗೋವಿಂದಾಚಾರ್ಯ ಮತ್ತು ಚೆನ್ನಯ್ಯನವರು ಕಟುವಾಗಿಯೇ ಉತ್ತರಿಸಿದರು. "ನಾವೂ ಸಹ ಮಾಲೀಕರು, ನೀವು ನಮ್ಮ ಮೇಲೆ ಅಧಿಕಾರ ನಡೆಸುವದು ಸರಿಯಲ್ಲ" ಎಂದರು. ಈ ಮಾತುಗಳಿಂದ ವಾಮನರಾಯರಿಗೆ ತುಂಬಾ ನೋವಾಯಿತು. ಕೂಡಲೇ ವ್ಯವಹಾರವನ್ನು ಮುಗಿಸಿ ಬಿಡಲು ತೀರ್ಮಾನಿಸಿದರು. ಅವರವರ ಪಾಲು ಹಿಂತಿರುಗಿಸಿ ಕಂಪನಿ ಸಾಮಾನುಗಳನ್ನು ಬಂಕಾಪೂರಕ್ಕೆ ಸಾಗಿಸಿದರು. ಇದು ಜರುಗಿದ್ದು ಶಿರಸಿ ಕ್ಯಾಂಪಿನಲ್ಲಿ. ಈ ಘಟನೆ ವಾಮನರಾಯರ ಬಣ್ಣದ ಬದುಕಿನ ದಿಕ್ಕನ್ನು ಬದಲಿಸಿತೆಂದೇ ಹೇಳಬೇಕು.

ಮುಂದೇನು ಮಾಡುವದು? ಎಂಬ ಆಲೋಚನೆಯಲ್ಲಿ ರಾಯರು ಬಂಕಾಪೂರದಲ್ಲಿ ದಿನಗಳನ್ನು ನೂಕತೊಡಗಿದರು. ಕೈಯಲ್ಲಿ ಕಾಸಿಲ್ಲದೆ, ಕೆಲಸವೂ ಇಲ್ಲದೆ. ಅವರ ಮನಸ್ಸು ಭಾರವಾಗತೊಡಗಿತು. ಹಾಡು, ಅಭಿನಯಗಳಿಂದ ನಿತ್ಯ ನೂರಾರು ಪ್ರೇಕ್ಷಕರನ್ನು ರಂಜಿಸುತ್ತಿದ್ದ ಅವರು ಏಕಾಂತದಲ್ಲಿ ಕುಳಿತು ವಿಚಾರ ಮಾಡತೊಡಗಿದರು. ನಾಟಕ ನಟನೆ ಸಂಗೀತ ಬಿಟ್ಟು ಬದುಕುವದು ಅವರಿಗೆ ಅಸಾಧ್ಯವೆನಿಸತೊಡಗಿತು. ಒಂದು ಸಲ ಅವರ ಷಡ್ಡ ಭೀಮಭಟ್ಟರ ಮನೆಯ ಕಟ್ಟೆಯ ಮೇಲೆ ಏಕಾಗ್ರಚಿತ್ತರಾಗಿ ಕುಳಿತಿದ್ದರು. ಧಾರಾಕಾರ ಮಳೆ ಸುರಿಯುತ್ತಿತ್ತು. ರಾಯರಿಗೆ ಇದರ ಪರಿವೆಯೇ ಇರಲಿಲ್ಲ. ಈ ದೃಶ್ಯವನ್ನು ನೋಡಿದ ಭೀಮಭಟ್ಟರು ಗಾಬರಿಯಿಂದ "ಮಾಸ್ತರ ಏನ್ರಿ ಇದು?" ಎಂದು ಕೂಗಿದರು. ರಾಯರಿಗೆ ಥಟ್ಟನೆ ಎಚ್ಚರವಾಯಿತು. ಮುಂದಿದ್ದ ತಮ್ಮ ಮನೆಗೆ ಹೋಗಿ ತೊಯ್ದ ಬಟ್ಟೆಯನ್ನು ಬದಲಿಸಿಕೊಂಡು ಬಂದರು.[೨] ಈ ಘಟನೆಯಿಂದ ಭೀಮಭಟ್ಟರು ಯೋಚನೆಗೀಡಾದರು.

‘ವಾಮನರಾಯರಿಗೆ ಏನಾದರೂ ನೆರವು ನೀಡಬೇಕು. ಜಡಗೊಂಡ ಅವರ ಮನಸ್ಸು ಮತ್ತೆ ಚೇತರಿಸಿಕೊಳ್ಳಬೇಕು. ಅದಕ್ಕಾಗಿ ಅವರನ್ನು ರಂಗಚಟುವಟಿಕೆಗಳಲ್ಲಿ ತೊಡಗಿಸಬೇಕಾದುದು ಅನಿವಾರ್ಯ’ ಎಂಬ ವಿಚಾರ ಅವರಿಗೆ ಹೊಳೆಯಿತು.

ಭೀಮಭಟ್ಟರು ವಿಷಯವನ್ನು ಕೆಲವು ಹಿತೈಷಿಗಳೆದುರು ಪ್ರಸ್ತಾಪಿಸಿದರು. ಗೋಪಾಲಸಿಂಗ್, ಶೆಟ್ಟರ ಸೀನಪ್ಪಾ, ಲಕ್ಷೇಶ್ವರ ಭೀಮನಗೌಡರು ಮುಂತಾದವರೆಲ್ಲ ವಾಮನರಾಯರ ನೆರವಿಗೆ ಬಂದರು. ಇವರೆಲ್ಲ ಸೇರಿ ಸಾವಿರಾರು ರೂಪಾಯಿ ಸಂಗ್ರಹಿಸಿ ಕೊಟ್ಟರು. ಸ್ವಾಭಿಮಾನಿ ವಾಮನರಾಯರು ಈ ಹಣವನ್ನು ಸ್ವೀಕರಿಸುವಾಗ ಒಂದು ಕರಾರು ಹಾಕಿದರು. ‘ನನಗೆ ನೀವು ಕಾಣಿಕೆಯಾಗಿ ಕೊಟ್ಟರೆ ಈ ಹಣವನ್ನು ಮುಟ್ಟುವದಿಲ್ಲ. ಸಾಲವಾಗಿ ಕೊಟ್ಟರೆ ಮಾತ್ರ ತೆಗೆದುಕೊಳ್ಳುವೆ [೫] ಎಂದರು. ಹಿತೈಷಿಗಳು ಅದಕ್ಕೆ ಒಪ್ಪಿದರು.

**ಸ್ವಂತ ಕಂಪನಿ ಸಂಘಟನೆ:**

ಸಾಲವನ್ನು ಪಡೆದು ವಾಮನರಾಯರು ಬಂಕಾಪೂರದಿಂದ ಧಾರವಾಡಕ್ಕೆ ಬರುತ್ತಾರೆ. ಆತ್ಮೀಯರಾದ ಮಧ್ವರಾವ ಬಳ್ಳಾರಿಯವರ ಎದುರು ತಮ್ಮ ಯೋಜನೆಯನ್ನು ಹೇಳುತ್ತಾರೆ. ಅವರ ಸಹಾಯದಿಂದ ಧಾರವಾಡದ ‘ಜಠಾರ’ ಬ್ಯಾಂಕಿನಲ್ಲಿ ಒಂದು ಸಾವಿರ ರೂಪಾಯಿ ಸಾಲ ಪಡೆಯುತ್ತಾರೆ. ಒಬ್ಬರೇ ಮುಂಬಯಿಗೆ ಹೋಗಿ ಒಂದು ವಾರವಿದ್ದು, ನಾಟಕ ಕಂಪನಿಗೆ ಬೇಕಾಗುವ ರಂಗಸಲಕರಣೆಗಳನ್ನು ಖರೀದಿಸುತ್ತಾರೆ. ಅವನ್ನೆಲ್ಲ ರಾಣೆಬೆನ್ನೂರಿಗೆ ಕಳುಹಿಸಬೇಕೆಂದು ವ್ಯಾಪಾರಿಯೊಬ್ಬರಿಗೆ ಹೇಳಿ ಊರಿಗೆ ಮರಳುತ್ತಾರೆ.[೬]

ರಂಗ ಸಲಕರಣೆಗಳು ರೇಲ್ವೆ ಮೂಲಕ ರಾಣೆಬೆನ್ನೂರಿಗೆ ತಲುಪಿದವು. ಪರದೆಗಳನ್ನು ವೇಷಭೂಷಣಗಳನ್ನು ತಯಾರಿಸುವ ಕೆಲಸ ಭರದಿಂದ ಸಾಗಿತು. ನಟರ ಹುಡುಕಾಟವು ನಡೆಯಿತು. ಹೀಗೆ ಸಿದ್ಧತೆ ಪೂರ್ಣವಾಗುತ್ತಿದ್ದಂತೆ ನಾಟಕದ ತಾಲೀಮು ಪ್ರಾರಂಭವಾಯಿತು. ಆರಂಭದಲ್ಲಿ ವಾಮನರಾಯರು ಹೊಸ ನಾಟಕಗಳನ್ನು ಆಡುವ ಪ್ರಯತ್ನ ಮಾಡಲಿಲ್ಲ. ಅದಕ್ಕೆ ಬೇಕಾಗುವಷ್ಟು ವೆಚ್ಚವನ್ನು ಮಾಡುವ ಸಾಮರ್ಥ್ಯ ಕೂಡ ಅವರಿಗಿರಲಿಲ್ಲ. ಶಿರಹಟ್ಟಿ ಕಂಪನಿಯಲ್ಲಿದ್ದಾಗ ತಾವು ಅಭಿನಯಿಸುತ್ತಿದ್ದ ನಾಟಕಗಳನ್ನೇ ಪ್ರದರ್ಶನಕ್ಕೆ ಎತ್ತಿಕೊಂಡರು. ಪ್ರಮುಖ ಪಾತ್ರಗಳನ್ನುಳಿದು ಪೋಷಕ ಪಾತ್ರಗಳಿಗಾಗಿ ಸ್ಥಳೀಯ ಕಲಾವಿದರನ್ನು ಸೇರಿಸಿಕೊಂಡರು. ರಾಣೆಬೆನ್ನೂರಿನ ಕಲಾಭಿಮಾನಿಗಳು ರಾಯರ ಬೆಂಬಲಕ್ಕೆ ನಿಂತರು. ನಾಟಕದ ಪ್ರಚಾರ ನಡೆಯಿತು. ಆಗ ನಾಟಕ ಕಂಪನಿಗೆ ಯಾವ ಹೆಸರಿಡಬೇಕೆಂಬ ಚರ್ಚೆ ಶುರುವಾಯಿತು. ಧಾರವಾಡದ ಜಠಾರ ಭಾಸ್ಕರರಾಯರು ‘ವಿಶ್ವಗುಣಾದರ್ಶ ನಾಟಕ ಮಂಡಳಿ’ ಎಂಬ ಹೆಸರನ್ನು ಸೂಚಿಸಿದರು.[೭] ವಾಮನರಾಯರಿಗೆ ಅದು ಮೆಚ್ಚುಗೆಯಾಯಿತು. ಕೊನೆಗೆ ೧೯೧೪ ನೆಯ ಜೂನ ತಿಂಗಳ ಶುಭದಿನದಂದು ನಾಟಕ ಕಂಪನಿ ತಲೆಯೆತ್ತಿ ನಿಂತಿತು. ‘ಕವಿರತ್ನ ಕಾಳಿದಾಸ’ ನಾಟಕದ ಮೂಲಕ ವಾಮನರಾಯರ ಸ್ವಂತ ಕಂಪನಿ ವಿಶ್ವಗುಣಾದರ್ಶದ ರಂಗ ಸೇವೆ

ಪ್ರಾರಂಭವಾಯಿತು. ವಾಮನರಾಯರಿಗೆ ಕೀರ್ತಿ ತಂದು ಕೊಟ್ಟ ನಾಟಕವಿದು. 'ಕುರುಬನಿಗೆ ಕಾಳಿಕಾದೇವಿಯ ವರಪ್ರಸಾದ' ಚೇಟಿ ಭವನ್ನಿಖಿಲ ಕೋಟೀ' ಎಂಬ ಹಾಡನ್ನು ಯಮನರಾಗದಲ್ಲಿ ಹಾಡಿದರೆ ಪ್ರೇಕ್ಷಕರು ಐದಾರು ಬಾರಿ "ಒನ್ಸಮೋರ್' ಹೇಳಿ ಮತ್ತೆ ಮತ್ತೆ ಕೇಳಲು ಕಾತುರರಾಗುತ್ತಿದ್ದರಂತೆ. ಇದೇ ನಾಟಕದಲ್ಲಿ 'ಪ್ರಿಯ ಸಖನೇ ಪೋದೆಯಾ' ಹಾಡಿಗಂತೂ ಕಿವಿಗಡಚಿಕ್ಕುವ ಚಪ್ಪಾಳೆ, ಕಾಳಿದಾಸರಾಗಿ ವಾಮನರಾಯರ ಗಾನಾಭಿನಯವೆಂದರೆ ಪ್ರೇಕ್ಷಕ ವೃಂದಕ್ಕೆ ರಸದೂಟವಿದ್ದಂತೆ. ಈ ನಾಟಕದಿಂದಲೇ ಮಂಡಳಿಯ ಜಯಭೇರಿ ಪ್ರಾರಂಭವಾಯಿತು. ಹುಬ್ಬಳ್ಳಿ ಸಂಗಪ್ಪನ ಭೋಜರಾಜನ ಪಾತ್ರ, ಬಸವನಕೊಪ್ಪ ಗಿರಿಗೌಡರ ಮುಖ್ಯ ಸ್ತ್ರೀ ಪಾತ್ರಗಳೂ ಅಭಿನಯ ಶ್ರೇಷ್ಠತೆಗೆ ಹೆಸರಾಗಿದ್ದವು. ಈ ಎಲ್ಲ ವಿವರಗಳನ್ನು ವಾಮನರಾಯರಿಗೆ ಪರಿಚಿತರಿದ್ದ ಎನ್ಕೆ ಕುಲಕರ್ಣಿ ಅವರು, ನಾಡಿಗೇರ ಕೃಷ್ಣರಾಯರು, ತಮ್ಮ ಕೃತಿಗಳಲ್ಲಿ ದಾಖಲಿಸಿದ್ದಾರೆ.

'ಕವಿರತ್ನ ಕಾಳಿದಾಸ' ನಾಟಕದ ನಂತರ 'ಯುವತೀ ವಿಜಯ'ವೆಂಬ ನಾಟಕವು ವಿವೇಕ ವಿಜಯ' ಎಂಬ ಹೆಸರಿನಿಂದ ಪ್ರಯೋಗಕ್ಕೆ ಬಂದಿತು. ಆ ಮೇಲೆ 'ಪದ್ಮಾವತಿ ಪರಿಣಯ' ಪ್ರಯೋಗವಾಯಿತು. ರಾಣೆಬೆನ್ನೂರಿನ ಎರಡು ತಿಂಗಳ ವಾಸ್ತವ್ಯದಲ್ಲಿ ನಿರೀಕ್ಷಿಸಿದಷ್ಟು ಉತ್ಪನ್ನವಾಗಲಿಲ್ಲ. ಕಂಪನಿ ಸಲುವಾಗಿ ಮಾಡಿದ್ದ ಸಾಲವೂ ತೀರಲಿಲ್ಲ. ಮುಂದಿನ ಪ್ರವಾಸಕ್ಕೆ ಹಣ ಬೇಕಾಗಿತ್ತು. ವಾಮನರಾಯರು ಏನು ಮಾಡುವದು? ಎಂದು ಚಿಂತಿಸುತ್ತಿದ್ದಾಗ ರಾಣೆಬೆನ್ನೂರಿನ ಕಲಾವಿದ ಮಲ್ಲಪ್ಪನವರು ತಮ್ಮ ಕೈಯಲ್ಲಿದ್ದ ಬಂಗಾರದ ಕಡಗವನ್ನು ರಾಯರ ಕೈಗೆ ಕೊಟ್ಟು ಮುಂದಿನ ಕ್ಯಾಂಪನ್ನು ಬೆಂಗಳೂರಿಗೆ ಬದಲಾಯಿಸಲು ಕೋರಿದರು. ವಾಮನರಾಯರು ಬೆಂಗಳೂರಿಗೆ ಹೋಗುವ ಮಾರ್ಗ ಮಧ್ಯದಲ್ಲಿ ದಾವಣಗೇರೆಯಲ್ಲಿ ಮುಕ್ಕಾಂ ಮಾಡಿದರು. ಆಡುತ್ತಿದ್ದ ನಾಟಕಗಳನ್ನೇ ಆಡಿ ಪ್ರೇಕ್ಷಕರ ಪ್ರತಿಕ್ರಿಯೆ ಗಮನಿಸಿದರು. ಅಲ್ಲಿಯೂ ಲಾಭವಾಗಲಿಲ್ಲ. ಮತ್ತೆ ಸಾಲಕ್ಕೆ ಕೈಚಾಚಿದರು. ಖರ್ಚು – ವೆಚ್ಚ ಹೊಂದಾಣಿಕೆಯಾಗಲಿಲ್ಲ. ಕಲಾವಿದರ ಒತ್ತಾಸೆಯಿಂದ ಕಂಪನಿಯನ್ನು ಬೆಂಗಳೂರಿಗೆ ಸಾಗಿಸಿದರು.

**ಬೆಂಗಳೂರಿನಲ್ಲಿ ಪ್ರೋತ್ಸಾಹ:**

ವಾಮನರಾಯರಿಗೆ ಬೆಂಗಳೂರಿನ ಪರಿಚಯವಿತ್ತು. ಶಿರಹಟ್ಟಿ ಕಂಪನಿಯಲ್ಲಿದ್ದಾಗ ಅಲ್ಲಿ ಸಾಕಷ್ಟು ನಾಟಕಗಳನ್ನು ಆಡಿದ್ದರು. ಅಲ್ಲಿಯ ಪ್ರೇಕ್ಷಕರ ನಾಡಿಮಿಡಿತ ತಿಳಿದಿದ್ದರು. 'ಕವಿರತ್ನ ಕಾಳಿದಾಸ' ನಾಟಕದ ಮೂಲಕ ಮತ್ತೆ ಅಲ್ಲಿಯ ಪ್ರೇಕ್ಷಕರನ್ನು ರಂಗದತ್ತ ಸೆಳೆಯಲು ಮುಂದಾದರು. ರಾಯರ ಎಣಿಕೆ ತಪ್ಪಾಗಲಿಲ್ಲ. ನಾಟಕಕ್ಕೆ ಒಳ್ಳೆಯ ಪ್ರೋತ್ಸಾಹ ಕಂಡು ಬಂದಿತು. 'ಕವಿರತ್ನ ಕಾಳಿದಾಸ' ನಾಟಕ ಬೆಂಗಳೂರಿನ ರಸಿಕರಿಗೆ ಮತ್ತೆ ಮೋಡಿ ಮಾಡಿತು. ಅದರ ಅನೇಕ ಪ್ರಯೋಗಗಳು ಜನದಟ್ಟಣೆಯಲ್ಲಿ ಸಾಗಿದವು. ಪ್ರೇಕ್ಷಕರು ಸ್ವಲ್ಪ ಕಡಿಮೆಯಾದಾಗ 'ವಿವೇಕವಿಜಯ' ನಾಟಕರಂಗವನ್ನಲಂಕರಿಸಿತು. ಅದು ಕೂಡ ಜನ ಮೆಚ್ಚುಗೆಯನ್ನು ಪಡೆಯಿತು. ಈ ಎರಡು ನಾಟಕಗಳು ಕಂಪನಿಯನ್ನು ಆರ್ಥಿಕವಾಗಿ

ಬಲಪಡಿಸಿದವು. ರಾಯರ ಪ್ರಯತ್ನ, ಪ್ರತಿಭೆ, ಪರಿಶ್ರಮಕ್ಕೆ ಬೆಂಗಳೂರು ಒಳ್ಳೆಯ ರೀತಿಯಿಂದಲೇ ಸ್ಪಂದಿಸಿತು. ಅದೇ ಉತ್ಸಾಹದಲ್ಲಿ ರಾಯರು ಕೂಡಾ ದಿನದಿಂದ ದಿನಕ್ಕೆ ಅತ್ಯುತ್ತಮ ರೀತಿಯಲ್ಲಿ ಅಭಿನಯಿಸಿ ಜನರ ಮೆಚ್ಚುಗೆಗೆ ಪಾತ್ರರಾಗುತ್ತಿದ್ದರು. ಬೆಂಗಳೂರಿನಲ್ಲಿಯೇ ಜರುಗಿದ ಒಂದು ಘಟನೆ ಇಲ್ಲಿ ಉಲ್ಲೇಖನೀಯ.

ವಾಮನರಾಯರ ಆಪ್ತ ಸ್ನೇಹಿತರಾದ ಬಂಕಾಪೂರದ ದತ್ತಂಭಟ್ಟರು ತಮ್ಮ ಆರೋಗ್ಯ ತಪಾಸಣೆಗೆ ಬೆಂಗಳೂರಿಗೆ ಬಂದಿದ್ದರು. ಕಾಯಿಲೆ ಹೆಚ್ಚಾಗಿ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ದಾಖಲಾಗಿದ್ದರು. ಬಿಡುವು ಮಾಡಿಕೊಂಡು ಪ್ರತಿದಿನವೂ ವಾಮನರಾಯರು ಮಿತ್ರರನ್ನು ಮಾತನಾಡಿಸಿಕೊಂಡು ಹೋಗುತ್ತಿದ್ದರು. ಅಂದು ದತ್ತಂಭಟ್ಟರಿಗೆ ಆರೋಗ್ಯದಲ್ಲಿ ಏರು-ಪೇರಾಗಿ ಅಸುನೀಗಿದರು. ಆಗ ರಾತ್ರಿ ಎಂಟು ಗಂಟೆ. ಏನು ಮಾಡುವುದು ಅಂದೇ ನಾಟಕವಿದೆ. ಅವರ ನಿಧನಕ್ಕೆ ಮಮ್ಮಲ ಮರುಗಿದರು. ಅವರ ಅಂತ್ಯಕ್ರಿಯೆಯ ಜವಾಬ್ದಾರಿಯನ್ನು ತಾವೇ ಹೊತ್ತುಕೊಂಡು, ನಟ ಕೇಶವಭಟ್ಟರು, ಇತರ ಬ್ರಾಹ್ಮಣರು ಮತ್ತು ಕೆಲಸಗಾರರೊಂದಿಗೆ ಶವವನ್ನು ತೆಗೆದುಕೊಂಡು ಹೋಗಿ ಅಂತ್ಯಕ್ರಿಯಾವಿಧಿಗಳನ್ನು ಮುಗಿಸಿದರು. ಆಗ ರಾತ್ರಿ ೧೧ ಗಂಟೆ. ತಕ್ಷಣ ಮೈಮೇಲೆ ನೀರು ಹಾಕಿಕೊಂಡವರೆ ನೇರವಾಗಿ ಗ್ರೀನ ರೂಮಿಗೆ ಹೋಗಿ ಬಣ್ಣಹಚ್ಚಿಕೊಂಡು ದಿನ ನಿತ್ಯದಂತೆ, ಯಥಾರೀತಿಯಲ್ಲಿ ಲವಲವಿಕೆಯಿಂದ ಅಭಿನಯಿಸಿದರು' ಇದನ್ನು ನೆನಪಿಸಿಕೊಂಡಾಗ ರಾಯರಿಗಿದ್ದ ರಂಗಭೂಮಿಯ ಬದ್ಧತೆ ಗೊತ್ತಾಗುತ್ತದೆ.[೬]

ವಿಶ್ವಗುಣಾದರ್ಶ ಮಂಡಳಿಯ ನಾಟಕಗಳ ಮುಖ್ಯ ಆಕರ್ಷಣೆಯೆಂದರೆ ಸಂಗೀತ. ಮಾಲೀಕರಾದ ರಾಯರು ಸ್ವತ: ಗಾಯಕ ನಟರು, ಮರಾಠಿ ಚೀಜಗಳನ್ನು ಕನ್ನಡದಲ್ಲಿ ರಚಿಸಿ ಶಾಸ್ತ್ರೀಯ ನೆಲೆಯಲ್ಲಿ ಸುಶ್ರಾವ್ಯವಾಗಿ ಹಾಡುತ್ತಿದ್ದರು. ಕಂಪನಿಯ ನಟರೂ ಇವರ ಮಾರ್ಗದರ್ಶನದಲ್ಲಿ ಪಳಗಿದ್ದರು. ಹೀಗಾಗಿ ಇವರ ನಾಟಕಗಳು ಸಾಗ್ರ-ಸಂಗೀತ ನಾಟಕಗಳಾಗಿ, ಜನಮನ ಸೂರೆಗೊಳ್ಳುತ್ತಿದ್ದವು. ಬೆಂಗಳೂರಿನ ಪ್ರೇಕ್ಷಕರಿಗೆ ವಿಶ್ವಗುಣಾದರ್ಶ ಮಂಡಳಿಯ ಸಂಗೀತ, ವಿಶಿಷ್ಟ ಅನುಭವವನ್ನು ಕೊಡುತ್ತಿತ್ತು. ಅದಕ್ಕೆ ಕಾರಣ ಕರ್ನಾಟಕೀ ಪದ್ಧತಿಯ ಸಂಗೀತವನ್ನು ಕೇಳಿದ ಅವರಿಗೆ ಇಲ್ಲಿ 'ಹಿಂದೂಸ್ತಾನಿ' ಸಂಗೀತದ ಸವಿ ಬೇರೆಯದ್ದೇ ಆದ ಆನಂದವನ್ನು ನೀಡುತ್ತಿತ್ತು. ಹೀಗಾಗಿ ಕಂಪನಿಯ ನಾಟಕಗಳಿಗೆ ಅತೀ ಹೆಚ್ಚು ಪ್ರೋತ್ಸಾಹ ಸಿಕ್ಕಿತು. ನಾಲ್ಕು ತಿಂಗಳ ಅವಧಿಯಲ್ಲಿ ಕಂಪನಿಗೆ ಸಾಕಷ್ಟು ಲಾಭವಾಯಿತು. ಕಷ್ಟಕಾಲದಲ್ಲಿ ಆಪದ್ಬಾಂಧವರಾಗಿ ಬಂದ ಬಂಕಾಪೂರದ ಗೆಳೆಯರ ಸಾಲವೂ ತೀರಿತು. ಜೊತೆಗೆ ರಾಣೆಬೆನ್ನೂರಿನ ಮಲ್ಲಪ್ಪನವರ ಬಂಗಾರದ ಕಡಗವನ್ನು ತುಂಬಾ ಕೃತಜ್ಞತೆಯಿಂದ ಮರಳಿಸಿದರು.

ಅಂತೂ ಬೆಂಗಳೂರು ಕ್ಯಾಂಪ್ ವಿಶ್ವಗುಣಾದರ್ಶ ಕಂಪನಿಗೆ ಸಾಕಷ್ಟು ಉತ್ತೇಜನ ನೀಡಿತು. ವಾಮನರಾಯರು ಮುಂದಿನ ಸಂಚಾರಕ್ಕೆ ಬೇಕಾಗುವ ಅನುಕೂಲತೆಗಳನ್ನು ಮಾಡಿಕೊಂಡರು. ಇದೇ ಉತ್ಸಾಹದಲ್ಲಿ ಕಂಪನಿಗಾಗಿ 'ವಿದ್ಯಾಸಾಧನೆ' ಅರ್ಥಾತ್ 'ಕಚದೇವಯಾನಿ' ನಾಟಕವನ್ನು ರಚಿಸಿದರು. ಇದು

ಮೂಲ ಮರಾಠಿ ನಾಟಕ. ರಾಯರಿಗೆ ಮರಾಠಿ ಚೆನ್ನಾಗಿ ಬರುತ್ತಿತ್ತು. ಮರಾಠಿ ರಂಗಭೂಮಿಯ ಪರಿಚಯವೂ ಇತ್ತು. ಈ ಹಿನ್ನಲೆಯಿಂದ 'ವಿದ್ಯಾಸಾಧನೆ' ನಾಟಕ ಚೆನ್ನಾಗಿಯೇ ರೂಪುಗೊಂಡು ರಂಗದ ಮೇಲೆ, ಯಶಸ್ವಿಯಾಗಿ ನಡೆಯಿತು. ಆದರೆ ಒಂದು ಸಮಸ್ಯೆ ಕಾಕತಾಳೀಯವೆನ್ನುವಂತೆ ಕಾಡತೊಡಗಿತು. ಅದೇನೆಂದರೆ ಈ ನಾಟಕ ಆಡುವಾಗಲೆಲ್ಲಾ ರಾಯರ ಆರೋಗ್ಯ ಕೆಡುತ್ತಿತ್ತು. ಈ ಕುರಿತು ಜ್ಯೋತಿಷಿಗಳನ್ನು ಕೇಳಿದಾಗ 'ವಿದ್ಯಾಸಾಧನೆ' ನಾಟಕ ವಿಶ್ವಗುಣಾದರ್ಶ ಕಂಪನಿಗೆ ಹೊಂದುವುದಿಲ್ಲ ಎಂದು ಹೇಳಿದರಂತೆ[೭] ಅಂದಿನಿಂದ ರಾಯರು ಈ ನಾಟಕ ಆಡುವದನ್ನೇ ನಿಲ್ಲಿಸಿದರು.

**ತುಮಕೂರು ಕ್ಯಾಂಪ:**

ವಿಶ್ವಗುಣಾದರ್ಶದ ತಿರುಗಾಟ ತುಮಕೂರಿಗೆ ಬಂದಿತು. ಅಲ್ಲಿಯ ವಿಶೇಷ ಸಾಧನೆ ಎಂದರೆ ಕರ್ನಾಟಕೀ ಧಾಟಿಯ ಕೆಲವು ಹಾಡುಗಳು ನಾಟಕಗಳಲ್ಲಿ ಸೇರಿದವು. ಇಲ್ಲಿ ವಾಮನರಾಯರಿಗೆ ಮೈಸೂರು ವಾಸುದೇವಾಚಾರ್ಯರ ಪರಿಚಯವಾಯಿತು. ವಾಸುದೇವಾಚಾರ್ಯರು ಕರ್ನಾಟಕೀ ಶೈಲಿಯ ಖ್ಯಾತ ವಾಗ್ಗೇಯಕಾರರಾಗಿದ್ದರು. ರಾಯರ ಹಾಡುಗಾರಿಕೆಗೆ ಮಾರುಹೋಗಿ ಅವರಿಗೆ ಕರ್ನಾಟಕೀ ಧಾಟಿಯ ಕೃತಿಗಳನ್ನು ಹೇಳಿಕೊಟ್ಟರು.[೮] "ಕೃಷ್ಣಾರ್ಜುನ ಯುದ್ಧ" ನಾಟಕದಲ್ಲಿ ಗಾಲವನ ಪಾತ್ರಕ್ಕೆ ಹೊಂದುವಂತೆ "ಶಂಭೋ ಮಹಾದೇವ ಶಂಕರ ಗಿರಿಜಾರಮಣ' ಎಂಬ ಮೂಲ ಕೃತಿಯನ್ನು ಒದಗಿಸಿದರು ಅದಕ್ಕೆ ಅನುಗುಣವಾಗಿ ವಾಮನರಾಯರು.

**'ಗಂಗೇ ಮಹಾದೇವಿ**

**ಮಂಗಳಕರ ಶುಭಚರಿತೇ ॥**

**ಗಂಗೇ ಮಹಾದೇವಿ ಅಂಗಜಪಿತಪದ ಸಂಭವೇ॥**

**ಶೃಂಗಾರ ತರಂಗ ಶೋಭೆ ತುಂಬ ವಿಮಲ ಚಾರುಕೀರ್ತೆ ॥**

ಎಂಬ ರಂಗಗೀತವನ್ನು ರಚಿಸಿದರು.

ಇದೇ ಕ್ಯಾಂಪಿನಲ್ಲಿ ವಾಮನರಾಯರು ಕರ್ನಾಟಕೀ ಶೈಲಿಯ ಸಂಗೀತವನ್ನು ವಾಸುದೇವಾಚಾರ್ಯರಿಂದ ಕಲಿತುಕೊಂಡರು. ಹಿಂದುಸ್ತಾನಿ ರಾಗಧಾರೆಗೆ ಕರ್ನಾಟಕೀಯ ಮೆರಗು ಸೇರಿಕೊಂಡಿತು. ಇದರಿಂದ ಕಂಪನಿಯ ನಾಟಕಗಳ ಆಕರ್ಷಣೆ ಇನ್ನೂ ಹೆಚ್ಚಾಯಿತು. ಇಲ್ಲಿಂದ ಕಂಪನಿ ಮೈಸೂರು ಮುಕ್ಕಾಂ ಮಾಡಿತು. ಮೈಸೂರು ಸಂಗೀತ ರಸಿಕರ ನಗರವದು. ಅಲ್ಲಿಯೂ 'ವಿವೇಕವಿಜಯ' 'ಕವಿರತ್ನಕಾಳಿದಾಸ' ನಾಟಕಗಳು ಚೆನ್ನಾಗಿ ನಡೆದವು. ಇದೇ ಸಂದರ್ಭದಲ್ಲಿ ವಾಮನರಾಯರ ಪತ್ನಿ ಸೌ. ಕಾಶೀಬಾಯಿಯವರು ಅನಾರೋಗ್ಯದಿಂದ ತೊಂದರೆಗೀಡಾದರು. ಮೂರು ತಿಂಗಳು ಕಾಲ ಹಾಸಿಗೆ ಬಿಟ್ಟು ಏಳಲಿಲ್ಲ. ಆಗ ವಾಮನರಾಯರಿಗೆ ತುಂಬಾ ಭಯವಾಗಿತ್ತು. ಕಂಪನಿಯ ನಟರೆಲ್ಲ ವಿಶೇಷವಾಗಿ

ಕೇಶವಭಟ್ಟ ಮಿಶ್ರಿಕೋಟಿ, ವೆಂಕಣ್ಣ ಬಂಕಾಪುರ ಅವರು ವಾಮನರಾಯರಿಗೆ ಧೈರ್ಯ ಕೊಟ್ಟು, ಅವರ ಪತ್ನಿಯ ಶೂಶ್ರೂಷೆ ಮಾಡಿದರು. ಕ್ರಮೇಣ ಅವರು ಚೇತರಿಸಿಕೊಂಡ ಮೇಲೆ, ವಿಶ್ವಗುಣಾದರ್ಶ ಕಂಪನಿ ದೊಡ್ಡ ಅಪಾಯದಿಂದ ಪಾರಾದಂತಾಯಿತು. ಇಲ್ಲಿಂದ ಕಂಪನಿ ಬಳ್ಳಾರಿಯತ್ತ ಪ್ರವಾಸ ಹೊರಟಿತು.

**ಬಳ್ಳಾರಿಯಲ್ಲಿ ಲಂಕಾದಹನ:**

೧೯೧೭ರ ಕಾಲ, 'ಲಂಕಾದಹನ' ನಾಟಕ ಆಗ ತುಂಬಾ ಪ್ರಚಾರದಲ್ಲಿತ್ತು. ಗೋವಿಂದಸ್ವಾಮಿ ನಾಯ್ಕರ ಎಂಬುವವರ ತಮಿಳು ನಾಟಕ ಕಂಪನಿಯು ಈ ನಾಟಕವನ್ನು ಪ್ರದರ್ಶಿಸುತ್ತಿತ್ತು. ಈ ಕಂಪನಿಯಲ್ಲಿ ಪೇಂಟರನಾಗಿದ್ದ ಅಳಗಿರಿಸ್ವಾಮಿ ಎಂಬುವರು ವಾಮನರಾಯರ ಕಂಪನಿಗೆ ಬಂದನು. ರಾಯರು ಇವರ ನೆರವಿನಿಂದ 'ಲಂಕಾದಹನ'ವನ್ನು ಕನ್ನಡಕ್ಕೆ ಅನುವಾದಿಸಿದರು. ತಮಿಳು ನಾಟಕದಲ್ಲಿಯ ಸನ್ನಿವೇಶ, ಸಂಭಾಷಣೆಗಳನ್ನು ಚಾಚೂತಪ್ಪದೆ ಯಥಾವತ್ತಾಗಿ ಭಾಷಾಂತರಿಸಿದರು. ಅಳಗಿರಿ ಸ್ವಾಮಿಯ ನಿರ್ದೇಶನದಲ್ಲಿ ಈ ನಾಟಕವನ್ನು ಕೂಡಿಸಿದರು. ಬಳ್ಳಾರಿ ಕ್ಯಾಂಪಿನಲ್ಲಿಯೆ ಇದು ರಂಗವನ್ನಲಂಕರಿಸಿತು.[೯]

ರಾಮನ ಪಾತ್ರವನ್ನು ಸ್ವತ: ವಾಮನರಾಯರು ಅಭಿನಯಿಸುತ್ತಿದ್ದರು. ಸೀತೆಯ ಪಾತ್ರದಲ್ಲಿ ಗಿರಿಗೌಡ, ಹನುಮಂತನ ಪಾತ್ರದಲ್ಲಿ ರಾಣೆಬೆನ್ನೂರು ಮಲ್ಲಪ್ಪ, ರಾಮನ ಪಾತ್ರದಲ್ಲಿ ಕೆಲವೊಮ್ಮೆ ಕೇಶವಭಟ್ಟ, ಲಕ್ಷ್ಮಣನ ಪಾತ್ರದಲ್ಲಿ ಹುಬ್ಬಳ್ಳಿ ನಾಗಪ್ಪ ಅತ್ಯುತ್ತಮವಾಗಿ ಅಭಿನಯಿಸುತ್ತಿದ್ದರು. ಬಳ್ಳಾರಿಯಲ್ಲಿ ಸತತ ಒಂದು ತಿಂಗಳು 'ಲಂಕಾದಹನ'ದ ಪ್ರಯೋಗ ನಡೆಯಿತು. ನಾಟಕದ ಹಾಡುಗಳು ಜನರ ಬಾಯಲ್ಲಿ ಕುಣಿದಾಡಿದವು.

**"ಅತೀ ಲಲಿತ ರೂಪ ಕುಲಶೀಲ ಕೋಮಲ**

**ವನಿತಾಮಣಿಯಳು ಸೀತಾ"**

ಎಂಬ ಹಾಡಂತೂ ತುಂಬಾ ಜನಪ್ರಿಯವಾಯಿತು. ರಾಯರ ಬಾಯಿಂದ ಹಾಡುಗಳನ್ನು ಕೇಳಲು ಜನರು ಕಿಕ್ಕಿರಿದು ಸೇರುತ್ತಿದ್ದರು. 'ಲಂಕಾದಹನ'ದಿಂದ ವಿಶ್ವಗುಣಾದರ್ಶ ಕಂಪನಿಗೆ ಸಾಕಷ್ಟು ಲಾಭವಾಯಿತು. ವಾಮನರಾಯರು ಮಾರುತಿಯ ಭಕ್ತರಾಗಿದ್ದರು. ನಾಟಕದ ಗೆಲುವಿನ ಕುರಿತು ಮಾತನಾಡುವಾಗ 'ಮಾರುತಿ ಮುಖ್ಯಪ್ರಾಣನ ಅನುಗ್ರಹ' ಎಂದು ಗೆಳೆಯರಿಗೆ ಹೇಳುತ್ತಿದ್ದರಂತೆ.[೧೦]

ಬಳ್ಳಾರಿ ಕ್ಯಾಂಪ್ ಮುಗಿಸಿಕೊಂಡು ಕಂಪನಿ ಆದವಾನಿಗೆ ಹೋಗುವಾಗ ವಾಮನರಾಯರು ಸಂಸಾರ ಸಮೇತ ಮಂತ್ರಾಲಯದಲ್ಲಿ ತಂಗಿದ್ದರು. ಅಲ್ಲಿ ರಾಘವೇಂದ್ರ ಸ್ವಾಮಿಗಳಿಗೆ ಪೂಜೆ ಸಲ್ಲಿಸಿ ಅಣುಮಂತ್ರಾಲಯಕ್ಕೆ ಹೋದರು. ರಾಘವೇಂದ್ರ ಸ್ವಾಮಿಗಳ ದರ್ಶನದಿಂದ ವಾಮನರಾಯರು ಪುನೀತರಾದರು. ಅಲ್ಲಿ ನಡೆಯುತ್ತಿದ್ದ ಅನ್ನಸಂತರ್ಪಣೆಗೆ ಕಾಣಿಕೆ ಸಲ್ಲಿಸಬಯಸಿದರು. ಆಗ ಛತ್ರದ ಮೇಲ್ವಿಚಾರಕರು ಪಾತ್ರೆಗಳ ಕೊರತೆ ಇದೆ. ಕೊಟ್ಟರೆ ಅನುಕೂಲವಾಗುವದು ಎಂದರು. ವಾಮನರಾಯರು ಆದವಾನಿ ಕ್ಯಾಂಪಿನಲ್ಲಿ ಕೂಡಿದ ಒಂದು ನಾಟಕದ ಉತ್ಪನ್ನವನ್ನು ಅಣುಮಂತ್ರಾಲಯದ ಅನ್ನಛತ್ರಕ್ಕೆ

ನೀಡಿದರು. ಆದವಾನಿ ಮಂತ್ರಾಲಯಕ್ಕೆ ಸಮೀಪವಿತ್ತು. ಈ ಕಾರಣದಿಂದಲೋ ಏನೋ? 'ಲಂಕಾದಹನ' ನಾಟಕ ತುಂಬಾ ಚೆನ್ನಾಗಿ ನಡೆಯಿತು. ಆ ಸಂದರ್ಭದಲ್ಲಿಯ ಕಂಪನಿಯ ಧಾರ್ಮಿಕ ವಾತಾವರಣವನ್ನು ಎನ್ಕೆಯವರು ಹೀಗೆ ಬಣ್ಣಿಸುತ್ತಾರೆ.

"ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿಯ ರಂಗಭೂಮಿಯ ಚೌಕಟ್ಟಿನ ಒಂದು ಬದಿಗೆ ರಾಘವೇಂದ್ರ ಸ್ವಾಮಿಗಳ ಚಿತ್ರ, ಇನ್ನೊಂದು ಬದಿಗೆ ವಾಮನರಾಯರ ಚಿತ್ರ ಕಂಗೊಳಿಸಬೇಕು. ನಾಟಕದ ಪ್ರಾರಂಭದ ಹೊತ್ತಿಗೆ ಧೂಪ, ಗುಗ್ಗಳದ ಸುವಾಸನೆಯೊಂದಿಗೆ ರಾಯರ ಚಿತ್ರಕ್ಕೆ ಹೂ–ಹಾರ ಹಾಕಿ ಆರತಿ ಬೆಳಗಲಾಗುತ್ತಿತ್ತು. ವಿಂಗಿನಲ್ಲೇ ಕಾಯಿ ಒಡೆದು ಪ್ರಸಾದವನ್ನು ಹಂಚುತ್ತಿದ್ದರು. ಗಾಳಿಗೆ ಹೊಯ್ದಾಡುವ ಅಂಕಪರದೆ, ಅದರ ಸಂದಿನಿಂದ ಹೊರಹೊಮ್ಮುವ ಸುವಾಸಿಕ ಧೂಪ, ಹೊರಗೆ ಬ್ಯಾಂಡಿನ ಸಪ್ಪಳ, ಎರಡು ಬೆಲ್ಲುಗಳಾಗಿ ಪೇಟಿ ತಬಲಾವಾದಕರು ಮೆಲ್ಲನೆ ಬಂದು ಶ್ರುತಿಪಡಿಸುವುದಕ್ಕೆ ಪ್ರಾರಂಭ ಮಾಡಿದ ಕೂಡಲೇ ಇನ್ನೇನು ನಾಟಕ ಆರಂಭವಾಗುತ್ತದೆ ಎಂಬ ಉತ್ಸಾಹದ ಊರ್ಮಿ ಮೈಯೊಳಗೆ ಚಿಮ್ಮಿ ಬರುತ್ತಿತ್ತು. ಮೂರನೆಯ ಗಂಟೆಯೂ ಬಾರಿಸಿ 'ವಾರಿಧಿಶಯನಾ' ಎಂಬ ಹಿಂಡೋಲ ರಾಗದ ನಾಂದಿಗೀತದ ಧಾಟಿಯನ್ನು ಪೇಟಿಯಲ್ಲಿ ನುಡಿಸತೊಡಗುತ್ತಲೇ ಅಂಕಪರದೆ ಸುರುಳಿ ಸುತ್ತಿಕೊಳ್ಳುತ್ತಲೇ ಮನಸ್ಸಿನಲ್ಲಿ ತೆರೆಯ ಹಿಂದಿನ ಲವಲವಿಕೆಯಲ್ಲಾ ಪ್ರಕಟಗೊಳ್ಳುತ್ತಿತ್ತು."[೧೧]

'ಲಂಕಾದಹನ'ದ ಯಶಸ್ಸಿನಿಂದ ಸ್ಫೂರ್ತಿಗೊಂಡ ರಾಯರು ಅದೇ ಜಾಡಿನಲ್ಲಿ 'ರಾವಣವಧೆ' ನಾಟಕದ ರಚನೆಗೆ ತೊಡಗಿದರು. 'ಲಂಕಾದಹನ'ದ ಮುಂದಿನ ಕಥೆಯನ್ನೇ ಇದಕ್ಕೆ ವಸ್ತು ಮಾಡಿಕೊಂಡರು. ಅಳಸಿಂಗರಾರ್ಯನ ಸಹಾಯದಿಂದ ರಾಮಾಯಣದ ಸಂಪುಟಗಳನ್ನು ಅಭ್ಯಾಸ ಮಾಡಿದರು. ಧಾರವಾಡದಲ್ಲಿ ಎರಡು ತಿಂಗಳು ಇದ್ದು, ನಾಟಕವನ್ನು ಪೂರ್ಣಗೊಳಿಸಿದರು. ಲಂಕಾದಹನದ ಕಲಾವಿದರೇ ಇಲ್ಲಿಯೂ ಅಭಿನಯಿಸತೊಡಗಿದರು. ಈ ನಾಟಕದ ಅನೇಕ ದೃಶ್ಯಗಳು ಚಿತ್ತಾಕರ್ಷಕವಾಗಿದ್ದವು. ಬಳ್ಳಾರಿಯಲ್ಲಿ ಮತ್ತೆ 'ರಾವಣವಧೆ'ಯ ಜಯಭೇರಿ ಮೊಳಗಿತು. ೧೯೧೭ರಲ್ಲಿಯೇ ಕಂಪನಿಯ ಕೀರ್ತಿ ಸಹಿಸದ ಕೆಲವು ಹಿತಾಸಕ್ತಿಗಳಿಂದ ತೊಂದರೆಗಳು ಎದುರಾದವು. ಒಂದು ದಿನ ನಾಟಕ ನಡೆಯುತ್ತಿದ್ದ ಸಂದರ್ಭದಲ್ಲಿ ಕಂಪನಿಯ ಕಲಾವಿದನಿಗೂ ಸ್ಥಳೀಯ ಕಿಡಿಗೇಡಿಗಳಿಗೂ ಸಣ್ಣ ಜಗಳ ಶುರುವಾಗಿ ನಾಟಕ ಅರ್ಧಕ್ಕೆ ನಿಂತಿತು. ಪ್ರೇಕ್ಷಕರಲ್ಲಿ ಗೊಂದಲ ಉಂಟಾಯಿತು. ವಾಮನರಾಯರು ಥೇಟರ್ ಹತ್ತಿರದಲ್ಲಿಯೇ ಇದ್ದ ಮನೆಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಕಂಪನಿಯ ಮ್ಯಾನೇಜರ ರಾಮಚಂದ್ರ ಗಾಬರಿಯಿಂದ ಓಡುತ್ತಾ ಬಂದು ರಾಯರನ್ನು ಎಚ್ಚರಿಸಿದ. ನಡೆದ ಸಂಗತಿಯನ್ನು ವಿವರಿಸಿದ ಕೂಡಲೇ ರಾಯರು ಥೇಟರಿಗೆ ಧಾವಿಸಿದರು. ಪುಂಡರ ಮುಖಂಡ ಬಂದು' ನಮ್ಮ ಹುಡುಗನ ಕೈಯೊಳಗಿನ ಚೀಲ ಕಳೆದಿದೆ, ಅದರ ವ್ಯವಸ್ಥೆಯಾಗಬೇಕು' ಎಂದು ಹೇಳಿದ ರಾಯರು ಹಿಂದೆ – ಮುಂದೆ ನೋಡದೆ ನಾನು ಕೊಡುತ್ತೇನೆ ಎಂದರು. ಮನೆಗೆ

ಹೋಗಿ ಹೆಂಡತಿಯ ಕೈಯೊಳಗಿನ ಪಾಟಲಿಗಳನ್ನು (ಬಂಗಾರಬಳೆ) ತಂದು ಆ ನಾಯಕನ ಕೈಗೆ ಕೊಟ್ಟರು.[೧೨] ನಾಟಕ ಮತ್ತೆ ಮುಂದುವರೆಯಿತು. ನಾಟಕ ಮುಗಿಯುವವರೆಗೆ ರಾಯರು ಜಾಗ ಬಿಟ್ಟು ಕದಲಲಿಲ್ಲ ಮುಗಿದ ಮೇಲ ಪುಂಡರ ಹಲ್ಲೆಯಿಂದ ಆದ ನಷ್ಟದ ಪರಿಶೀಲನೆ ನಡೆಯಿತು. ಹಾರ್ಮೋನಿಯಂ ಕಳುವಾಗಿ, ಕನ್ನಡಿಗಳು ಒಡೆದು ಚೂರಾಗಿದ್ದವು, ವೇಷಭೂಷಣಗಳು ಹಾನಿಗೀಡಾಗಿದ್ದವು, ರಾಯರು ಯಾವುದಕ್ಕೂ ಪ್ರತಿಭಟಿಸಲಿಲ್ಲ. ಮೌನವಾಗಿಯೇ ಸಹಿಸಿದರು. ಮರುದಿನದ ನಾಟಕಕ್ಕೆ ಸ್ಥಳೀಯ 'ವೇಣಿ ಬ್ರದರ್ಸ್' ಅವರಿಂದ ಹಾರ್ಮೋನಿಯಂ ಎರವಲಾಗಿ ತಂದು ನಾಟಕ ಸಾಗಿಸಿದರು. ವಾಮನರಾಯರು ಪೆಟ್ಟಿಗೆ ಕಳುವಾಗಿದೆಯೆಂದು ಯಾರೆದುರೂ ಹೇಳಲಿಲ್ಲ. ಪೋಲೀಸ ಕಂಪ್ಲೆಂಟ್ ಕೊಡಲಿಲ್ಲ. ಈ ಪ್ರತಿಕ್ರಿಯೆ ಪುಂಡರ ಮನ ಪರಿವರ್ತಿಸಿರಬೇಕು. ಎಂಟು ಹತ್ತು ದಿನಗಳ ನಂತರ ಕಂಪನಿಯ ಎದುರು ಜಟಕಾಗಾಡಿ ಬಂದು ನಿಂತಿತು. ಪುಂಡರ ಪುಢಾರಿಯೊಬ್ಬ ರಾಯರನ್ನು ಕೂಗಿದ, 'ಮತ್ತೇನೊ ಪೇಚಿನ ಪ್ರಸಂಗ ಎದುರಾಯಿತು' ಎಂದು ರಾಯರು ಚಿಂತೆಗೊಳಗಾದರು. ಆದರೆ ಬಂದ ಪುಢಾರಿಯು 'ನಮ್ಮ ಸಾಹುಕಾರರು ನಿಮ್ಮನ್ನು ಕರೆದಿರುವರು' ಎಂದು ಹೇಳಿದ. ರಾಯರಿಗೆ ಇನ್ನಷ್ಟು ಗಾಬರಿಯಾಯಿತು. ಮತ್ತೇನು ತೊಂದರೆ ಕಾದಿದೆಯೋ ಎಂದು ಅಳುಕುತ್ತ ಜಟಕಾ ಹತ್ತಿ ಹೋದರು. ಆದರೆ ಅಲ್ಲಿ ಊಹಿಸಿದ್ದಕ್ಕಿಂತ ಬೇರೆಯೇ ನಡೆಯಿತು. ಪುಂಡರ ಮುಖಂಡನು ಬೆಳ್ಳಿಯ ತಟ್ಟೆಯಲ್ಲಿ ಬಂಗಾರದ ಪಾಟಲಿಗಳನ್ನಿಟ್ಟು ಆ ತಟ್ಟೆಯನ್ನು ರಾಯರ ಕೈಗೆ ಕೊಟ್ಟನು. ಕೊಡುತ್ತ 'ನಮ್ಮಿಂದ ತಪ್ಪಾಯಿತು ಕ್ಷಮಿಸಬೇಕು' ಎಂದು ಕಾಲಿಗೆ ಬಿದ್ದ, ರಾಯರು ಕಾಲು ಬಿಡಿಸಿಕೊಂಡು ಧನ್ಯವಾದ ಹೇಳಿ ಮತ್ತೆ ಜಟಕಾ ಹತ್ತಲು ಬಂದರು. ಅಷ್ಟೊತ್ತಿಗೆ ಜಟಕಾದಲ್ಲಿ ಹಾರ್ಮೋನಿಯಂ ವಾದ್ಯ ಬಂದು ಕುಳಿತಿತ್ತು.[೧೩] ಪುಂಡರೆಲ್ಲ ಗೌರವದಿಂದ ಕೈಮುಗಿದು ಮಾಸ್ತರರನ್ನು ಬೀಳ್ಕೊಟ್ಟರು. ಸಾಮಾನುಗಳೊಂದಿಗೆ ಕಂಪನಿಗೆ ಬಂದ ರಾಯರು ನಡೆದ ಸಂಗತಿಯೆಲ್ಲ ಹೇಳಿದರು. ರಾಯರ ಪತ್ನಿಯು 'ಎಲ್ಲ ದೈವೇಚ್ಛೆ' ಎಂದರು. ಕೇಳಿದ ಕಲಾವಿದರು ಸಂತೋಷಪಟ್ಟರು.

**ಶ್ರೇಷ್ಠ ನಟ-ನಟಿಯರ ಆಗಮನ:**

೧೯೧೮ರ ಸಂದರ್ಭ, ಕಂಪನಿಗೆ ನಾಲ್ಕು ವರ್ಷ ತುಂಬಿತ್ತು ಕಂಪನಿಯ ಕೀರ್ತಿ ನಾಡಿನಲ್ಲೆಲ್ಲ ಪಸರಿಸಿತ್ತು. ಸಂಗೀತ ನಾಟಕಗಳನ್ನು ಅದ್ದೂರಿಯಾಗಿ ಪ್ರದರ್ಶಿಸುವ ಶ್ರೇಷ್ಠ ನಾಟಕ ಕಂಪನಿಯೆಂಬ ಹೆಗ್ಗಳಿಕೆಗೆ ಪಾತ್ರವಾಗಿತ್ತು. ಇಂತಹ ಹಿರಿಮೆಯಿಂದಾಗಿ ಸಂಗೀತಬಲ್ಲ ನಟ-ನಟಿಯರು ಮತ್ತು ಸಂಗೀತ ಕಲಿಯಬೇಕೆಂಬ ಹಂಬಲವುಳ್ಳ ತರುಣರು ವಿಶ್ವಗುಣಾದರ್ಶ ಕಂಪನಿಯತ್ತ ಹೆಜ್ಜೆ ಹಾಕಿದರು. ಹೀಗೆ ಬಂದವರಲ್ಲಿ ಪ್ರಮುಖರೆಂದರೆ ಗುರುಲಿಂಗಪ್ಪ ಗುಳೇದಗುಡ್ಡ, ಎಲ್ಲೂಬಾಯಿ ಗುಳೇದಗುಡ್ಡ, ಗಂಗೂಬಾಯಿ ಗುಳೇದಗುಡ್ಡ. ಇವರು ಆ ಕಾಲದ ಶ್ರೇಷ್ಠ ಕಂಪನಿಯೆಂದು ಹೆಸರಾಗಿದ್ದ ಕೊಣ್ಣೂರ ಕಂಪನಿಯಿಂದ ಬಂದಿದ್ದರು. ಇದೇ ಅವಧಿಯಲ್ಲಿ ಸಂಗೀತ ಕಲಿಯಬೇಕೆಂಬ ಹಂಬಲದಿಂದ ಧಾರವಾಡ ಹತ್ತಿರದ

ಮನಸೂರಿನ ಬಸವರಾಜನೆಂಬ ತರುಣ ಬಂದಿದ್ದ (ಇವರು ಮುಂದೆ ಬಸವರಾಜ ಮನಸೂರ ಹೆಸರಿನಿಂದ ಪ್ರಖ್ಯಾತ ಕಲಾವಿದರಾಗಿ ಬೆಳೆದರು. ಇವರ ಸಹೋದರನೇ ಮಲ್ಲಿಕಾರ್ಜುನ ಮನಸೂರ) ಇವನ ಕಂಠ ಪರೀಕ್ಷಿಸಿದ ರಾಯರು 'ಕವಿರತ್ನ ಕಾಳಿದಾಸ' ನಾಟಕದಲ್ಲಿ ಬಾಲಭೋಜನ ಪಾತ್ರ ಕೊಡುತ್ತಾರೆ. ಇದರಿಂದ ಪ್ರೇರಿತರಾಗಿ ವಾಮನರಾಯರು 'ಭಕ್ತಪ್ರಹ್ಲಾದ'ನ ಪಾತ್ರಕ್ಕೆ ಅವರನ್ನು ಸಿದ್ಧಗೊಳಿಸಿದರು.

'ಭಕ್ತಪ್ರಹ್ಲಾದ' ನಾಟಕವು ಈ ಮೊದಲು ಶಿರಹಟ್ಟಿ ಕಂಪನಿಯಿಂದ ಪ್ರಯೋಗಗೊಳ್ಳುತ್ತಿತ್ತು. ಅದನ್ನು ಬಿ.ವೆಂಕಟಾಚಾರ್ ರಚಿಸಿದ್ದರು. ವಾಮನರಾಯರು ಅದನ್ನು ಮುಂದಿಟ್ಟುಕೊಂಡು ಬೇರೊಂದು ನಾಟಕವನ್ನೇ ಬರೆಯಲು ಮುಂದಾದರು. ತೆಲುಗಿನಲ್ಲಿ ಪಂಡಿತ ಕೃಷ್ಣಮಾಚಾರ್ಯರು ಬರೆದಿದ್ದ ಪ್ರಹ್ಲಾದ ಚರಿತೆ'ಯನ್ನು ಪಂಡಿತರಿಂದ ಓದಿಸಿ, ಕೇಳಿ ಅದರಲ್ಲಿಯ ಉತ್ತಮ ಅಂಶಗಳನ್ನು ಸೇರಿಸಿಕೊಂಡು "ಭಕ್ತಪ್ರಹ್ಲಾದ" ಎಂಬ ಹೊಸ ರಂಗಕೃತಿಯನ್ನೇ ರೂಪಿಸುತ್ತಾರೆ. ಇದರಲ್ಲಿ ಪ್ರಹ್ಲಾದನ ಪಾತ್ರವನ್ನು ಬಸವರಾಜ ಮನಸೂರ ಅಭಿನಯಿಸುತ್ತಿದ್ದರೆ, ವಾಮನರಾಯರು ಹಿರಣ್ಯಕಶ್ಯಪನ ಪಾತ್ರವನ್ನು ನಿರ್ವಹಿಸುತ್ತಿದ್ದರು. ಈ ಪಾತ್ರವು ವಾಮನರಾಯರಿಗೆ ಒಂದು ಸವಾಲೇ ಆಗಿತ್ತು. ಜೊತೆಗೆ ಪ್ರೇಕ್ಷಕರಿಗೂ ಸೋಜಿಗವೆನಿಸಿತ್ತು. ರಾಯರು ಅದುವರೆಗೆ ಹಾಸ್ಯ, ಶೃಂಗಾರ, ಭಕ್ತಿಪ್ರಧಾನ ಪಾತ್ರಗಳನ್ನು ಲೀಲಾಜಾಲವಾಗಿ ಅಭಿನಯಿಸುತ್ತಿದ್ದರು. ಅಂಥವರು ವೀರ, ರೌದ್ರರಸಪ್ರಧಾನ ಪಾತ್ರಗಳನ್ನು ಹೇಗೆ ಅಭಿನಯಿಸುವರೊ ಎಂಬ ಕುತೂಹಲ ಪ್ರೇಕ್ಷಕರಲ್ಲಿತ್ತು.

ಬಸವರಾಜ ಮನಸೂರ ಭಕ್ತ ಪ್ರಹ್ಲಾದನ ಪಾತ್ರ ಮಾಡುತ್ತಿದ್ದರು. ವಾಮನರಾಯರು ಹಿರಣ್ಯಕಶ್ಯಪನ ಪಾತ್ರ ನಿರ್ವಹಿಸುತ್ತಿದ್ದರು. ಹಾಸ್ಯ, ಶೃಂಗಾರ ಭಕ್ತಿ, ಕರುಣ ರಸಗಳನ್ನು ಅಭಿನಯಿಸಿದಂತೆ ವೀರ ರೌದ್ರ ರಸಗಳಲ್ಲಿ ಅಭಿನಯಿಸುವುದು ರಾಯರಿಗೆ ಸಾಧ್ಯವಾಗುತ್ತಿರಲಿಲ್ಲ. ಮೊದಲೆರಡು ತಿಂಗಳು ಪಾತ್ರ ನಿರ್ವಹಿಸಿದರು. ಎರಡು ನಾಟಕಗಳು ಮುಗಿಯುವಷ್ಟರಲ್ಲಿ ರಾಯರ ಧ್ವನಿ ಕುಗ್ಗಿಹೋಗುತ್ತಿತ್ತು. ಇನ್ನು ಮುಂದೆ ಈ ತರಹದ ತೊಂದರೆ ಆಗಕೂಡದೆಂದು ನಿರ್ಧರಿಸಿ. ಅದೇ ವೇಳೆಗೆ ಕೊಣ್ಣೂರು ಕಂಪನಿಯಿಂದ ಬಂದಿದ್ದ ಪ್ರಸಿದ್ಧ ನಟ ಗುರುಲಿಂಗಪ್ಪ ಗುಳೇದಗುಡ್ಡ ಅವರಿಗೆ ಆ ಪಾತ್ರವನ್ನು ವಹಿಸಿದರು. ಇವರು ಈ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿದ್ದರು. ಇವರು ಕಂಪನಿ ಬಿಟ್ಟು ಹೋದ ಮೇಲೆ ಇದನ್ನು ಅಜಾನುಬಾಹು ವ್ಯಕ್ತಿತ್ವದ ಕೇಶವಭಟ್ಟ ಮಿಶ್ರಿಕೋಟಿ ಎಂಬ ನಟರು ಪರಿಣಾಮಕಾರಿಯಾಗಿ ಅಭಿನಯಿಸುತ್ತಿದ್ದರು, ರಾಕ್ಷಸನ ಪಾತ್ರಕ್ಕೆ ಬೇಕಾಗುವ ಎಲ್ಲ ದೈಹಿಕ ಲಕ್ಷಣಗಳು ಇವರಿಗಿದ್ದವು. ಹೀಗಾಗಿ ರಾಕ್ಷಸ ಪಾತ್ರಗಳು ಇವರಿಗೆ ಮೀಸಲಾದವು. ಇಂತಹ ನಟವರ್ಗದಿಂದ 'ಭಕ್ತಪ್ರಹ್ಲಾದ'ವು ಅಭೂತಪೂರ್ವ ಯಶಸ್ಸನ್ನು ತಂದಿತು, ಜೊತೆಗೆ ಲಾಭವನ್ನೂ ಕೊಟ್ಟಿತು.

ಬಾಗಲಕೋಟೆ ಮುಕ್ಕಾಮಿನಲ್ಲಿ ಕಂಪನಿಗೆ ಒಳ್ಳೆಯ ಪ್ರೋತ್ಸಾಹ ಸಿಕ್ಕಿತು. ಆರ್ಥಿಕವಾಗಿ ಕಂಪನಿ ಸುಸ್ಥಿತಿಗೆ ಬಂದಿತು. ಇದೇ ಸಂದರ್ಭದಲ್ಲಿ ವಾಮನರಾಯರ ದತ್ತಕತಾಯಿ ತೀರಿಕೊಂಡರು. ದಿನಕಾರ್ಯಗಳಲ್ಲಿ ಭಾಗವಹಿಸಿದ ರಾಯರು ಬ್ರಾಹ್ಮಣರಿಗೆ ಬೆಳ್ಳಿಯ ನಾಣ್ಯಗಳನ್ನು ದಾನವಾಗಿ ನೀಡಿದರು. ಬಾಗಲಕೋಟೆಯಲ್ಲಿದ್ದ ಆರು ತಿಂಗಳ ಕಾಲ ಕಂಪನಿಗೆ ನಿರೀಕ್ಷೆಗೂ ಮೀರಿ ಲಾಭವಾಯಿತು.

ಬಾಗಲಕೋಟೆಯಿಂದ ಬಿಜಾಪುರಕ್ಕೆ ಬರಲು ಅಲ್ಲಿ ಕೇಶವರಾವ ಭೋಸಲೆ ಅವರ ಮರಾಠಿ ನಾಟಕ ಕಂಪನಿ ಬೀಡುಬಿಟ್ಟಿತ್ತು. ರಾಯರು ಅವರೊಂದಿಗೆ ಒಪ್ಪಂದ ಮಾಡಿಕೊಂಡರು. ಒಂದು ದಿನ ಮರಾಠಿ ನಾಟಕ, ಒಂದು ದಿನ ಕನ್ನಡ ನಾಟಕ ಹೀಗೆ ಎರಡೂ ಕಂಪನಿಗಳಿಂದ ನಾಟಕಗಳು ನಿಯಮಿತವಾಗಿ ನಡೆದವು. ಬಿಜಾಪೂರದ ನಾಟಕ ಅಭಿಮಾನಿಗಳು ಎರಡೂ ಭಾಷೆಯ ನಾಟಕಗಳನ್ನು ನೋಡಿ ಸಂತೋಷಪಟ್ಟರು. ಕನ್ನಡ ಮತ್ತು ಮರಾಠಿ ನಾಟಕಗಳು ಪರಸ್ಪರ ಕೊಟ್ಟು ಪಡೆಯುತ್ತಿದ್ದ ಕಾಲವದು. ಎರಡೂ ಕಂಪನಿಯ ಕಲಾವಿದರು ಒಂದಡೆಗೆ ಸೇರಿ ಚರ್ಚಿಸುತ್ತಿದ್ದರು. ತಮಗೆ ಹಿಡಿಸಿದ ಉತ್ತಮ ಅಂಶಗಳನ್ನು ಅನುಸರಿಸುತ್ತಿದ್ದರು. 'ಭಕ್ತಪ್ರಹ್ಲಾದ' ನಾಟಕ ತಂದು ಕೊಟ್ಟ ಯಶಸ್ವಿನಿಂದ ಪ್ರೇರಿತರಾಗಿ ರಾಯರು 'ಭಕ್ತ ಪುಂಡಲೀಕ' ಎಂಬ ಮರಾಠಿ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದರು.

೧೯೧೯ರಲ್ಲಿ ಕಂಪನಿ ಧಾರವಾಡಕ್ಕೆ ಬಂದಿತು. ಧಾರವಾಡದಲ್ಲಿದ್ದಾಗಲೇ ರಾಯರು ಮರಾಠಿಯ ಪ್ರಸಿದ್ಧ ನಾಟಕ 'ಮಾನಾಪಮಾನ'ವನ್ನು 'ಆತ್ಮತೇಜ' ಹೆಸರಿನಿಂದ ಕನ್ನಡಕ್ಕೆ ಅನುವಾದಿಸಲು ಯೋಚಿಸಿದರು.[೧೪] (ಈ ನಾಟಕ ಪೂರ್ಣವಾಗಲಿಲ್ಲ) ಧಾರವಾಡದಿಂದ ರಾಣೆಬೆನ್ನೂರು, ಹರಿಹರ ಜಾತ್ರೆ, ದಾವಣಗೆರೆ ನಗರಗಳಲ್ಲಿ ನಾಟಕಗಳನ್ನಾಡುತ್ತ, ಕಷ್ಟ ಸುಖದ ಅನುಭವಗಳೊಂದಿಗೆ ಕಂಪನಿ ಬಳ್ಳಾರಿಗೆ ಬಂದಿತು. ಎಂದಿನಂತೆಯೇ ಬಳಾರಿ ಪ್ರೇಕ್ಷಕರು ವಿಶ್ವಗುಣಾದರ್ಶ ಕಂಪನಿಯ ನಾಟಕಗಳನ್ನು ಪ್ರೀತಿಯಿಂದ ಸ್ವಾಗತಿಸಿ ಉದಾರ ಹೃದಯದಿಂದ ಬೆಂಬಲಿಸಿದರು.

**ಭಕ್ತಿ ಪ್ರಧಾನ ನಾಟಕಗಳ ಜಯಭೇರಿ:**

೧೯೨೦ರಲ್ಲಿ ಬೆಂಗಳೂರು ಮುಕ್ಕಾಂ 'ಭಕ್ತ ಪ್ರಹ್ಲಾದ' ನಾಟಕಕ್ಕೆ ಒಳ್ಳೆಯ ಪ್ರತಿಕ್ರಿಯೆ ಸಿಕ್ಕಿತು. ಆಗಲೇ 'ಭಕ್ತ ಪುಂಡಲೀಕ' ನಾಟಕ ಬರೆದು ಮುಗಿಸಿದ್ದರು. ಅದನ್ನು ಭರ್ಜರಿಯಾಗಿ ರಂಗಕ್ಕೆ ತರಲು ಸಿದ್ಧತೆ ನಡೆಸಿದರು. ಇದನ್ನು ಮರಾಠಿಯಲ್ಲಿ ಬಾಬಾಜಿ ರಾಣೆ ಅವರು ಬರೆದಿದ್ದರು. ಅಲ್ಲಿ ಅದು ತುಂಬ ಜನಪ್ರಿಯವಾಗಿತ್ತು. ಅದನ್ನು ಕನ್ನಡ ರಂಗಭೂಮಿಯ ಮೇಲೆಯೂ ಆಡಲು ರಾಯರು ಉತ್ಸುಕರಾಗಿದ್ದರು. ಬೆಂಗಳೂರಿನಲ್ಲಿ ಈ ನಾಟಕಕ್ಕೆ ಕಾಲ ಕೂಡಿ ಬಂದಿತು. ಭಕ್ತಿರಸ, ಹಾಸ್ಯ ಸನ್ನಿವೇಶ ಸಂಭಾಷಣೆಯ ಸೊಗಸು, ಯೋಗ್ಯ ನಟರುಗಳ ಅಭಿನಯ ಕೌಶಲ್ಯ, ಸುಶ್ರಾವ್ಯ ಸಂಗೀತ ಇತ್ಯಾದಿ ಅಂಶಗಳಿಂದ ಈ ನಾಟಕ ಪ್ರೇಕ್ಷಕರನ್ನು ಹಿಡಿದಿಡುವಲ್ಲಿ ಅತ್ಯಂತ ಯಶಸ್ವಿಯಾಯಿತು.

ವಾಮನರಾಯರು ಪುಂಡಲೀಕನಾಗಿ, ಗುರುಲಿಂಗಪ್ಪ ಪುಂಡಲಿಕನ ತಂದೆಯಾಗಿ, ಪುಂಡಲಿಕನ ಹೆಂಡತಿಯಾಗಿ ಗಂಗೂಬಾಯಿ ಭಾವಪೂರ್ಣವಾಗಿ ಅಭಿನಯಿಸುತ್ತಿದ್ದರು. ಹಾವಭಾವ ಮತ್ತು ಹಾಡುಗಾರಿಕೆಯಿಂದ ಪಾತ್ರಕ್ಕೆ ಜೀವ ತುಂಬುತ್ತಿದ್ದರು. ಬೆಂಗಳೂರು ಪ್ರೇಕ್ಷಕರಿಗೆ ಈ ನಾಟಕ ಆಕರ್ಷಣೀಯವೆನಿಸಿತು. ವಾಮನರಾಯರ ಅಭಿನಯ ಮತ್ತು ಹಿಂದೂಸ್ತಾನೀ ಸಂಗೀತದ ಬೀಜಗಳು ಪ್ರೇಕ್ಷಕರನ್ನು ರಂಜಿಸಿ ತಣಿಸಿದವು.

**ಮೈಸೂರಿನಲ್ಲಿ ತೊಂದರೆ:**

ಬೆಂಗಳೂರಿನಿಂದ ಕಂಪನಿ ದಸರಾ ಸಂದರ್ಭಕ್ಕಾಗಿ ಮೈಸೂರಿಗೆ ಬಂದಿತು. ಅಲ್ಲಿ ನಾಟಕಗಳನ್ನಾಡಲು ಯೋಗ್ಯ ಸ್ಥಳ ಸಿಗಲಿಲ್ಲ. ರಾಯರು ಭಾನುಮಯ್ಯ ಹಾಲನ್ನು ಬಾಡಿಗೆ ಹಿಡಿದು ರಂಗಮಂದಿರವನ್ನಾಗಿ ರೂಪಿಸಿದರು. 'ಭಕ್ತ ಪುಂಡಲೀಕ' ಮತ್ತು 'ಶ್ರೀನಿವಾಸ ಕಲ್ಯಾಣ' ನಾಟಕಗಳು ಚೆನ್ನಾಗಿ ನಡೆದವು. ಇದೇ ವೇಳೆಗೆ ವಾಮನರಾಯರು ಜ್ವರ ಬಾಧೆಯಿಂದ ಬಳಲುವಂತಾಯಿತು. ನಾಟಕಕ್ಕೆ ಪ್ರೇಕ್ಷಕರು ಸೇರಿದ್ದರು. ರಾಯರು ಅಭಿನಯಿಸಲು ಸಿದ್ಧರಾದರು. ಆದರೆ ಅವರ ಸ್ಥಿತಿ ಕಂಡು ಅವರ ಧರ್ಮಪತ್ನಿ 'ಆರೋಗ್ಯಕ್ಕಿಂತ ಮುಖ್ಯವಾದದ್ದು ಏನಿದೆ? ಇಂತಹದರಲ್ಲಿ ನಾಟಕವಾಡುವುದು ಬೇಡ' ಎಂದು ಹಟ ಹಿಡಿದರು.[೧೫] ರಾಯರು ಗತ್ಯಂತರವಿಲ್ಲದೆ ಸುಮ್ಮನೆ ಕುಳಿತರು. ಅವರಿಲ್ಲದೆ ನಾಟಕ ಆಡಲು ಕಲಾವಿದರಿಗೆ ಧೈರ್ಯವಾಗಲಿಲ್ಲ. ಕೊನೆಗೆ ಪ್ರೇಕ್ಷಕರಿಗೆ ಕ್ಷಮೆಕೋರಿ ಅವರ ಹಣವನ್ನು ಹಿಂತಿರುಗಿಸಲಾಯಿತು. ಇದು ಕಂಪನಿಯ ಜೀವನದಲ್ಲಿಯೇ 'ಕೆಟ್ಟಗಳಿಗೆ' ಎಂದು ರಾಯರು ಸ್ಮರಿಸುತ್ತಿದ್ದರಂತೆ, ರಾಯರ ಜ್ವರದ ಬಾಧೆ ಎರಡು ತಿಂಗಳಾದರೂ ಕಡಿಮೆಯಾಗಲಿಲ್ಲ. ಆಗ ರಾಯರು ಸಂಸಾರ ಸಮೇತ ಬೆಂಗಳೂರಿಗೆ ಹೋಗಿ ನಾಲ್ಕು ತಿಂಗಳು ವಿಶ್ರಾಂತಿ ಪಡೆದರು. ಈ ಅವಧಿಯಲ್ಲಿ ಕಂಪನಿ ಬಾಗಿಲು ಮುಚ್ಚಿತ್ತು. ಕಲಾವಿದರು ತಮ್ಮ ತಮ್ಮ ಸಂಬಳ ಪಡೆದು ಊರಿಗೆ ಹೋಗಿದ್ದರು. ನಾಲ್ಕು ತಿಂಗಳ ನಂತರ ರಾಯರು ಗೆಲುವಾದರು. ಮತ್ತೆ ಕಂಪನಿ ಪುನರಾರಂಭಿಸಲು ಕ್ರಿಯಾಶೀಲರಾದರು ಊರುಗಳಿಗೆ ಹೋಗಿದ್ದ, ಕಲಾವಿದರಿಗೆಲ್ಲ ಪತ್ರ ಬರೆದು ಬೆಂಗಳೂರಿಗೆ ಬರಲು ತಿಳಿಸಿದರು.

**ಕಂಪನಿ ಪುನರಾರಂಭ ಕಷ್ಟಗಳ ಸರಮಾಲೆ:**

ನಾಲ್ಕು ತಿಂಗಳು ನಾಟಕಗಳು ಇಲ್ಲದೆ ಮತ್ತು ವೈದ್ಯಕೀಯ ವೆಚ್ಚದಿಂದಾಗಿ ರಾಯರ ಆರ್ಥಿಕ ಸ್ಥಿತಿ ಕುಸಿದುಹೋಗಿತ್ತು. ಇಂತಹದರಲ್ಲಿ ಮತ್ತೆ ನಾಟಕವಾಡುವ ಚಟುವಟಿಕೆಗಳು ರಾಯರಿಂದ ಪ್ರಾರಂಭವಾದವು. ರಾಯರ ಕರೆಗೆ ಓಗೊಟ್ಟು ಕಲಾವಿದರು ಒಬ್ಬೊಬ್ಬರಾಗಿ ಬಂದು ಸೇರಿದರು. ಆದರೆ ಗುಳೇದಗುಡ್ಡ ಗಂಗೂಬಾಯಿ, ಯಲ್ಲೂಬಾಯಿ, ಗುರುಲಿಂಗಪ್ಪ, ಈ ಮೂವರು ಮಾತ್ರ ಬರಲಿಲ್ಲ. ಇದು ರಾಯರನ್ನು ಮತ್ತಷ್ಟು ತೊಂದರೆಗೆ ಸಿಲುಕಿಸಿತು. ಸ್ತ್ರೀ ಪಾತ್ರಕ್ಕಾಗಿ ಬೇರೊಬ್ಬ ನಟಿಯ ಶೋಧಕ್ಕೆ ತೊಡಗಿದರು. ನಟಿ ಸಿಗಲಿಲ್ಲ. ಹಳ್ಳಿಯ ಕಂಪನಿಯೊಂದರಲ್ಲಿ ಅಭಿನಯಿಸುತ್ತಿದ್ದ ಸುಮಧುರ ಕಂಠದ

ತರುಣ ನಟ ಸಿಕ್ಕ ಅವನಿಗೆ ರಾಯರು ತಾಲೀಮು ನೀಡಿ ಸ್ತ್ರೀ ಪಾತ್ರಕ್ಕೆ ಅಣಿಗೊಳಿಸಿದರು. ಚೆನ್ನಪಟ್ಟಣದಲ್ಲಿ ವಿಶ್ವಗುಣಾದರ್ಶ ಮತ್ತೆ ನಾಟಕಗಳಿಗೆ ನಾಂದಿ ಹಾಡಿತು. ಆದರೇನು, ಕಷ್ಟದ ಮೇಲೆ ಕಷ್ಟಗಳು ಎರಗಿದವು. ರಾಯರು ತಮ್ಮಲ್ಲಿದ್ದ ಒಂದೊಂದೇ ಒಡವೆ, ಆಭರಣಗಳನ್ನು ಒತ್ತೆ ಇಟ್ಟು ಪರಿಸ್ಥಿತಿ ನಿಭಾಯಿಸಿದರು. ಚೆನ್ನಪಟ್ಟಣದಿಂದ ರಾಮನಗರ, ಮುಕ್ಕಾಂ ಮಾಡಿ ಕಂಪನಿ ಮದ್ದೂರಿಗೆ ಬಂದಿತು.

ಅಲ್ಲಿ ರಾಯರಿಗೆ ಬಲಗೈಯಂತಿದ್ದ ರಾಣೆಬೆನ್ನೂರು ಮಲ್ಲಪ್ಪನವರು ಕಂಪನಿ ಬಿಡುವುದಾಗಿ ತಕರಾರು ನಡೆಸಿದರು. ಸಂಬಳದ ಹಣ ಚುಕ್ತಾ ಮಾಡಬೇಕೆಂದು ಕೇಳಿದರು. ಆಗ ರಾಯರು 'ನಿನ್ನ ಬಾಕಿ ಕೊಡಲು ನನ್ನ ಹತ್ತಿರ ಈಗ ಹಣವಿಲ್ಲ, ಒಂದೆರಡು ನಾಟಕಗಳನ್ನು ಪ್ರಯೋಗಿಸಿ ಅದರಿಂದ ಬಂದ ಹಣದಿಂದ ಬಾಕಿ ತೀರಿಸುವೆ' ಎಂದು ನಮ್ರವಾಗಿ ಹೇಳಿದರು. ಮಲ್ಲಪ್ಪನ ಪಾತ್ರ ಮಾಡುವದಕ್ಕಾಗಿ ಬಿ. ನಂಜುಂಡಯ್ಯ ಎಂಬ ಕಲಾವಿದನನ್ನು ಒಪ್ಪಿಸಿದರು. ನಂಜುಂಡಯ್ಯ ಆಂಜನೇಯನ ಪಾತ್ರಕ್ಕೆ ಪ್ರಸಿದ್ಧವಾಗಿದ್ದನು. ಅವನ ಸಲುವಾಗಿ 'ಲಂಕಾದಹನ' ನಾಟಕವನ್ನು ಪ್ರಯೋಗಕ್ಕೆತ್ತಿಕೊಂಡರು. ಪ್ರಚಾರ ಭರದಿಂದ ಸಾಗಿತು. ಪ್ರೇಕ್ಷಕರು ದೊಡ್ಡ ಸಂಖ್ಯೆಯಲ್ಲಿ ಬಂದಿದ್ದರು. ನಾಟಕದ ಸಮಯ ಹತ್ತಿರ ಹತ್ತಿರಕ್ಕೆ ಬರತೊಡಗಿತು. ನಾಟಕದ ಮೊದಲ ಗಂಟೆ ಬಾರಿಸಿತು. ಆದರೆ ಮಾರುತಿ ಪಾತ್ರ ನಿರ್ವಹಿಸಲು ಬರಬೇಕಾಗಿದ್ದ ನಂಜುಂಡಯ್ಯ ಬರಲಿಲ್ಲ. ರಾಯರಿಗೆ ದಿಗಿಲಾಯಿತು. ಏನು ಮಾಡಲೂ ತೋಚದೆ ಬಾಕಿ ಸಂಬಳಕ್ಕಾಗಿ ಪೀಡಿಸುತ್ತಾ ಕುಳಿತಿದ್ದ ಮಲ್ಲಪ್ಪನಿಗೆ 'ಮಲ್ಲಪ್ಪ ಇವತ್ತೊಂದು ದಿನ ಬಣ್ಣ ಹಚ್ಚಿಕೊಂಡು ಪಾತ್ರ ಮಾಡು, ಈ ಸಂಕಟದಿಂದ ಪಾರು ಮಾಡು' ಎಂದು ವಿನಂತಿಸಿಕೊಂಡರು. ಮಲ್ಲಪ್ಪ ಒಪ್ಪಲಿಲ್ಲ. ವಾಮನರಾಯರು ಏನು ಮಾಡಬಹುದೋ ನೋಡಬೇಕೆಂದು ಅಲ್ಲಿಂದ ಕಣ್ಮರೆಯಾಗಿ ಪ್ರೇಕ್ಷಕರ ಗುಂಪು ಸೇರಿದನು.[೨] ರಾಯರು ದೇವರ ಮೇಲೆ ಭಾರಹಾಕಿ ನಿಟ್ಟುಸಿರುಬಿಟ್ಟರು. ರಾತ್ರಿ ಹನ್ನೊಂದು ಗಂಟೆಯಾಗಿತ್ತು. 'ನಂಜುಂಡ ಬರಕತ್ಯಾನ' ಎಂದು ಯಾರೋ ರಾಯರಿಗೆ ಹೇಳಿದರು. ರಾಯರ ಮೈಯಲ್ಲಿ ಮಿಂಚಿನ ಸಂಚಾರವಾಯಿತು. ನಂಜುಂಡ ಬಂದವನೆ ಬಣ್ಣ ಹಚ್ಚಿಕೊಂಡು ರಂಗದ ಮೇಲೆ ಸಂಭ್ರಮಿಸಿದ. ರಾಯರು ಪೇಚಿನಿಂದ ಪಾರಾದರು. ಮಲ್ಲಪ್ಪನಿಗೆ ಬಾಕಿ ಹಣ ಕೊಟ್ಟು ಕಳಿಸಿದರು. ಹೀಗೆ ಕಷ್ಟ ನಷ್ಟದಲ್ಲಿ ಕಂಪನಿ ದಿನ ನೂಕುತ್ತಿದ್ದಾಗ ಮೈಸೂರು ಮಹಾರಾಜರಿಂದ ಕಂಪನಿಗೆ ಕರೆ ಬಂದಿತು.

**ಅರಮನೆಯಿಂದ ಕಂಪನಿಗೆ ಆಮಂತ್ರಣ:**

ಅಂದಿನ ದಿನಗಳಲ್ಲಿ ವರದಾಚಾರ್ಯರ ಕಂಪನಿ, ಗುಬ್ಬಿ ಕಂಪನಿ, ಅರಮನೆ ಕಂಪನಿಗಳು ಭರ್ಜರಿ ಪ್ರಯೋಗಗಳನ್ನು ನೀಡುತ್ತಿದ್ದವು. ಇಂಥ ದೊಡ್ಡ ಕಂಪನಿಗಳ ನಡುವೆ 'ವಿಶ್ವಗುಣಾದರ್ಶ'ಕ್ಕೆ ಅರಮನೆಯಿಂದ ಕರೆ ಬಂದದ್ದು ಎಲ್ಲರ ಕುತೂಹಲಕ್ಕೆ ಕಾರಣವಾಗಿತ್ತು. ಈ ಸಂದರ್ಭದಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, 'ವಿಶ್ವಗುಣಾದರ್ಶ' ನಾಟಕಗಳಲ್ಲಿಯ ಭಕ್ತಿಯ ವಿವರಣೆ, ಸಂಗೀತದ ಸೊಗಸು, ಅರಮನೆ ಜನರಿಗೆ ತುಂಬಾ ಪ್ರಿಯವಾಗಿದ್ದವು. (ಈ ಮೊದಲೆ ವಾಮನರಾಯರ ನಾಟಕಗಳನ್ನು

ಅರಮನೆ ಜನರು ನೋಡಿದ್ದರು) ಮುಮ್ಮಡಿ ಕೃಷ್ಣರಾಜ ಅವರು ಆಗ ಮಹಾರಾಜರಾಗಿದ್ದರು. ದರ್ಬಾರ್ ಭಕ್ಷಿಯವರ ಆಮಂತ್ರಣದ ಮೇರೆಗೆ ವಾಮನರಾಯರು ಕಂಪನಿ ತೆಗೆದುಕೊಂಡು ಮೈಸೂರಿಗೆ ಹೊರಟರು.

'ವಿಶ್ವಗುಣಾದರ್ಶ'ದ ನಾಟಕಗಳ ಸಲುವಾಗಿ ಜಗನ್ಮೋಹನ ಅರಮನೆಯ ರಂಗಮಂದಿರ ಸಜ್ಜಾಗಿತ್ತು. ಸುಂದರವಾದ ರಂಗಸಜ್ಜಿಕೆ, ಝುಗಮಗಿಸುವ ಬೆಳಕು, ಆಕರ್ಷಕ ಸೀನ್ ಸೀನರಿಗಳು ರಂಗಸ್ಥಳಕ್ಕೆ ಶೋಭೆ ತಂದಿದ್ದವು. ಅಲ್ಲಿ ಸುಮಾರು ಐದುನೂರು ಆಸನಗಳಿದ್ದವು. ಬಾಲ್ಕನಿ ಮಧ್ಯದಲ್ಲಿ ರಾಜಪರಿವಾರದವರು ಕೂಡುತ್ತಿದ್ದರು. ಅವರ ಎಡ-ಬಲಕ್ಕೆ ಅರಮನೆಯ ಬಂಧು -ಬಳಗದವರು, ಕೆಳಗಿನ ಸಭಾಗ್ರಹದಲ್ಲಿ ಅಧಿಕಾರಿಗಳು, ಊರಿನ ಗಣ್ಯರು, ತಮಗೆ ನಿಗದಿಯಾದ ಸ್ಥಳಗಳಲ್ಲಿ ಕೂಡುತ್ತಿದ್ದರು. ಮೊದಲ ದಿನ 'ಮಹಾನಂದಾ' ನಾಟಕ, ಕಲಾವಿದರೆಲ್ಲ ಬಣ್ಣ ಹಚ್ಚಿಕೊಂಡು ರಂಗಕ್ಕೆ ಸಿದ್ಧರಾಗಿದ್ದರು. ಮಹಾರಾಜರು ಕಲಾವಿದರಿದ್ದ ಗ್ರೀನ್‌ರೂಮಿಗೆ ಬಂದರು. ವಾಮನರಾಯರಿಗೆ ತುಂಬಾ ಸಂತೋಷವಾಯಿತು. ಮಹಾರಾಜರಿಗೆ ಹೂ ಮಾಲೆ ಹಾಕಿ ಧನ್ಯವಾದಗಳನ್ನು ಅರ್ಪಿಸಿದರು.

"ಒಂಭತ್ತು ಗಂಟೆಯಾಯಿತು. ಅಂಕದ ಪರದೆ ಮೇಲೇರಿದೊಡನೆ ಗಂಗೂಬಾಯಿ ಗುಳೇದಗುಡ್ಡ ಅವರು ಭರ್ಜರಿ ಸೀರೆ, ಜರತಾರಿ ಉತ್ತರೀಯಗಳನ್ನು ಮಹಾರಾಷ್ಟ್ರ ಶೈಲಿಯಲ್ಲಿ ಧರಿಸಿ ಪ್ರಭುವೇ ಶ್ರೀ ಕೃಷ್ಣರಾಜಾ' ಎಂದು ಭಕ್ತಿಯಿಂದ ಕೈಜೋಡಿಸಿ ಹಾಡಲು ಪ್ರಾರಂಭಿಸಿದಾಗ ರಂಗಮಂದಿರವು ಹರ್ಷಪುಳಕಿತವಾಯಿತು.[೧೭] ಅಂದಿನ ಪ್ರಯೋಗ ಇಡೀ ಅರಮನೆ ಪರಿವಾರದ ಮನಸ್ಸನ್ನು ಸೂರೆಗೊಂಡಿತು. ಮರುದಿನ 'ಭಕ್ತಪುಂಡಲೀಕ' ನಾಟಕ ಇದು ಅರಮನೆ ಜನರಿಗೆ ಹೊಸ ಪ್ರಯೋಗವಾಗಿತ್ತು. ಪುಂಡಲಿಕ ಪಂಢರಪುರ ವಿಠ್ಠಲನ ಪರಮಭಕ್ತ. ಅವನ ಭಕ್ತಿಯ ಬದುಕನ್ನು ಪರಿಚಯಿಸುವ ಈ ನಾಟಕ ವಾಮನರಾಯರ ಸಾಹಿತ್ಯ ಮತ್ತು ಸಂಗೀತದ ಸಮನ್ವಯದಿಂದ ವಿಶೇಷವೆನಿಸಿತು. ಈ ನಾಟಕವನ್ನು ವಾಮನರಾಯರು ೧೯೨೦ರಲ್ಲಿ ಬೆಂಗಳೂರಿನಲ್ಲಿದ್ದಾಗ ಬರೆದಿದ್ದರು. ಆಮೇಲೆ ಬೆಂಗಳೂರಿನಲ್ಲಿಯ ಪ್ರಯೋಗಗಳು ಅದ್ಭುತ ಯಶಸ್ಸನ್ನು ಕಂಡವು. ಇದರ ಕೀರ್ತಿವಾರ್ತೆಯಿಂದಲೇ ಮಹಾರಾಜರು ಅರಮನೆಗೆ ಆಹ್ವಾನಿಸಿದ್ದರು.

ವಾಮನರಾಯರು ಪುಂಡಲೀಕನ ಪಾತ್ರ ಅಭಿನಯಿಸುತ್ತಿದ್ದರು. ಗುರುಲಿಂಗಪ್ಪ ಪುಂಡಲೀಕನ ತಂದೆಯಾಗಿ, ಯಲ್ಲವ್ವ ಪುಂಡಲೀಕನ ತಾಯಿಯಾಗಿ, ಗಂಗೂಬಾಯಿ ಪುಂಡಲೀಕನ ಹೆಂಡತಿಯಾಗಿ, ಸಂಗನಬಸಪ್ಪ ಫಲ್ಗುಣನಾಗಿ, ಅಭಿನಯಿಸುತ್ತಿದ್ದರು. 'ಮೊದಲನೆಯ ದೃಶ್ಯದಲ್ಲೇ ಬರುವ ಕಲಿ ಮತ್ತು ದುರ್ಗತಿ ಇವರ ಪೂರ್ವ ಪ್ರವೇಶವು ಮುಂದಿನ ಪ್ರವೇಶಗಳಿಗೆ ಸುಂದರವಾದ ಹಿನ್ನೆಲೆಯನ್ನು ಒದಗಿಸುತ್ತಿತ್ತು. ಅನಂತರ ಬರುವ ಅತ್ತೆ ಸೊಸೆಯರ ಸಂಭಾಷಣೆ ನಾಟಕಕ್ಕೆ ಒಂದು ಕಳೆಯಾಗಿ ಪರಿಣಮಿಸುತ್ತಿತ್ತು. ಸೊಸೆಯ ತವರುಮನೆಯ ಅಭಿಮಾನ, ಅತ್ತೆಯ ವಿರೋಧ, ಇವರಿಬ್ಬರ ನಡುವ

ಮಗನ ಧರ್ಮಸಂಕಟ, ಇವು ನಾಟಕದ ಏರಿಕೆಗೆ ಒತ್ತಾಸೆ ನೀಡುತ್ತಿದ್ದವು. ಪುಂಡಲೀಕನು ಸುಂದರ ವಾರಂಗನೆಯಲ್ಲಿ ಅನುರಕ್ತನಾದ ವಿಷಯವು ಆತನ ಹೆಂಡತಿಯಲ್ಲಿ ಅಸೂಯೆಯ ಕಿಚ್ಚು ಹುಟ್ಟಿಸಿದಾಗ 'ಛೆ, ಛೆ, ಅದು ಹುಡುಗಿಯಲ್ಲ. ಒಬ್ಬ ಹುಡುಗನಿಗೆ ಸ್ತ್ರೀ ವೇಷ ಹಾಕಿ ವಿನೋದ ಕ್ರೀಡಾವಿಹಾರ ಗೈಯುತ್ತಿದ್ದೇನೆ' ಎಂದು ಹೆಂಡತಿಯ ಮುಂದೆ ಬಾಯಿಬಡಿಯುತ್ತಾನೆ. ಪುಂಡಲೀಕನ ಈ ಚತುರ ಕಾಪಟ್ಯವನ್ನು ಫಲ್ಗುಣರಾಯನು ರಟ್ಟು ಮಾಡಿದಾಗ ಪುಂಡಲೀಕನು ಪೇಚಾಡುವ ಬಗೆಯು ತಿಳಿನಗೆಯ ಚಿಲುಮೆಯುಕ್ಕಿಸುತ್ತಿತ್ತು. ಹೀಗೆ ನಾಟಕವು ದೃಶ್ಯದಿಂದ ದೃಶ್ಯಕ್ಕೆ ಮನೋರಂಜಕವಾಗಿ ಏರುತ್ತಾ ಹೋಗುತ್ತಿತ್ತು. ನಡುವೆ ಬರುವ ಹತ್ತಾರು ಬೈರಾಗಿಗಳ ಸಮೂಹಗಾನ, ಅವರ ವೇಷಭೂಷಣ ಪ್ರೇಕ್ಷಕರ ಕಣ್ಮನಗಳಿಗೆ ಸಂತಸ ನೀಡಿದರೆ, ಪುಂಡಲೀಕನ ಹೆಂಡತಿ ಅಶ್ವತ್ಥಮರಕ್ಕೆ ನಡೆದುಕೊಳ್ಳುತ್ತಿರುವಾಗ ಪುಂಡಲೀಕನ ಚಂಡಾಲ ಚೌಕಳಿ ಮಿತ್ರರ ಕುತಂತ್ರದಿಂದಾಗಿ ಅಲ್ಲಿ ನಡೆಯುವ ಭೂತಚೇಷ್ಟೆ ಮತ್ತೊಂದು ಸ್ವಾರಸ್ಯವಾದ ರಂಜಕತೆಯನ್ನು ನೀಡುತ್ತಿತ್ತು. ಇದರಲ್ಲಿ ಬರುವ ಗೀತಗಳು, ದ್ವಂದ್ವಗೀತಗಳು, ಸಮೂಹ ಗೀತಗಳು ನವೀನವಾದ ತಮ್ಮ ತಮ್ಮ ಧಾಟಿ ಮಟ್ಟಗಳಿಂದಾಗಿ ಚೇತೋಹಾರಿಯೆನಿಸುವಂತಿದ್ದವು. ಈ ಸಂಗತಿಗಳೆಲ್ಲ ಮಹಾರಾಜರಿಗೆ ಖುಷಿಕೊಟ್ಟಿತಂತೆ, ಸೀನಪ್ಪನ ಮಾರ್ವಾಡಿಯ ಹಾಸ್ಯಪಾತ್ರಕ್ಕೆ, ಮಹಾರಾಜರು ನಕ್ಕಿದ್ದೇ, ನಕ್ಕಿದ್ದು, ಮಹಾರಾಜರು ನಕ್ಕಿದ್ದು ಅರಮನೆಯ ತುಂಬ ದೊಡ್ಡ ಸುದ್ದಿಯಾಗಿರುವ ಪ್ರಸಂಗವನ್ನು ಎನ್ಕೆಯವರು ಉಲ್ಲೇಖಿಸಿದ್ದಾರೆ".[೧೪] ನಾಟಕ ಮುಗಿಯುತ್ತಲೇ ಮಹಾರಾಜರು ಮಾಸ್ತರರನ್ನು ರಂಗದ ಮೇಲೆ ರಾಜಮಾರ್ಯಾದೆಯಿಂದ ಸನ್ಮಾನಿಸಿದರು. ಎರಡು ಸಾವಿರ ರೂಪಾಯಿ ಕಾಣಿಕೆ, ಭಾರೀ ಜರತಾರಿ ಶಲ್ಯನೀಡಿ ತುಂಬು ಹೃದಯದಿಂದ ಅಭಿನಂದಿಸಿದರು.

ಅರಮನೆಯ ಪ್ರೋತ್ಸಾಹದಿಂದ ವಾಮನರಾಯರಿಗೆ ದೊಡ್ಡ ಬಲ ಬಂತು. ಹೆಂಡತಿಗೆ 'ಬಂಗಾರ ತರ್ತೀನಿ' ಎಂದು ಹೇಳಿ ಅಡವಿಟ್ಟ ದಾಗೀನು ಮರಳಿ ತಂದರು. ಕಂಪನಿಯ ಹಳೆಯ ಸಾಲವನ್ನು ಸ್ವಲ್ಪಮಟ್ಟಿಗೆ ತೀರಿಸಿದರು. ಮುಂದಿನ ಯಾತ್ರೆಗೆ ಕಂಪನಿ ಮತ್ತೆ ಚೇತರಿಸಿಕೊಂಡಿತು. ಆಶ್ಚರ್ಯವೆಂದರೆ ಹದಿನೈದು ದಿನಗಳಲ್ಲಿ ಮತ್ತೆ ಅರಮನೆಯಿಂದ ಕರೆ ಬಂದಿತು. ಈ ಸಲ 'ಶ್ರೀನಿವಾಸ ಕಲ್ಯಾಣ'ದ ಪ್ರದರ್ಶನಕ್ಕಾಗಿ ಕರೆದಿದ್ದರು. ಈ ನಾಟಕವೂ ಅರಮನೆ ಜನರ ಮನಸ್ಸನ್ನು ಗೆದ್ದಿತು.

**ಸಂತ ಸಖೂಬಾಯಿ ನಾಟಕ:**

ಅರಮನೆಯಲ್ಲಿ ದೊರೆತ ಪ್ರೋತ್ಸಾಹದಿಂದ ವಾಮನರಾಯರಿಗೆ ಧೈರ್ಯ ಬಂದಿತು. ಮೈಸೂರಿನ ಜನರ ಭಕ್ತಿಪ್ರಧಾನ ನಾಟಕಗಳ ಆಸಕ್ತಿಯನ್ನು ತಿಳಿದು, ಅಂಥ ಮತ್ತೊಂದು ನಾಟಕದ ತಯಾರಿಗೆ ತೊಡಗಿದರು. ಮರಾಠಿ ನಾಟಕಕಾರ ಹರಿನಾರಾಯಣ ಆಪ್ಟೆಯವರ 'ಸಂತ ಸಖೂಬಾಯಿ' ನಾಟಕವು ಅವರ ಗಮನ ಸೆಳೆಯಿತು. ಮರಾಠಿ ಭಕ್ತಿ ಪ್ರಧಾನ ನಾಟಕಗಳಲ್ಲಿಯೇ ಅತ್ಯಂತ ಯಶಸ್ವಿ ನಾಟಕವಿದು. ಮರಾಠಿಯ ನೂತನ ಸಂಗೀತ ನಾಟಕ ಮಂಡಳಿಯಲ್ಲಿ 'ಸಖೂಬಾಯಿಯ ಪಾತ್ರವನ್ನು ಸವಾಯಿ ಗಂಧರ್ವರು ಅಭಿನಯಿಸುತ್ತಿದ್ದರು. ರಾಯರು 'ಸಖೂಬಾಯಿ'ಯ ಪಾತ್ರಕ್ಕಾಗಿ ಗಂಗೂಬಾಯಿಯವರನ್ನು ಕಣ್ಮುಂದೆ ಇಟ್ಟುಕೊಂಡು ನಾಟಕ ರಚಿಸಿದರು. ಉತ್ತಮ ಖ್ಯಾಲ ಚೀಜುಗಳನ್ನು ಆಯ್ಕೆ ಮಾಡಿದ್ದರು.

ಸಖೂಬಾಯಿಯ ಪತಿ ಮಾಧವನಾಗಿ ವಾಮನರಾಯರು ಅಭಿನಯಿಸುತ್ತಿದ್ದರು. ಮಾಧವರಾಯನ ತಾಯಿ-ತಂದೆಗಳ ಪಾತ್ರಗಳನ್ನು ಯಲ್ಲೂಬಾಯಿ ಗುಳೇದಗುಡ್ಡ, ಗುರುಲಿಂಗಪ್ಪ ಗುಳೇದಗುಡ್ಡ ನಿರ್ವಹಿಸುತ್ತಿದ್ದರು. ಮೈಸೂರಿನಲ್ಲಿಯೇ ಈ ನಾಟಕ ರಂಗಕ್ಕೆ ಸಿದ್ಧವಾಯಿತು. ಹಿಂದೂಸ್ತಾನಿ ಸಂಗೀತವೇ ಈ ನಾಟಕದ ದೊಡ್ಡ ಶಕ್ತಿಯಾಗಿತ್ತು. ಕಲಾವಿದರು ಶಾಸ್ತ್ರೀಯವಾಗಿ ರಂಗಗೀತೆಗಳನ್ನು ಹಾಡುತ್ತಿದ್ದರು. ಆದರೂ ಈ ನಾಟಕ ಮೈಸೂರಿನಲ್ಲಿ ಅಷ್ಟೊಂದು ಜನಪ್ರಿಯವಾಗಲಿಲ್ಲ. ಆದಾಯ ಮತ್ತು ಖರ್ಚು ಸಮಸಮವಾಗುತ್ತಿತ್ತು. ರಾಯರು ಕಂಪನಿಯನ್ನು ತುಮಕೂರಿಗೆ ಸಾಗಿಸಿದರು. ಅಲ್ಲಿಯೂ ನಿರೀಕ್ಷಿತ ಆದಾಯ ಬರಲಿಲ್ಲ. ಕಲೇಕ್ಷನ್ ಕುಗ್ಗಿ, ಕಷ್ಟದ ದಿನಗಳು ತಲೆದೋರಿದವು. ೧೯೨೨ ರಲ್ಲಿ ಕಂಪನಿ ಧಾರವಾಡ ಪ್ರದೇಶದತ್ತ ಧಾವಿಸಿತು. ಧಾರವಾಡ ಕ್ಯಾಂಪಿನಲ್ಲಿ ಕಂಪನಿಗೆ ಅಪರೂಪದ ಮತ್ತು ಅದ್ಭುತ ಪ್ರತಿಭೆಯ ಬಾಲನಟನೊಬ್ಬನ ಪ್ರವೇಶವಾಯಿತು. ಹಿಂದೂಸ್ತಾನಿ ಸಂಗೀತ ಕ್ಷೇತ್ರದಲ್ಲಿ ದಿಗ್ಗಜರೆಂದು ಖ್ಯಾತರಾದ ಮಲ್ಲಿಕಾರ್ಜುನ ಮನಸೂರರೇ ಆ ಬಾಲನಟ. ಸಂಗೀತ ಕಲಿಯಬೇಕೆಂಬ ಒತ್ತಾಸೆಯಿಂದ ಅಣ್ಣ ಬಸವರಾಜ ಅವರನ್ನು ಹಿಂಬಾಲಿಸಿ, ಕಂಪನಿಗೆ ಬಂದರು. ಇವರ ಸುರೇಲಕಂಠ ಮತ್ತು ಹಾಡಿನ ಬಗೆಗಿರುವ ಆಸಕ್ತಿ ತಿಳಿದು ವಾಮನರಾಯರಿಗೆ ಎಲ್ಲಿಲ್ಲದ ಸಂತೋಷವಾಯಿತು. ಸಂಗೀತ ಕಲಿಸುತ್ತ ಬಾಲ ಪಾತ್ರಗಳನ್ನು ಮಾಡಲು ಅವಕಾಶ ಕೊಟ್ಟರು.

'ಸಂತ ಸಖೂಬಾಯಿ' ಯಲ್ಲಿ ಕೃಷ್ಣನ ಪಾತ್ರಕ್ಕೆ ಮಲ್ಲಿಕಾರ್ಜುನ ಮನಸೂರರು ತರಬೇತಿ ಪಡೆದರು. ಧಾರವಾಡದಲ್ಲಿ 'ಸಂತಸಖೂಬಾಯಿ' ನಾಟಕದ ಶುಕ್ರದೆಸೆ ಪ್ರಾರಂಭವಾಯಿತು. "ಶ್ರೀಕಾಂತಾ ಪಂಢರೀನಾಥಾ' ಎಂಬ ಖಮಾಜ ಠುಮರೀ ಮಾದರಿಯಲ್ಲಿ "ಏನು ಧನ್ಯವೇ ಪಂಢರಪುರವೇ' ಎಂಬ 'ಪಹಾಡಿ'ರಾಗದಲ್ಲಿ 'ನಲಿ ನಲಿದೆ ಭಕ್ತ ಕೃಪಾಳ ಪಾಂಡುರಂಗ ಪಾಡಿ ನಿನ್ನ' ಎಂಬ 'ಭೈರವಿ' ರಾಗದಲ್ಲಿ ಗಂಗೂಬಾಯಿಯು ಸಖೂಬಾಯಿ ಪಾತ್ರಧಾರಿಯಾಗಿ ಹಾಡುತ್ತಿದ್ದರೆ ಪ್ರೇಕ್ಷಕರೆಲ್ಲ ಭಕ್ತಿ ಭಾವದಲ್ಲಿ ತೇಲುತ್ತಿದ್ದರು. ಮಾಧವನ ಪಾತ್ರದಲ್ಲಿ ವಾಮನರಾಯರು ಹಾಡುತ್ತಿದ್ದ 'ಯಮನ'ರಾಗದ 'ಕೋಮಲೆ

ನಾನು ನೀಚತಮನೆ, ನಿರ್ದಯನೆ, ವೃಥಾಬಳಲಿಸಿದೆನೆ' ಎಂದು 'ವನ ಸೌಭಾಗ್ಯವೋ, ಲಾವಣ್ಯರಾಶಿಯೋ, ಶ್ರೀಯೆ ನೀ' ಎಂದು ಶೃಂಗಾರದ ಹಾಡನ್ನುಹಾಡುತ್ತಿದ್ದರೆ ಪ್ರೇಕ್ಷಕರು ಆನಂದ ಪರವಶರಾಗಿ ಕೇಳಿ "ಒನ್ಸಮೋರ್" ಹೇಳುತ್ತಿದ್ದರು.

ಮಲ್ಲಿಕಾರ್ಜುನ ಮನಸೂರರು ಎಡರಲ್ಲಿ ಬಾಲಕೃಷ್ಣನಾಗಿ ಅಭಿನಯಿಸುತ್ತಿದ್ದರು. ಅವರ ಸುಶ್ರಾವ್ಯ ಕಂಠದಿಂದ ಹೊರಹೊಮ್ಮುತ್ತಿದ್ದ 'ಅಗಲಿ ನಾನಿರೇ ಭಗವಂತ' ಎಂಬ ಹಾಡು ಪ್ರೇಕ್ಷಕರನ್ನು ನಾದಲೋಕದಲ್ಲಿ ತೇಲಾಡಿಸುತ್ತಿತ್ತು. ಇಡೀ ನಾಟಕ ಸಂಗೀತದ ಶ್ರೇಷ್ಠ ಕಲಾಕೃತಿಯಾಗಿ ಪರಿಣಮಿಸಿತು. ಅದಕ್ಕೆಲ್ಲ ವಾಮನರಾಯರ ಸಾಹಿತ್ಯ ಮತ್ತು ಗಂಗೂಬಾಯಿಯವರ ಹಾಡುಗಾರಿಕೆಯೇ ಕಾರಣವಾಗಿತ್ತು. ಎನ್ಕೆಯವರ ಅಭಿಪ್ರಾಯದಂತೆ "ಸಖೂಬಾಯಿ ನಾಟಕವು ಭಕ್ತಿರಸ, ಸಂಗೀತ, ಹಾಸ್ಯ, ಶೃಂಗಾರ, ಬಾಲಕೃಷ್ಣ ರುಕ್ಮೀಣಿಯರ ಅಭಿನಯ ಈ ಎಲ್ಲ ಗುಣಗಳಿಂದ ಕಂಪನಿಯ ಕೀರ್ತಿಯನ್ನು ಎತ್ತಿ ಹಿಡಿಯುವ ಬಾವುಟವೆನಿಸಿತು".

ಈ ನಾಟಕಕ್ಕೆ ಧಾರವಾಡದಲ್ಲಿ ದೊರೆತ ಪ್ರೊತ್ಸಾಹದಿಂದ ಗುಳೇದಗುಡ್ಡ ಯಲ್ಲೂಬಾಯಿ ಮತ್ತು ಗುರುಲಿಂಗಪ್ಪನವರಲ್ಲಿ ಮತ್ಸರ ಭಾವನೆ ಉಂಟಾಯಿತು. ತಮ್ಮಿಂದಲೇ ಈ ನಾಟಕ ಯಶಸ್ಸಿನತ್ತ ಸಾಗುತ್ತಿದೆ ಎಂಬ ಅಹಂಕಾರಬುದ್ಧಿ ತಲೆಯೆತ್ತಿತು. ಸ್ವಂತ ಕಂಪನಿ ಆರಂಭಿಸುವ ಉದ್ದೇಶದಿಂದ 'ವಿಶ್ವಗುಣಾದರ್ಶ'-ದಿಂದ ಹೊರ ನಡೆದರು. ವಾಮನರಾಯರು ಮತ್ತೆ ಸಮಸ್ಯೆಯ ಸುಳಿಗೆ ಸಿಲುಕಿದರು. "ಸಾಕು ಇನ್ನು ಕಂಪನಿಯ ಸಹವಾಸ" ಎಂದು ಕಂಪನಿ ಮುಚ್ಚುವ ನಿರ್ಣಯಕ್ಕೆ ಬಂದರು. ಇದೇ ವೇಳೆಯಲ್ಲಿ ಒಂದು ಘಟನೆ ಜರುಗಿತು.[೧೯]

"ಲಕ್ಷ್ಮೇಶ್ವರದ ಸುಪ್ರಸಿದ್ದ ಟಪ್ಪಾ ಪದ್ಧತಿ ಗಾಯಕಿ ವೃದ್ಧೆ ಬಚ್ಚಾಸಾನಿ ಅವರು ತಮ್ಮ ಮೊಮ್ಮಗಳು ವಜೀರಾಸಾನಿಯನ್ನು ಮಾಸ್ತರರಲ್ಲಿಗೆ ಕರೆದುಕೊಂಡು ಬಂದರು. ಆಕೆಗೆ ಸಂಗೀತ ನಾಟಕ ಕಲೆಯಲ್ಲಿ ತರಬೇತು ಕೊಡಬೇಕೆಂದು ಕೇಳಿಕೊಂಡರು. ವಜಿರಾಗೆ ಆಗ ಹದಿನಾರರ ಪ್ರಾಯ, ಸೌಂದರ್ಯದ ಖಣಿಯಾಗಿದ್ದಳು. ಈ ಹುಡುಗಿ ತಮ್ಮ ಮಂಡಳಿಗೆ ಪ್ರವೇಶ ಮಾಡಿದ್ದು, ದೈವ ಪ್ರೇರಣೆ ಇರಬೇಕೆಂದು ರಾಯರು ಭಾವಿಸಿದರು." ವಿಶೇಷವೆಂದರೆ ವಜೀರಾಳಿಗೆ ಅಜ್ಜಿಯ ಕಂಪನಿ (ಸ್ತ್ರೀ ನಾಟಕ ಮಂಡಳಿ ಲಕ್ಷ್ಮೇಶ್ವರ) ಯಲ್ಲಿ 'ಕೃಷ್ಣಲೀಲಾ' ನಾಟಕದಲ್ಲಿ ಅಭಿನಯಿಸಿದ್ದ ಅನುಭವವಿತ್ತು. ತರಬೇತಿ ಕೊಟ್ಟರೆ ಕಂಪನಿಗೆ ಉತ್ತಮ ನಟಿ ದೊರೆಯುವಳೆಂದು ಕ್ರೀಯಾಶೀಲರಾದರು. ಕೆಲ ದಿನಗಳಲ್ಲಿ 'ಭಕ್ತಪ್ರಹ್ಲಾದ' ನಾಟಕವನ್ನು ಎತ್ತಿಕೊಂಡರು. ಇದರಲ್ಲಿ ಮಲ್ಲಿಕಾರ್ಜುನ ಮನಸೂರ 'ಪ್ರಹ್ಲಾದನ' ಪಾತ್ರದಲ್ಲಿ, ವಜೀರಾಬಾಯಿ "ಭೂದೇವಿಯ'ಯ ಪಾತ್ರದಲ್ಲಿ ಅಭಿನಯಿಸುತ್ತಿದ್ದರು. "ಬಾಲಕ ಮಲ್ಲಿಕಾರ್ಜುನನ ಕಂಠದಿಂದ ಸ್ವರವು ಶಾವಿಗೆಯ ಎಳೆಯನ್ನು ತೆಗೆದಂತೆ ಹೊರಹೊಮ್ಮುತ್ತಿತ್ತು. ಪ್ರಹ್ಲಾದನ ಪಾತ್ರದಲ್ಲಿ ಮಲ್ಲಿಕಾರ್ಜುನ ಪ್ರೇಕ್ಷಕರಿಂದ ಮಾತಿಗೊಮ್ಮೆ ಚಪ್ಪಾಳೆ, ಹಾಡಿಗೊಮ್ಮೆ 'ಒನ್ಸಮೋರ್' ತೆಗೆದುಕೊಳ್ಳುತ್ತಿದ್ದರು. ಹರಿಯ

ಗುಣಗಾನ ಮಾಡುವ ಕೀರ್ತನೆಗಳನ್ನೇ ಹೇಳುವ ಮಗನ ಹರಿಯ ಭಕ್ತಿಗೆ ದೈತ್ಯ ಶಿರೋಮಣಿಯಾದ ತಂದೆ ಹಿರಣ್ಯಕಶ್ಯಪ ಜಿಗುಪ್ಸೆ ತಾಳಿ ತನ್ನ ಹಾಡುಗಾರಿಕೆ ತಂದೆಗೆ ಸೊಗಸೆನಿಸಲಿಲ್ಲವೋ ಏನೋ ಎಂದುಕೊಂಡು, "ಅಪ್ಪಾ, ಇನ್ನೊಂದೇ ಸೊಗಸಾದ ಪದ ಹೇಳುತ್ತೇನೆ" ಎಂದು ಮತ್ತೆ ಒಂದು ಹರಿಸಂಕೀರ್ತನೆ ಹಾಡಿದಾಗ, ಹಿರಣ್ಯಕಶ್ಯಪ ಮಗನಿಗೆ ನಾನಾ ಪರಿ ಹಿಂಸೆಯನ್ನು ಕೊಡುತ್ತಾನೆ. ಕೊನೆಗೆ ಆ ಶಿಖರಪ್ರಾಯ ಸನ್ನಿವೇಶ. 'ತಂದೆ ಮಕ್ಕಳಲ್ಲಿ ಸಂಗೀತ ಸಂವಾದ' ಈ ಸನ್ನಿವೇಶದಲ್ಲಂತೂ ಭಕ್ತ ಪ್ರಹ್ಲಾದನಾಗಿ ಮಲ್ಲಿಕಾರ್ಜುನನು ಪ್ರೇಕ್ಷಕರಿಂದ ಮೆಚ್ಚುಗೆಯ ಸುರಿಮಳೆಯನ್ನೇ ಪಡೆಯುತ್ತಿದ್ದ. ವಜೀರಾಬಾಯಿ ಕೂಡಾ ಅಷ್ಟೇ ಮಧುರವಾಗಿ ಹಾಡುತ್ತಿದ್ದಳು. ಮೋಹಕವಾಗಿ ಅಭಿನಯಿಸುತ್ತಿದ್ದಳು. ಇವರಿಂದ ಕಂಪನಿಯ ಬದುಕಿನಲ್ಲಿ ಹೊಸ ಚೈತನ್ಯ ಸಂಚರಿಸಿತು. ವಾಮನರಾಯರ ನಿರಾಸಕ್ತಿ ಹೊರಟು ಹೋಗಿ ಆಶಾಭಾವನೆ ಮೂಡಿತು. ಕಂಪನಿ ಬಿಟ್ಟು ಹೋಗಿದ್ದ ರಾಣೆಬೆನ್ನೂರ ಮಲ್ಲಪ್ಪ ಪುನಃ ಬಂದರು. ಕಂಪನಿ ಮಾಲೀಕರಾದ ವಾಮನರಾಯರದು ಉದಾರ ಮನಸ್ಸು. ಕಲಾವಿದರ ಬಗೆಗೆ ವಿಶೇಷ ಪ್ರೀತಿ ಅಭಿಮಾನ. ಒಬ್ಬ ಕಲಾವಿದ ನೆಪ ಮಾಡಿ ಕಂಪನಿ ಬಿಡುವುದಾಗಿ ಹೇಳಿದರೆ ಮಾಸ್ತರರು ಅವರನ್ನು ತಡೆಯುತ್ತಿರಲಿಲ್ಲ. ಕೊಡಬೇಕಾದ ಸಂಬಳ ಕೊಟ್ಟು ಕಳುಹಿಸಿ ಬಿಡುತ್ತಿದ್ದರು. ಕೆಲಕಾಲದ ನಂತರ ಅದೇ ಕಲಾವಿದ ಕಂಪನಿಗೆ ಬಂದಾಗ ಅವನಿಗೆ ಬೇಡವೆನ್ನದೆ ಕರೆದುಕೊಳ್ಳುತ್ತಿದ್ದರು. ತೊಂದರೆ ಕೊಟ್ಟು ಬಿಟ್ಟ ಹೋಗಿದ್ದ ರಾಣೆಬೆನ್ನೂರ ಮಲ್ಲಪ್ಪನನ್ನು ಪ್ರೀತಿಯಿಂದಲೇ ಕರೆದುಕೊಂಡರು. ಕಂಪನಿಯಾತ್ರೆ ಸುಸೂತ್ರವಾಗಿ ಮುಂದಕ್ಕೆ ಸಾಗಿತು.

ಕಂಪನಿ ಅಥಣಿ ಕ್ಯಾಂಪಿನಲ್ಲಿದ್ದಾಗ ಮಲ್ಲಿಕಾರ್ಜುನ ಮನಸೂರರ ಜೀವನಕ್ಕೆ ಹೊಸ ತಿರುವು ಕೊಟ್ಟ ಅಪರೂಪದ ಘಟನೆಯೊಂದು ಜರುಗಿತು. ಮಾಲಕರು ಸಹಿತವಾಗಿ ಕಂಪನಿಯ ಜನರೆಲ್ಲ ಅಥಣಿಯ ಶಿವಯೋಗಿಗಳ ಮಠಕ್ಕೆ ಪ್ರಸಾದಕ್ಕೆಂದು ಹೋಗಿದ್ದರು. ಎಲ್ಲರಿಗೂ ಪ್ರಸಾದ ವಿತರಣೆ ನಡೆದಿತ್ತು. ಆ ಸಮಯಕ್ಕೆ ಒಂದು ಮೂಲೆಯಲ್ಲಿ ಲಂಡಚಣ್ಣ ಹಾಕಿಕೊಂಡ ಬಾಲಕನೊಬ್ಬ ಶ್ರೀಗಳ ಲಕ್ಷ್ಯವನ್ನು ಸೆಳೆದ. "ಈ ಹುಡಗನ್ಯಾರು" ಶ್ರೀಗಳ ಪ್ರಶ್ನೆ. ವಾಮನರಾವ ಮಾಸ್ತರರು, ಅಣ್ಣ ಬಸವರಾಜ ಹುಡುಗನ ಪರಿಚಯ ಮಾಡಿಕೊಟ್ಟರು. ಹುಡುಗನ ಅದ್ಭುತ ಹಾಡುಗಾರಿಕೆಯ ಬಗ್ಗೆ ಮಾಸ್ತರರು ಶ್ರೀಗಳ ಮುಂದೆ ಪ್ರಶಂಸೆ ಮಾಡಿದರು. ಬಾಲಕನ ಭವಿಷ್ಯ ಒಳ್ಳೆಯದಾಗಲೆಂದು ಹಾರೈಸಿ ಶಿವಯೋಗಿಗಳು ಮತ್ತಷ್ಟು ಪ್ರಸಾದವನ್ನು ಕೊಟ್ಟರು. ಎನ್ಕೆಯವರು ಬರೆದಂತೆ 'ಅಂದಿನಿಂದ ಮಲ್ಲಿಕಾರ್ಜುನನ ಭವಿಷ್ಯದ ಕ್ಷಿತಿಜವೆ ತೆರೆಯಿತು ಎನ್ನಬೇಕು'. ಪ್ರಹ್ಲಾದ, ಶ್ರೀ ಕೃಷ್ಣನ ಪಾತ್ರಗಳಿಂದ ಮಲ್ಲಿಕಾರ್ಜುನ 'ಬಾಜೀರಾವ್ ಪೇಶ್ವೆ' ನಾಟಕದಲ್ಲಿ 'ಲಕ್ಷ್ಮೀ' ಪಾತ್ರವನ್ನು ನಿರ್ವಹಿಸುವ ಮಟ್ಟಕ್ಕೆ ಏರಿದ"[೨೦].

**ಬಳ್ಳಾರಿ ಕ್ಯಾಂಪ್ ಎರಡನೆ ಬಾಜೀರಾವ್ ಪೇಶ್ವೆ:**

೧೯೨೪ರಲ್ಲಿ 'ಎರಡನೇ ಬಾಜೀರಾವ ಪೇಶ್ವೆ' ಎಂಬ ಮರಾಠಿ ಐತಿಹಾಸಿಕ ನಾಟಕವನ್ನು ಅನುವಾದಿಸಿ ವಾಮನರಾಯರು ರಂಗಕ್ಕೆ ಸಿದ್ಧಗೊಳಿಸಿದರು. ಬಾಜಿರಾವ್ ಪಾತ್ರದ ಅಭಿನಯ ಅವರದೇ, ಮಲ್ಲಿಕಾರ್ಜುನ ಮನಸೂರರು 'ಲಕ್ಷ್ಮೀ' ಪಾತ್ರವನ್ನು ಮಾಡುತ್ತಿದ್ದರು. ಕಂಪನಿ ಬಳ್ಳಾರಿಯಲ್ಲಿ ಬೀಡು ಬಿಟ್ಟಿತು. ಒಂದು ದಿನ ಹೆಸರಾಂತ ನಟ ಬಳ್ಳಾರಿಯ ರಾಘವರು ಪೇಶ್ವೆ ನಾಟಕವನ್ನು ನೋಡಿ ಅಪಾರವಾಗಿ ಮೆಚ್ಚಿಕೊಂಡರು. ಬಳ್ಳಾರಿ ಜನರಿಗೂ ಈ ನಾಟಕ ತುಂಬಾ ಹಿಡಿಸಿತು. ಅಲ್ಲಿಯ ನಾಗರೀಕರು ಮಾಸ್ತರಿಗೆ ಸನ್ಮಾನಿಸಿ, ಮಾನಪತ್ರ ಕೊಡಲು ಮುಂದಾದರು. ಬಾಜೀರಾವ್ ಪೇಶ್ವೆ ಪಾತ್ರದಲ್ಲಿ ವಾಮನರಾಯರ ಅಭಿನಯದ ವಿಶೇಷತೆ ಏನು? ಸಂಗೀತದ ಸೊಗಸೇನು? ರಂಗಕ್ಕೆ ಹೇಗೆ ಮೆರುಗು ತಂದು ಕೊಡುತ್ತಿದ್ದರೆಂಬುದನ್ನು ಮಾನ ಪತ್ರದಲ್ಲಿ ಕೊಂಡಾಡಿದರು. ಬಳ್ಳಾರಿ ರಾಘವರ ಸಮಕ್ಷಮ ಜರುಗಿದ ಈ ಸಮಾರಂಭ 'ವಿಶ್ವಗುಣಾದರ್ಶ' ಕಂಪನಿ ಜೀವನದಲ್ಲಿ ಅವಿಸ್ಮರಣೀಯವೆನಿಸಿತು.

ಬಳ್ಳಾರಿ ನಂತರ ಆದವಾನಿ, ಮೊದಲಾದ ಕಡೆ ಜಯಭೇರಿ ಹೊಡೆಯುತ್ತ ಕಂಪನಿ ಮತ್ತೆ ಮೊದಲಿನ ವರ್ಚಸ್ಸು ಪಡೆದುಕೊಂಡಿತು. ಧಾರವಾಡ ಕ್ಯಾಂಪಿನಲ್ಲಿಯೂ ಬಾಜೀರಾವ ಪೇಶ್ವೆ ನಾಟಕದ ಜಯಭೇರಿ ಮುಂದುವರಿಯಿತು. 'ಬಾಜೀರಾವ್' ಪಾತ್ರದಲ್ಲಿ ವಾಮನರಾಯರು ದಿನದಿಂದ ದಿನಕ್ಕೆ ಹೊಸತನ ತೋರಿಸುತ್ತಿದ್ದರು. ಆ ಪಾತ್ರ ಇನ್ನು ಶ್ರೇಷ್ಠಮಟ್ಟದ್ದಾಗಬೇಕೆಂಬ ಅಭಿಲಾಷೆಯಿಂದ ಧಾರವಾಡದಲ್ಲಿ ಪ್ರಯತ್ನ ಪೂರ್ವಕವಾಗಿ ಬಾಜೀರಾವನ ಶೃಂಗಾರಭರಿತ ಫೋಟೋವನ್ನು ಹುಡುಕಿ ತಂದರು. ಅಲ್ಲಿರುವಂತೆಯೇ ವೇಷ ಭೂಷಣಗಳನ್ನು ಮಾಡಿಕೊಂಡು ರಂಗದ ಮೇಲೆ ಬರುತ್ತಿದ್ದರು.[೨೧] ಪ್ರೇಕ್ಷಕರಿಗೆ ರಾಜಗಾಂಭಿರ್ಯದ ಪೇಶ್ವೆಯನ್ನು ನೋಡಿದಷ್ಟು ಸಂತಸವಾಗುತ್ತಿತ್ತೆಂದು ಹಿರಿಯರ ಅಭಿಪ್ರಾಯ. ಧಾರವಾಡದಲ್ಲಿ ಹೊಸತಾಗಿ ಕಟ್ಟಿದ್ದ 'ಅನ್ನಪೂರ್ಣಾ ಥೇಟರ್‌ನಲ್ಲಿಯ ಮೂರು ತಿಂಗಳು ವಾಸ್ತವ್ಯ ಕಂಪನಿಯ ಜೀವನದಲ್ಲಿ ಸ್ಮರಣೀಯವೆನಿಸಿತು. '೨ನೆ ಬಾಜೀರಾವ್ ಪೇಶ್ವೆ' ಈ ಐತಿಹಾಸಿಕ ನಾಟಕದ ಜನಪ್ರೀಯತೆ ಬ್ರಿಟಿಷ್, ಸರಕಾರಕ್ಕೆ ತಲೆನೋವಾಯಿತು.

ಎರಡನೇ ಬಾಜೀರಾವ್ ಭೋಗವಿಲಾಸದ ದೊರೆ, ಅದರಿಂದಾಗಿ ಅವನಿಗೆ 'ಪೇಶ್ವೆ' ಪ್ರಭುತ್ವವನ್ನು ಕಾಪಾಡಿಕೊಳ್ಳಲು ಆಗಲಿಲ್ಲ. ಒಳಗೊಳಗೆ ಬ್ರಿಟಿಷರಿಗೆ ಶಾಮೀಲನಾಗಿ ಗುಲಾಮಗಿರಿಯ ಸಂಕೋಲೆಯನ್ನು ಕೊರಳ ಹಾರದಂತೆ ಧರಿಸುವನು. ಈ ಪಾತ್ರವನ್ನು ವಾಮನರಾವ್ ಮಾಸ್ತರರು ಪರಿಣಾಮಕಾರಿಯಾಗಿ ಅಭಿನಯಿಸುತ್ತಿದ್ದರು. ದೇಶಾಭಿಮಾನದ ಬಾಪೂ ಗೋಖಲೆ ಪಾತ್ರದಲ್ಲಿ ಕೇಶವಭಟ್ಟ ಮಿಶ್ರೀಕೋಟಿಯವರು ಪ್ರೇಕ್ಷಕರಲ್ಲಿ ರೋಮಾಂಚನವನ್ನು ಮೂಡಿಸುತ್ತಿದ್ದರು. "ತೋರುವೆ ನಾ ಸಮರ ಶೌರ್ಯ, ವೈರಿಗಳಿಗೀಗ' "ಧಾರುಣಿಯ ಚಕಿತ ಮಾಳ್ಪೆ" ಎಂಬ 'ಶಂಕರಾ' ರಾಗದ ವೀರಾವೇಶದ ಹಾಡು ಜನರಲ್ಲಿ ಹೊಸ ಸ್ಫೂರ್ತಿಯನ್ನು ತುಂಬುತ್ತಿತ್ತು. ಲಕ್ಷ್ಮೀಯ ಪಾತ್ರದಲ್ಲಿ ಮಲ್ಲಿಕಾರ್ಜುನ ಮನಸೂರ, ಠಾಕೂರದಾಸರ

ಪಾತ್ರದಲ್ಲಿ ರಾಣೆಬೆನ್ನೂರ ಮಲ್ಲಪ್ಪ ಅಭಿನಯಿಸಿ ನಾಟಕಕ್ಕೆ ಶೋಭೆ ತರುತ್ತಿದ್ದರು. ಈ ನಾಟಕದ ಪ್ರದರ್ಶನಕ್ಕೆ ಪೂರ್ವದಲ್ಲಿ ಮ್ಯಾಜಿಸ್ಟ್ರೇಟ್ ಕಚೇರಿಯಿಂದ ಪರವಾನಗಿ ಪಡೆಯಬೇಕಾಗುತ್ತಿತ್ತು. ನಾಟಕದಲ್ಲಿ ಬ್ರೀಟಿಷ ಸರಕಾರದ ವಿರುದ್ಧ ಯಾವುದೇ ಮಾತಿಲ್ಲವೆಂಬುದನ್ನು ಸಾಬೀತುಪಡಿಸಲು ನಾಟಕದ ಹಸ್ತಪ್ರತಿಯನ್ನು ಕಚೇರಿಗೆ ಹಾಜರಪಡಿಸಬೇಕಾಗುತ್ತಿತ್ತು. ಒಂದೊಂದು ಸಲ ಕಂಪನಿ ಮ್ಯಾನೇಜರರು ಕಲೆಕ್ಟರರಿಗೆ ಭೇಟ್ಟಿಯಾಗಿ ನಾಟಕದ ವಿವರಣೆ ಕೊಡಬೇಕಾಗುತ್ತಿತ್ತು. ಹೀಗೆ ಈ ನಾಟಕದ ಪರಿಣಾಮ ಅಂದಿನ ಸ್ವಾತಂತ್ರ್ಯ ಚಳುವಳಿಯ ಸನ್ನಿವೇಶದಲ್ಲಿ ಅದ್ಭುತವೆನಿಸಿತ್ತು.

**ಕಲಾವಿದರ ಸಮಸ್ಯೆ:**

'ಸಖೂಬಾಯಿ' ಸಂದೇಹ ಸಾಮ್ರಾಜ್ಯ 'ಬಾಜೀರಾವ್ ಪೇಶ್ವೆ' ನಾಟಕಗಳು ಕಂಪನಿಗೆ ಆಸರೆಯಾದವು. ಮಾಸ್ತರ ಮತ್ತು ಗಂಗೂಬಾಯಿ ರಸಿಕ ಜೋಡಿ ಮನಮೋಹಕವಾಗಿತ್ತು. ಅನೇಕ ಕಡೆಗಳಲ್ಲೆಲ್ಲ ಉತ್ತಮ ಲಾಭವನ್ನು ತಂದು ಕೊಟ್ಟವು. ಈ ಉತ್ಪನ್ನ, ವಿಶ್ವಗುಣಾದರ್ಶ ಕಂಪನಿಯ ಲೋಕಪ್ರಿಯತೆ ಆಗಾಗ ಗುಳೇದಗುಡ್ಡ ಕಲಾವಿದರಿಗೆ ಹೊಟ್ಟೆ ಕಿಚ್ಚನ್ನುಂಟು ಮಾಡುತ್ತಿತ್ತು. ಗಂಗೂಬಾಯಿ ಯಾವುದೋ ಕುಂಟು ನೆಪ ಹೂಡಿ 'ನನಗೆ ಹಗಲು-ರಾತ್ರಿ ನಿದ್ದೆಗೆಟ್ಟು ಆರೋಗ್ಯ ಸರಿ ಇಲ್ಲ' ಎಂದಾಗ ವಾಮನರಾಯರು ನೀವು ಕಂಪನಿಯನ್ನು ಬಿಡಬಹುದು ಎಂದು ಹೇಳಿ ಅವರ ಹಿಂದಿನ ಲೆಕ್ಕವನ್ನೆಲ್ಲಾ ಕೊಟ್ಟು ಕಳುಹಿಸಿದರು. ಅವರಿಗೆ ಅನೇಕರು ಕಂಪನಿ ಬಿಟ್ಟು ಹೋಗುವದು, ಮತ್ತೆ ಬರುವದು ಹೊಸ ವಿಷಯವಾಗಿರದೆ ಸಾಮಾನ್ಯ ವಿಷಯವಾಗಿತ್ತು. ಹೀಗಾಗಿ ಅವರು ಯಾವುದಕ್ಕೂ ಕಟ್ಟು ಬೀಳದೆ ಯಥಾ ರೀತಿಯಲ್ಲಿ ಎಲ್ಲವನ್ನು ಉದಾರ ಮನಸ್ಸಿನಿಂದ ಸ್ವೀಕರಿಸುತ್ತಿದ್ದರು.

ಗಂಗೂಬಾಯಿ ಹೋದನಂತರ ಗುರುರಾವ್ ದೇಶಪಾಂಡೆ ಮಾಸ್ತರರು ಕಂಪನಿ ಸೇರಿದರು. ಹೊಸ ಹೊಸ ಧಾಟಿಯ ರಂಗಗೀತೆಗಳನ್ನು ಮಾಸ್ತರರು ರಚಿಸಿದರು. ಹೊಸ ಧಾಟಿಯ ಚೀಜಗಳು ಗುರುರಾಯರ ಬಾಯಲ್ಲಿ ಸುಶ್ರಾವ್ಯವಾಗಿ ಬರುತ್ತಿದ್ದವು. ಅವರ ಉತ್ತಮ ಅಭಿನಯ, ಕಂಠಸಿರಿ ಕಂಪನಿಗೆ ಮತ್ತಷ್ಟು ಬಲವನ್ನು ತಂದು ಕೊಟ್ಟವು. ರಸಿಕ ಶ್ರೀಮಂತ ವರ್ಗದವರನ್ನು ಮಾಸ್ತರರು ಪಡೆದುಕೊಂಡಿದ್ದರು. ಇವರ ಉತ್ತಮ ನಾಟಕಗಳು, ಉತ್ತಮ ಸಂಗೀತ, ಅಭಿನಯಕ್ಕೆ ಅನೇಕರು ಮಾರು ಹೋಗಿದ್ದರು.

ಗುಳೇದಗುಡ್ಡ ಗಂಗೂಬಾಯಿ ಮತ್ತೆ ಕಂಪನಿ ಬಿಟ್ಟರು. ಅತ್ಯಂತ ಯಶಸ್ವಿಯಿಂದ ಸಾಗಿದ್ದ ಕಂಪನಿಯ ಯಾತ್ರೆ ಮತ್ತೆ ಮುಗ್ಗರಿಸಿತು. ಗಂಗೂಬಾಯಿ ಇಲ್ಲದೆ ನಾಟಕಗಳು ಕಳೆ ಕಟ್ಟುತ್ತಿರಲಿಲ್ಲ. ಕಲೆಕ್ಷನ್ ಕುಸಿಯಿತು. ವಾಮನರಾಯರು ತಮ್ಮಲ್ಲಿದ್ದ ಬಂಗಾರದ ಆಭರಣಗಳನ್ನು ಒತ್ತಿ ಇಟ್ಟು ಕಂಪನಿ ನಡೆಸಿದರು. ಕಂಪನಿ ನಾಲ್ಕು ತಿಂಗಳು ಹೀಗೆಯೇ ಕುಂಟುತ್ತಾ ನಡೆಯಿತು. ೧೯೨೭ರಲ್ಲಿ ಆರ್ಥಿಕ ಸ್ಥಿತಿ ಸಂಪೂರ್ಣ ಹದಗೆಟ್ಟಿತು. ಕಲಾವಿದರಿಗೆ ಸಂಬಳ ಕೊಡದೆ ಆರು ತಿಂಗಳಾಗಿತ್ತು. ಚೆನ್ನರಾಯಪಟ್ಟಣ ಕ್ಯಾಂಪಿನಲ್ಲಿ

ಕಂಪನಿ ನಿಲ್ಲಿಸುವ ತೀರ್ಮಾನಕ್ಕೆ ಬಂದರು. ಹೆಂಡತಿಯ ಮೈಮೇಲೆ ಉಳಿದಿದ್ದ ಬಂಗಾರ ಮಾರಿ ಕಲಾವಿದರ ಸಂಬಳ ಕೊಡಲು ಮುಂದಾದರು. ರಾಯರ ಈ ಪೇಚಾಟ ಕಲಾವಿದರಿಗೆ ಗೊತ್ತಾಯಿತು. ಕಲಾವಿದರೆಲ್ಲ ಕೂಡಿ "ನೀವು ಸಂಬಳ ಕೊಡದಿದ್ದರೂ ಸರಿ, ಕಂಪನಿ ಮುಂದುವರೆಯಲಿ" ಎಂದು ಧೈರ್ಯ ತುಂಬಿದರು. ಅದೇ ವೇಳೆಗೆ ಧಾರವಾಡದ ಬಂಡೋಪಂಥ ಮತ್ತು ಮಧ್ವರಾಯರ ಪ್ರಯತ್ನದಿಂದ ಗಂಗೂಬಾಯಿ ಕಂಪನಿಗೆ ಮರಳಿ ಬಂದರು ಅಷ್ಟೊತ್ತಿಗೆ ಮೈಸೂರು ಮಹಾರಾಜರಿಂದ ಆಹ್ವಾನವು ಬಂತು, ಅರಮನೆ ರಂಗಮಂದಿರದಲ್ಲಿ ಮೂರು ನಾಟಕಗಳ ಪ್ರದರ್ಶನ ಯಶಸ್ವಿಯಾಗಿ ಜರುಗಿತು. ಮಹಾರಾಜರು ಸಂತೋಷದಿಂದ ಐದು ಸಾವಿರ ರೂಪಾಯಿಗಳನ್ನು ರಾಯರಿಗೆ ಬಹುಮಾನವಾಗಿ ಕೊಟ್ಟರು. ರಾಯರು ಬಾಕಿ ಉಳಿದ ನಟರ ಸಂಬಳವನ್ನೆಲ್ಲಾ ಕೊಟ್ಟು ಮೂರು ತಿಂಗಳ ಸಂಬಳವನ್ನು ಮುಂಗಡವಾಗಿ ಕೊಟ್ಟರು. ತುಮಕೂರಿನಿಂದ ಧಾರವಾಡ, ಹುಬ್ಬಳ್ಳಿ, ವಿಜಾಪೂರ ನಗರಗಳಲ್ಲಿ ನಾಟಕಗಳನ್ನಾಡಿ ಬಾಗಲಕೋಟೆಗೆ ಬರುತ್ತಿದ್ದಂತೆಯೇ ಗಂಗೂಬಾಯಿ ಗುಳೇದಗುಡ್ಡ ಮತ್ತೆ ಕಂಪನಿ ಬಿಟ್ಟು ಹೋದರು.

ಗಂಗೂಬಾಯಿಯ ಆಗಮನ-ನಿರ್ಗಮನಗಳು ಕಂಪನಿಯ ದಿನಚರಿಗೆ ರೂಢಿಯಾಗಿದ್ದವು. ವಾಮನರಾಯರು ನಟಿಯ ಶೋಧ ನಡೆಸಿದರು. ಅದೇ ವೇಳೆಗೆ ಗರುಡ ಸದಾಶಿವರಾಯರ ಮಂಡಳಿಯಿಂದ ಹೊರ ಬಂದ ದಾದಮ್ಮನವರ ಕುಟುಂಬ ಈ ಕಂಪನಿಯನ್ನು ಪ್ರವೇಶಿಸಿತು. ಕಂಪನಿಯ ಭವಿಷ್ಯದ ದೃಷ್ಟಿಯಿಂದ ಈ ಘಟನೆ ಅನುಕೂಲವಾಗಿ ಪರಿಣಮಿಸಿತು. ದಾದಮ್ಮನವರ ಕುಟುಂಬದಲ್ಲಿದ್ದ ಸದಸ್ಯರೆಂದರೆ ಶ್ರೀಮತಿ ಸಂಜೀವಮ್ಮ ಅವಳ ಸಹೋದರಿ ಹಣುಮಂತೆವ್ವ, ಅವಳ ಸಹೋದರರಾದ ಹಣುಮಂತಪ್ಪ ಮತ್ತು ದುರ್ಗಾದಾಸ, ಇವರೆಲ್ಲ ಗರುಡರ ಕಂಪನಿಯ ನುರಿತ ನಟರಾಗಿದ್ದರು. ಹೀಗಾಗಿ ಮತ್ತೆ ವಿಶ್ವಗುಣಾದರ್ಶದ ನಾಟಕಗಳು ಮುಂದುವರಿದವು, ಸಂಜೀವಮ್ಮ ಗಂಗೂಬಾಯಿಯ ಸ್ಥಾನ ತುಂಬಿದಳು, ಹಣುಮಂತೆವ್ವ ಕರ್ನಾಟಕಿ ಸಂಗೀತದಲ್ಲಿ ಸಾಧನೆ ಮಾಡಿದವಳಾಗಿದ್ದಳು. ಇದೇ ವೇಳೆಗೆ ಬಸವರಾಜ ಮನಸೂರ ಕಂಪನಿ ಬಿಟ್ಟರು. ಇವರ ಸ್ಥಾನದಲ್ಲಿ ದಾದಮ್ಮನವರ ಹನುಮಂತಪ್ಪನಿಗೆ ತರಬೇತಿ ನೀಡಲಾಯಿತು. ನಾಟಕಗಳು ಚೆನ್ನಾಗಿ ನಡೆದವು.

೧೯೨೮ ರ ಸಂದರ್ಭ 'ವಿಶ್ವಗುಣಾದರ್ಶ' ಹುಬ್ಬಳ್ಳಿ ಕ್ಯಾಂಪ್ ಮಾಡಿತ್ತು. ಹೊಸ ಕಲಾವಿದರ ಸಲುವಾಗಿ ರಾಯರು ಹೊಸ ನಾಟಕವೊಂದನ್ನು ಕೂಡಿಸಬೇಕೆಂದು ಮರಾಠಿಯ 'ಸಿಂಹಾಚಾ ಛಾವಾ' (ಸಿಂಹದ ಮರಿ) ಕೈಗೆತ್ತಿಕೊಂಡರು. ಇದನ್ನು 'ಶುಕ್ಲ' ಎಂಬ ನಾಟಕಕಾರರು ಬರೆದಿದ್ದರು. ರಾಯರು ಇದನ್ನು ಅನುವಾದಿಸಿ 'ವೀರ ಅಭಿಮನ್ಯು' ಎಂದು ಹೆಸರಿಟ್ಟರು. ಕನ್ನಡ ರಂಗಭೂಮಿಯ ರಸಿಕರಿಗೆ ರುಚಿಸುವಂತೆ ರಂಗಗೀತೆಗಳನ್ನು, ಸಂಭಾಷಣೆಗಳನ್ನು ರಚಿಸಿದರು. ಮೂರು ತಿಂಗಳು ಕಾಲ ಈ ನಾಟಕದ ತಾಲೀಮು ನಡೆಯಿತು. ಹಿಂದೂಸ್ತಾನಿ ಸಂಗೀತ ಕಲಿಯಲು ಹೋಗಿದ್ದ ಮಲ್ಲಿಕಾರ್ಜುನ ಮನಸೂರರು

ಮತ್ತೆ ವಿಶ್ವಗುಣಾದರ್ಶ ಕಂಪನಿಗೆ ಬಂದರು. ಈ ನಾಟಕದ ಹಾಡುಗಳಿಗೆ ಅವರೇ ಸಂಗೀತ ನಿರ್ದೇಶನ ಮಾಡಿದರು. ಜನಾರ್ಧನ ಪೆಂಟರ್‌ನಿಂದ ರಂಗಪರದೆಗಳು ರಚನೆಯಾದವು. ಟ್ರಾನ್ಸಫರ್ ಸೀನುಗಳ ಮೂಲಕ ಕೆಲವು ರಂಗಚಮತ್ಕಾರಗಳನ್ನು ಅಳವಡಿಸಿದರು. ವಾಮನರಾಯರು ತುಂಬಾ ಮುತುವರ್ಜಿವಹಿಸಿ ಈ ನಾಟಕ ಸಿದ್ಧತೆ ಮಾಡಿದರು. ಅವರು ಶ್ರೀ ಕೃಷ್ಣನ ಪಾತ್ರದಲ್ಲಿ, ಮುದುಕಪ್ಪ ಕಾಕನೂರು ದ್ರೋಣಾಚಾರ್ಯ, ಬೇವೂರ ಬಾಷಾಸಾಹೇಬ ಅರ್ಜುನ, ದಾದಮ್ಮನವರ ಹನುಮಂತಪ್ಪ ಅಭಿಮನ್ಯು, ದುರ್ಗಾದಾಸ-ಜಯದ್ರಥ, ಸಂಗನಬಸಪ್ಪ ಕುಕನೂರ ಮೇಘನಾದ, ದಾದಮ್ಮನವರ ಸಂಜೀವಮ್ಮ-ಸುಭದ್ರಾ, ಹನುಮಂತೆವ್ವ-ಉತ್ತರೆ, ಗುರುಮೂರ್ತಿ-ಸೌದಾಮಿನಿ, ಹೀಗೆ ನಟ-ನಟಿಯರಿಗೆ ಪಾತ್ರಗಳು ತುಂಬಾ ಹೊಂದಿಕೊಂಡವು. ರಾಯರ ಶ್ರದ್ಧೆ, ತರಬೇತಿ, ತಾಲೀಮುಗಳಿಂದ ನಾಟಕ ರಂಗಕ್ಕೆ ಸಿದ್ಧವಾಯಿತು. ಹುಬ್ಬಳ್ಳಿಯಲ್ಲಿಯೇ ಅದರ ಮೊದಲ ಪ್ರಯೋಗವಾಯಿತು. ಉತ್ತಮ ಸಂಗೀತ, ನಟ-ನಟಿಯರ ಅಭಿನಯಕೌಶಲ್ಯ, ಚಿತ್ತಾಕರ್ಷಕ, ಸನ್ನಿವೇಶಗಳಿಂದ ನಾಟಕ ರಂಗೇರಿ ಅಪೂರ್ವ ಯಶಸ್ಸನ್ನು ತಂದುಕೊಟ್ಟಿತು. ದಿನದಿಂದ ದಿನಕ್ಕೆ ನಾಟಕದ ಪ್ರಚಾರ ಹುಬ್ಬಳ್ಳಿ ಸುತ್ತಮುತ್ತಲೂ ಹರಡಿತು. ನೆರೆ ಊರುಗಳಿಂದಲೂ ಜನ ನಾಟಕ ನೋಡಲು ಬರತೊಡಗಿದರು.

ಪ್ರಯೋಗದಿಂದ ಪ್ರಯೋಗಕ್ಕೆ ವಿಶ್ವಗುಣಾದರ್ಶದ ಕೀರ್ತಿ ಮತ್ತೆ ಬೆಳಗತೊಡಗಿತು. "ದಿನದಿಂದ ದಿನಕ್ಕೆ ನಾಟಕ ಕೀರ್ತಿ ಹಬ್ಬಿ ಜನದಟ್ಟಣೆ ಹೆಚ್ಚಿತು. "ದ್ರೋಣಾಚಾರ್ಯ-ಉತ್ತರೆಯರ ಮೂಲಕ ಟೆಂಪೋ ಬರುವ ನಾಟ್ಯಪೂರ್ಣ ಸನ್ನಿವೇಶದ ಸಂಭಾಷಣೆಗಳು, ಶ್ರೀಕೃಷ್ಣನ ಪಾತ್ರದಲ್ಲಿ ವಾಮನರಾಯರ 'ಮಹಾಪಾಂಡವಾ ಪ್ರಿಯಾ' ಎಂಬ ಭೈರವಿಯಿಂದ ನಾಟಕಕ್ಕೆ ಮುಸುಕುತ್ತಿದ್ದ ದುರಂತದ ಛಾಯೆ, ಸುಭದ್ರೆಯ 'ಪೋಗು ಪರಾಕ್ರಮಿಯೆ ಸಮರಕೆ' ಎಂಬ ಹೃದ್ಯವಾದ ಗೀತದೊಂದಿಗೆ ಗಂಟೆಯಾಗಿ ಮೊದಲನೆಯ ಅಂಕ ಮುಗಿಯಲು, ಸಮರ ಸನ್ನಿವೇಶ ನಾಟಕಕ್ಕೆ ಕಳೆಕಟ್ಟುತ್ತಿದ್ದ ರೀತಿ ಇವೆಲ್ಲ ಅವಿಸ್ಮರಣೀಯ' ಎನ್ನುತ್ತಾರೆ ಎನ್ಕೆ.[೨೨] ಮೂರನೆಯ ಅಂಕಿನ ಪ್ರಾರಂಭದಲ್ಲಿ ಶ್ರೀಕೃಷ್ಣನಾಗಿ ವಾಮನರಾಯರ ಪ್ರವೇಶ ಪ್ರೇಕ್ಷಕರಲ್ಲಿ ಚುರುಕು ಹುಟ್ಟಿಸುತ್ತಿತ್ತು. ಕೌರವ ಕಾರಸ್ಥಾನಕ್ಕೆ ಬಲಿಯಾದ ಮುಗ್ದವೀರನ ದುರಂತ ಛಾಯೆಯಿಂದ ರಂಗಮಂದಿರ ನಿಟ್ಟುಸಿರಿನಿಂದ ತುಂಬಿದ ಸಂದರ್ಭ, ಕೈಯಲ್ಲಿ ಸುದರ್ಶನ ಚಕ್ರ ಹಿಡಿದು ಅರ್ಜುನನೊಂದಿಗೆ 'ಭಕ್ತಪರಿಪಾಲನಾ ಸತ್ಯಮಯ ಜೀವನಾ' ಎಂದು ಖಮಾಜ ರಾಗದಲ್ಲಿ ಹಾಡುತ್ತಿದ್ದರೆ ಪ್ರೇಕ್ಷಕರಲ್ಲಿ ನವಚೈತನ್ಯ ಒಡಮೂಡುತ್ತಿತ್ತು. ನಾರಾಯಣರಾವ ವ್ಯಾಸರ 'ರಾಧೆ ಕೃಷ್ಣ ಬೋಲ್ ಮುಖಸ' ಚಾಲಿನ 'ಪ್ರಾಣಪತಿಯ ವಿರಹತಾಪ ತಾಳಲೆಂತು ನಾ ಸಖಿಯೆ' ಎಂದು ಪೀಲುರಾಗದಲ್ಲಿ ಉತ್ತರೆಯ ಪಾತ್ರಧಾರಿ ಹಣಮಂತೆವ್ವ ತೋರುವ ವಿರಹನಟನೆ ನಾಟಕಕ್ಕೆ ರಂಗೇರಿಸುತ್ತಿತ್ತು' ಸಂಗನಬಸಪ್ಪ ಮತ್ತು ಗುರುಮೂರ್ತಿಯವರ ಹಾಸ್ಯಾಭಿನಯದಿಂದ ಪ್ರೇಕ್ಷಕರೆಲ್ಲ ನಗೆಗಡಲಲ್ಲಿ ಮುಳುಗುತ್ತಿದ್ದರು. ಹೀಗೆ ನವರಸಭರಿತವಾಗಿ ವಿಜೃಂಭಿಸುತ್ತಿದ್ದ ನಾಟಕ ಲಳ ಪ್ರಯೋಗಗಳಿಂದ ದಾಖಲೆ ನಿರ್ಮಿಸಿತು".[೨೩]

ಮಲ್ಲಿಕಾರ್ಜುನ ಮನಸೂರರು ಈ ನಾಟಕದಲ್ಲಿ 'ಶಕುನಿ'ಯ ಪಾತ್ರ ನಿರ್ವಹಿಸುತ್ತಿದ್ದ ರೀತಿ ಎನ್ಕೆ ಅವರ ಚಿತ್ರಣದಿಂದಲೇ ತಿಳಿಯಬೇಕು. 'ರಣರಂಗದಿ ಧೀರರಾಗಿ ಭಯವ ಪಡದೆ ಅರಿಯ ಹೃದಯ ಭೇದಿಸುತೆ ಚತುರತನದೆ' ಎಂಬ ದೇಸಕಾರ ರಾಗದ ಧಾಟಿಯಲ್ಲಿ ತಾನಿನ ಮೇಲೆ ತಾನು ಎತ್ತಿದಾಗ ಪ್ರೇಕ್ಷಕ ವೃಂದ ಸ್ತಂಭಿತವಾಗುತ್ತಿತ್ತು. ಮೊದಲನೆಯ ಪ್ರವೇಶದ ಈ ಕೊನೆಯ ಗೀತನಾಟಕಕ್ಕೆ ಒಂದು 'ಉಠಾವ್' ಕೊಡುತ್ತಿತ್ತು. ಎರಡನೆಯ ಅಂಕದಲ್ಲಿಯೂ 'ಖ್ಯಾಲಚೀಜದ ಧಾಟಿಯಲ್ಲಿ ಹಾಡುತ್ತಿದ್ದಾಗ ತಪ್ಪದೇ 'ಒನ್ಸಮೋರ್' ಬೀಳುತ್ತಿದ್ದವಂತೆ. ಅಭಿಮನ್ಯು ಪಾತ್ರದಲ್ಲಿ – ಹನುಮಂತಪ್ಪ, ಉತ್ತರೆಯ ಪಾತ್ರದಲ್ಲಿ ಹಣುಮಂತೆವ್ವ, ಇವರಿಬ್ಬರ ಹಾಡು, ಅಭಿನಯಪ್ರಬುದ್ಧ ಕಲಾವಿದರ ಪಕ್ಕದಲ್ಲಿ ಮುಗ್ಧತೇಜದಿಂದ ಆಕರ್ಷಕವೆನಿಸುತ್ತಿತ್ತು.

'ಅಭಿಮನ್ಯು' ನಾಟಕದ ದೃಶ್ಯಾವಳಿಗಳೂ ಚಿತ್ತಾಕರ್ಷಕವಾಗಿದ್ದವು. ಕೊನೆಯ ಸನ್ನಿವೇಶದಲ್ಲಿ ಸುದರ್ಶನ ಚಕ್ರವು ತಿರುಗುತ್ತ ಸೂರ್ಯಮಂಡಲವನ್ನು ಮರೆ ಮಾಡುವ, ಜಯದ್ರಥನ ವಧೆಯ ನಂತರ ಸೂರ್ಯಮಂಡಲ ಮತ್ತೆ ಬೆಳಗುವ ಹಾಗೂ ವೀರ ಅಭಿಮನ್ಯುವಿನ ಸ್ವರ್ಗಾರೋಹಣದ ಘಟನೆಗಳು ಟ್ರಾನ್ಸಫರ ಸೀನಿನ ತಂತ್ರದಲ್ಲಿ ತೋರಿಸಲಾಗುತ್ತಿತ್ತು.

ಸ್ವರ್ಗದಲ್ಲಿ ಅಭಿಮನ್ಯುವಿನನ್ನು ತೋರಿಸುವಾಗ 'ಅದೋ ನೋಡಿರಿ, ಸ್ವರ್ಗಸಿಂಹಾಸನದ ಮೇಲೆ ಆನಂದದಿಂದ ವಿರಾಜಮಾನನಾಗಿದ್ದಾನೆ. ಸ್ವದೇಶಕ್ಕೋಸ್ಕರ, ಸ್ವಜನರ ಉದ್ಧಾರದ ಸಲುವಾಗಿ ತನ್ನ ಪ್ರಾಣವನ್ನೇ ಅರ್ಪಿಸಿದಂತಹ ವೀರನು. ಅವನು ವೀರನಾದ ಭರತಪುತ್ರನು' ಎಂಬ ಶ್ರೀಕೃಷ್ಣನ ಮಾತು ಅಂದಿನ ರಾಷ್ಟ್ರೀಯ ಚಳುವಳಿಗಾರರಿಗೆ ಸ್ಫೂರ್ತಿ ತುಂಬುತ್ತಿತ್ತು. ಪ್ರತಿದಿನವೂ ನಾಟಕ. ಮೂರು ತಿಂಗಳು ಕಾಲ ಹುಬ್ಬಳ್ಳಿಯಲ್ಲಿ 'ವೀರ ಅಭಿಮನ್ಯು' ನಾಟಕದ ಜಯಭೇರಿಯಿಂದ ಸಾಕಷ್ಟು ಕಲೆಕ್ಷನ ಆಯಿತು. ಈ ನಾಟಕದ ಆದಾಯದಿಂದಲೇ ವಾಮನರಾಯರು ಅಣ್ಣಿಗೇರಿಯಲ್ಲಿ ಹೊಲ ಖರೀದಿಸಿದರು. ಅದಕ್ಕೆ ಅವರು 'ಅಭಿಮನ್ಯುವಿನ ಹೊಲ' ಎಂದು ಕರೆಯುತ್ತಿದ್ದರು.[೨೪] ವಿಶ್ವಗುಣಾದರ್ಶ ಕಂಪನಿ ಚರಿತ್ರೆಯಲ್ಲಿ 'ಅಭಿಮನ್ಯು' ನಾಟಕ ಅಪೂರ್ವ ದಾಖಲೆಯೆನಿಸಿತು.

**ಕಂಪನಿ ಮುಚ್ಚಿತು:**

'ಅಭಿಮನ್ಯು' ನಾಟಕದ ಯಶಸ್ಸಿನ ಭರಾಟಿಯಲ್ಲಿ ಮೂರ್ನಾಲ್ಕು ವರುಷ ಕಂಪನಿಯ ಯಾತ್ರೆ ಸರಾಗವಾಯಿತು. ನಾಡಿನ ತುಂಬ ಮತ್ತೊಂದಾವರ್ತಿ ಸಂಚಾರವಾಯಿತು. ೧೯೩೧ ರಲ್ಲಿ ವಾಮನರಾಯರಿಗೆ ನಾಟಕದ ಸಂಸಾರ ಸಾಕೆನಿಸಿತು. ಆದರೆ ಅದೇ ವರ್ಷ ಮೊಮ್ಮಗ ಹುಟ್ಟಿದ್ದ. 'ಅವನ ಕಾಲಗುಣದಿಂದಾಗಿಯೇ ಕಂಪನಿ ನಿಂತಿತು ಎಂದಾಗಬಾರದು' ಎಂದು ಹೆಂಡತಿ ಹೇಳಿದಾಗ ರಾಯರು ಮತ್ತೆ ಕಂಪನಿರಥವನ್ನು ಮುಂದಕ್ಕೆ ಎಳೆದರು. ೧೯೩೨ ರಿಂದ ಕಷ್ಟದ ದಿನಗಳು ಹೆಚ್ಚಾದವು ಜೊತೆಗೆ ಆರೋಗ್ಯದಲ್ಲಿಯೂ ಏರಿಳಿತಗಳು ಕಾಣಿಸತೊಡಗಿದವು. ಮೇಕಪ್ಪಿಗೆಂದು ಕನ್ನಡಿ ಎದುರು ಕುಳಿತಾಗ,

ನೆರೆತ ಕೂದಲು ಮುಖದ ಮೇಲಿನ ನಿರಿಗೆಗಳನ್ನು ನೋಡಿ 'ಇನ್ನು ನಾಯಕನ ಪಾತ್ರ ಒಪ್ಪದು' ಎನಿಸತೊಡಗಿತು.

೧೯೩೪ಳ ಜೂನ ತಿಂಗಳಲ್ಲಿ ಬೆಳಗಾವಿ ಕ್ಯಾಂಪ್ ನಾಟಕಗಳಿಂದ ನಿರೀಕ್ಷಿತ ಆದಾಯ ಬರಲಿಲ್ಲ ಬಂದಿದ್ದರಲ್ಲಿ ಕಂಪನಿ ನಡೆಸುವುದು ಸಾಧ್ಯವಾಗಲಿಲ್ಲ. ಸಾಲ ಮಾಡಲೂ ಧೈರ್ಯ ಸಾಲಲಿಲ್ಲ. ನಟ – ನಟಿಯರನ್ನು ಕರೆದು ರಾಯರು ತಮ್ಮ ಪರಿಸ್ಥಿತಿಯನ್ನು ವಿವರಿಸಿದರು. ಕಂಪನಿ ಮುಚ್ಚುವ ನಿರ್ಧಾರ ತಿಳಿಸಿದರು. ಕಲಾವಿದರು ಅಸಹಾಯಕರಾಗಿದ್ದರು. ಆಗಿನ ಅವರ ಮನಸ್ಥಿತಿ, ಮನೆತನದ ಹೊಣೆಗಾರಿಕೆಯನ್ನು ಮನಗಂಡು ಸುಮ್ಮನೆ ಕುಳಿತರು. ಬೆಳಗಾವಿಯ ಶಿವಾನಂದ ಥೇಟರಿನಲ್ಲಿ ಕಂಪನಿಯ ಬಾಗಿಲು ಮುಚ್ಚಿತು.[೨೫]

ಹೀಗೆ ಅಖಂಡ ಇಪ್ಪತ್ತು ವರುಷಗಳ ಕಾಲ ಕನ್ನಡ ರಂಗಭೂಮಿಯಲ್ಲಿ ವಿಜೃಂಭಿಸಿದ, ರಂಗ ಸಂಗೀತ ಪರಂಪರೆಗೆ ಅದ್ಭುತ ಕೊಡುಗೆಯನ್ನಿತ್ತು, ಗಾಯಕ–ಕಲಾವಿದರನ್ನು ರೂಪಿಸಿದ ವಿಶ್ವಗುಣಾದರ್ಶ ನಾಟಕ ಮಂಡಳಿ ರಂಗಸೇವೆಯಿಂದ ನಿರ್ಗಮಿಸಿದ್ದು ರಂಗಭೂಮಿಯ ವೈಭವದ ಒಂದು ಅಧ್ಯಾಯ ಮುಗಿದಂತಾಯಿತು.

**ಅ: ಪ್ರಮುಖ ಕಲಾವಿದರು:**

ವಿಶ್ವಗುಣಾದರ್ಶ ನಾಟಕ ಮಂಡಳಿ ೧೯೧೪ ರಿಂದ ೧೯೩೪ ರ ವರೆಗೆ ಅಸ್ತಿತ್ವದಲ್ಲಿತ್ತು. ಕರ್ನಾಟಕ ವೃತ್ತಿರಂಗಭೂಮಿಯ ಉಚ್ಛ್ರಾಯ ಕಾಲವಿದು. ನಟನು ನಾಟಕದ ಕೇಂದ್ರವಾಗಿದ್ದ. ವೃತ್ತಿರಂಗಭೂಮಿ ನಟಪರಂಪರೆಯನ್ನು ಹುಟ್ಟುಹಾಕಿತ್ತು. ನಾಟಕದಲ್ಲಿ ಯಾವ ನಟನು ಅಭಿನಯಿಸುತ್ತಾನೆ? ಯಾವ ನಟಿ ನಟಿಸುತ್ತಾಳೆ? ಎಂದು ಕೇಳಿ ಪ್ರೇಕ್ಷಕರು ಥೇಟರ್ ಕಡೆಗೆ ಹೆಜ್ಜೆ ಹಾಕುತ್ತಿದ್ದರು. ನಾಟಕಕಾರ, ನಿರ್ದೇಶಕರನ್ನು ಹಿಂದೆ ಹಾಕಿ ನಟನೇ ರಂಗದ ಮೇಲೆ ಸಂಭ್ರಮಿಸುತ್ತಿದ್ದನು. ಇಲ್ಲಿ ಒಂದು ಪ್ರಸಂಗ ಉಲ್ಲೇಖಿಸಬೇಕು. ಒಮ್ಮೆ ಶಿರಹಟ್ಟಿ ಕಂಪನಿಯು ಶಿಕಾರಿಪುರಕ್ಕೆ ಹೊರಟಿತ್ತು ಅಲ್ಲಿ "ರಾಮಾಂಜನೇಯ ಯುದ್ಧ ಆಡುವುದೆಂದು ಮೊದಲೇ ಪ್ರಚಾರ ಮಾಡಲಾಗಿತ್ತು. ವೆಂಕೋಬರಾಯರ ಬಸ್ಸು ಊರನ್ನು ತಲುಪುತ್ತಲೇ ಜನಸಮೂಹ ಎದುರಾಯಿತು. ಏನೆಂದು ತಿಳಿಯದೇ ವೆಂಕೋಬರಾಯರು ಕಾತುರಗೊಂಡರು ನಂಜುಂಡಯ್ಯ ಕೆಳಗಿಳಿಯುತ್ತಲೇ "ಕಲಿಯುಗದ ಆಂಜನೇಯನಿಗೆ ಜಯವಾಗಲಿ" ಎಂಬ ಜಯಘೋಷ ಮುಗಿಲು ಮುಟ್ಟಿತು. ನಟವರ್ಗ ತಮ್ಮ ನಿವಾಸದತ್ತ ಸಾಗಿದರೂ ಜನ ನಂಜುಂಡಯ್ಯನ ಬೆನ್ನು ಬಿಡಲಿಲ್ಲ. ದಾರಿಯುದ್ದಕ್ಕೂ ಹೂಮಾಲೆ ಅರ್ಪಿಸಿ ಆರತಿ ಬೆಳಗಿದರು"[೨೬] ನಂಜುಂಡಯ್ಯ ಆಂಜನೇಯನ ಪಾತ್ರಕ್ಕೆ ಹೆಸರಾದವರು. ಆ ಪಾತ್ರವನ್ನು ಅಭಿನಯಿಸುವುದಕ್ಕಾಗಿಯೇ ಹುಟ್ಟಿ ಬಂದಂತ್ತಿದ್ದರು. ರಾಮಾಯಣಕ್ಕೆ ಸಂಬಂಧಿಸಿದ ಕತೆ ಇರುವ, ಅದರಲ್ಲಿಯೂ ಹನುಮಂತನ ಪಾತ್ರವಿದ್ದರೆ ಅದಕ್ಕೆ ನಂಜುಂಡಯ್ಯನವರೇ ಬೇಕೆಂದು ಪ್ರೇಕ್ಷಕರು ಆಶೆಪಡುತ್ತಿದ್ದರು. ಕಂಪನಿ ಮಾಲೀಕರಿಗೂ ಆಗ್ರಹಪಡಿಸುತ್ತಿದ್ದರು. ಇದೇ ರೀತಿ ಅರ್ಜುನನ ಪಾತ್ರಕ್ಕಾಗಿ ಹಳ್ಳಿಗುಡಿ ಸದಾಶಿವಪ್ಪ, ಕರ್ಣನ ಪಾತ್ರಕ್ಕೆ ಹಂದಿಗನೂರು ಸಿದ್ರಾಮಪ್ಪ, ಅಶ್ವತ್ಥಾಮನ ಪಾತ್ರಕ್ಕೆ ಎಲಿವಾಳ ಸಿದ್ಧಯ್ಯಸ್ವಾಮಿ ಇರಬೇಕೆಂದು ಆ ದಿನಮಾನದ ಪ್ರೇಕ್ಷಕರು ಬಯಸುತ್ತಿದ್ದರು. ಇಂತಹ ಕಾಲದಲ್ಲಿ ವಿಶ್ವಗುಣಾದರ್ಶ ಕಂಪನಿ ಸಂಗೀತ ಪ್ರಧಾನ ನಾಟಕಗಳ ಪ್ರಯೋಗದಲ್ಲಿ ಹೆಸರುವಾಸಿಯಾಗಿತ್ತು. ಕಂಪನಿಯಲ್ಲಿ ಸಂಗೀತಬಲ್ಲ, ಸಂಗೀತದಲ್ಲಿ ಸಾಧನೆ ಮಾಡಿದ ಕಲಾವಿದರು ಇದ್ದರು.

ವಾಮನರಾವ ಮಾಸ್ತರರು ವಿಶ್ವಗುಣಾದರ್ಶ ನಾಟಕ ಮಂಡಳಿಯ ಕೇಂದ್ರವಾಗಿದ್ದರು. ಅದರ ಆಡಳಿತ, ಸಂಚಾರ, ನಾಟಕಗಳ ಪ್ರಯೋಗ, ಕಲಾವಿದರ ಆಯ್ಕೆ ಯೋಗಕ್ಷೇಮ ಎಲ್ಲವೂ ಅವರ ನಿರ್ಣಯವನ್ನು ಅವಲಂಬಿಸಿತ್ತು. ಸ್ವತಃ ಅವರು ಸಂಗೀತಜ್ಞರಾಗಿದ್ದರು, ಉತ್ತಮ ನಟರಾಗಿದ್ದರು, ಮರಾಠೀ ನಾಟಕಗಳ ಶ್ರೇಷ್ಠ ಅನುವಾದಕರಾಗಿದ್ದರು ಮತ್ತು ನಾಟಕ ಕಂಪನಿಯ ಒಳ್ಳೇಯ ಮಾಲೀಕರಾಗಿದ್ದರು. ಒಂದು ಕಂಪನಿ ನಡೆಸಲು ಬೇಕಾಗುವ ಎಲ್ಲ ಗುಣಗಳು ಅವರೊಬ್ಬರಲ್ಲಿಯೇ ಇದ್ದವು. ಅವರ ಬೆಂಬಲಕ್ಕೆ ಪತ್ನಿ ಇದ್ದರು. ನೆರವಿಗೆ ನಿಲ್ಲುವ ಗೆಳೆಯರಿದ್ದರು. ಕಷ್ಟ-ನಷ್ಟಗಳನ್ನು ತಿಳಿದುಕೊಂಡು ಸ್ಪಂದಿಸುವ ಕಲಾವಿದರಿದ್ದರು. ಆರ್ಥಿಕ ಸಂಕಷ್ಟಗಳಿಂದ ಪಾರು ಮಾಡುವ ಆಪದ್ಬಾಂಧವರಿದ್ದರು. ಇವರಿಗಿಂತ

ಮಿಗಿಲಾಗಿ ನಾಟಕ ನೋಡಿ ಪ್ರೋತ್ಸಾಹಿಸುವಂತಹ ಸದಭಿರುಚಿಯ ಪ್ರೇಕ್ಷಕರ ಬಳಗವಿತ್ತು. ಇಂಥ ರಸಿಕ ಸಮುದಾಯದ ಸಹಕಾರ ಮತ್ತು ಬೆಂಬಲದಿಂದ ವಾಮನರಾಯರು ಇಪ್ಪತ್ತು ವರುಷ ಕಂಪನಿಯನ್ನು ಚೆನ್ನಾಗಿ ನಡೆಸಿದರು. ಅವರು ಕಲಾವಿದರನ್ನು ಹೇಗೆ ನೋಡಿಕೊಳ್ಳುತ್ತಿದ್ದರೆನ್ನಲು ಅವರ ಕಂಪನಿಯಲ್ಲಿಯೇ ಇದ್ದ ಬಸವರಾಜ ಮನಸೂರರ ಮಾತುಗಳನ್ನು ಕೇಳಬೇಕು.

"ವಿಶ್ವಗುಣಾದರ್ಶ" ನಾಟಕ ಮಂಡಳಿ ನಮಗೆ ನಾಟಕ ಕಂಪನಿ ಅನಿಸಲೇ ಇಲ್ಲ. ರಾತ್ರಿ ನಾಟಕ ಆಡುವುದರಿಂದಲೇ ನಮಗೆ ನಾವು ನಾಟಕ ಕಂಪನಿಯವರೆಂದು ಗೊತ್ತಾಗಬೇಕು. ಅಲ್ಲಿ ಸದಾ ಸರ್ವದಾ ಅವಿಭಕ್ತ ಕುಟುಂಬದ ವಾತಾವರಣ ಅದೇ ಪ್ರೀತಿ ವಿಶ್ವಾಸ, ಅನ್ಯೋನ್ಯತೆ. ವಾಮನರಾಯರು ಮನೆಯ ಯಜಮಾನರಂತಿರುತ್ತಿದ್ದರು. ಅವರ ಧರ್ಮಪತ್ನಿ ನಮಗೆಲ್ಲ ಮಾತೃ ಸಮಾನ. ಕಂಪನಿಯ ಯಾವ ವ್ಯಕ್ತಿಗೆ ಕಾಯಿಲೆ ಕಸಾರಿಕೆಯಾದರೂ ಇಬ್ಬರೂ ರೋಗಿಯ ಪಕ್ಕದಲ್ಲಿರಬೇಕು. ಊಟ, ಉಪಚಾರ ಔಷಧಿಗಳಿಗೆ ಕೊರತೆಯಿಲ್ಲ. ರೋಗಿ ಗುಣಮುಖ ಆಗುವವರೆಗೂ ವಾಮನರಾವ್ ದಂಪತಿಗಳಿಂದ ನಗುಮುಖದ ಸೇವೆ. ಅವರ ದೃಷ್ಟಿಯಲ್ಲಿ ನಾವು ಸಂಬಳ ಪಡೆಯುವ ಕೂಲಿಗಳಲ್ಲ. ನನ್ನಂಥ ಹುಡುಗರು ನಮ್ಮ ತಂದೆ-ತಾಯಿಗಳಿಂದ ದೂರಿವಿದ್ದರೂ ಆ ಭಾವನೆ ನಮ್ಮಲ್ಲಿ ಎಳ್ಳಷ್ಟೂ ಮೂಡದಷ್ಟು ಜಾಗೃತೆ ವಹಿಸುತ್ತಿದ್ದರು. ನನ್ನ ಕಿರಿಯ ವಯಸ್ಸಿನಲ್ಲಿ ವಾಮನರಾಯರಂತಹ ನಿರ್ವ್ಯಸನಿ, ಸದ್ಗುಣಿ, ಸಂಭಾವಿತ ಗುರುಗಳು ದೊರೆತುದು ನಮ್ಮ ಭಾಗ್ಯ. ಅದು ಅವರು ಹಾಕಿಕೊಟ್ಟ ಮೇಲ್ಪಂಕ್ತಿ ಅದು ಇಂದಿಗೂ ನಮ್ಮೊಂದಿಗಿದೆ. ಅವರು ಕಲಿಸಿದ ಶಿಸ್ತು, ಸಂಯಮ, ಅಚ್ಚುಕಟ್ಟುತನ, ಸತತಶ್ರಮ, ನಿರ್ವ್ಯಸನ, ನಿರಾಲಸ್ಯ, ನನ್ನ ಬಾಳಸಂಗಾತಿಗಳಾಗಿ ಉಳಿದಿವೆ ಆದುದರಿಂದಲೇ ನನ್ನ ಇಳಿವಯಸ್ಸಿನಲ್ಲಿಯೂ ನಿರೋಗಿಯಾಗಿದ್ದೇನೆ[೨೭].

ಅಂದು ಇಂಥ ವಾತಾವರಣವನ್ನು ಬಯಸಿ, ಸಂಗೀತ ಕಲಿಯುವುದಕ್ಕಾಗಿಯೋ, ನಾಟಕಗಳಲ್ಲಿ ಅಭಿನಯಿಸುವುದಕ್ಕಾಗಿಯೋ ಅನೇಕ ಜನ ತರಣರು, ಕಲಾವಿದರು ವಿಶ್ವಗುಣಾದರ್ಶಕ್ಕೆ ಬರುತ್ತಿದ್ದರು. ಅವರಿಗೆಲ್ಲ ಅಲ್ಲಿ ಒಳ್ಳೆಯ ತರಬೇತಿ, ಉಪಚಾರ ಸಿಗುತ್ತಿತ್ತು. ಮಲ್ಲಿಕಾರ್ಜುನ ಮನಸೂರ, ಬಸವರಾಜ ಮನಸೂರ, ಬಸವರಾಜ ರಾಜಗುರು, ಗುರುರಾವ ದೇಶಪಾಂಡೆ, ಕೇಶವಭಟ್ಟ ಮಿಶ್ರಿಕೋಟಿ, ಗಂಗೂಬಾಯಿ ಗುಳ್ಳೇದಗುಡ್ಡ, ವಜೀರಾಸಾನಿ ಲಕ್ಷ್ಮೇಶ್ವರ ಇವರೆಲ್ಲ ವಾಮನರಾಯರ ಕಂಪನಿಯಲ್ಲಿ ಕಲಿತು ಬೆಳೆದರು. ಆಮೇಲೆ ತಮ್ಮ ತಮ್ಮ ಆಸಕ್ತಿಗೆ ಅನುಗುಣವಾಗಿ ಸಾಧನೆ ಮಾಡಿ ಅಪ್ರತಿಮ ಕಲಾವಿದರೆಂಬ ಖ್ಯಾತಿ ಪಡೆದರು. ನಾಟಕ ಕಂಪನಿ ಅನ್ನೋದು ಉಪಜೀನವಕ್ಕಾಗಿ, ಕೇವಲ ನಾಟಕಗಳನ್ನಾಡುವುದಕ್ಕೆ ಮಾತ್ರ ಸೀಮಿತವಾಗಿರಲಿಲ್ಲ, ನಾಟಕಕಲೆಗೆ ಬೇಕಾಗುವ ಸಂಸ್ಕಾರ, ಶಿಕ್ಷಣ, ಪ್ರೇಕ್ಷಕರಲ್ಲಿ ಅಭಿರುಚಿ ಬಿತ್ತುವಂತಹ ಚಟುವಟಿಕೆಗಳು ಅಲ್ಲಿ ನಡೆಯುತ್ತಿದ್ದವು.

ವಾಮನರಾಯರು ಮೊದಲು ಶಾಲೆಯಲ್ಲಿ ಶಿಕ್ಷಕರಾಗಿದ್ದರು. ರಬಕವಿ ಕಡೋಲಿ ಮುಂತಾ ಊರುಗಳಲ್ಲಿ ಶಿಕ್ಷಕವೃತ್ತಿಯ ಜೊತೆಗೆ ಅಲ್ಲಲ್ಲಿಯ ತರಣರಿಗೆ ನಟನೆ, ನಾಟಕ, ಸಂಗೀತ ಕಲಿಸುತ್ತಿದ್ದರು

ಆಕಾಲದಲ್ಲಿಯೇ ಜಮಖಂಡಿ ಸಂಸ್ಥಾನ, ಸಾಂಗಲಿ ಸಂಸ್ಥಾನಕ್ಕೆ ಮರಾಠಿ ನಾಟಕ ಕಂಪನಿಗಳು ಬರುತ್ತಿದ್ದವು. ಅವುಗಳ ಪ್ರದರ್ಶನಗಳನ್ನು ನೋಡುವ ಅವಕಾಶವನ್ನು ವಾಮನರಾಯರು ತಪ್ಪಿಸಿಕೊಳ್ಳುತ್ತಿರಲಿಲ್ಲ. ಮರಾಠಿ ನಾಟಕ ಕಂಪನಿಗಳ ನಿಕಟ ಸಂಬಂಧದಿಂದ ಅಲ್ಲಿಯ ಶಿಸ್ತು ಕಲೆಗಾರಿಕೆಯನ್ನು ತಿಳಿದವರಾಗಿದ್ದರು ಅಂತಹದೊಂದು ಪರಿಸರವನ್ನು ಕನ್ನಡದಲ್ಲಿಯೂ ಹುಟ್ಟುಹಾಕಬೇಕೆಂದು ಅವರ ಮನಸ್ಸು ತುಡಿಯುತ್ತಿತ್ತು. ಮರಾಠೀ ನಾಟಕಗಳು, ಮರಾಠೀ ನಾಟ್ಯಗೀತೆಗಳು ಮತ್ತು ಮರಾಠೀ ನಟರು ಅವರಿಗೆ ಮಾದರಿಯಾಗಿದ್ದರು. ಮರಾಠೀ ನಾಟಕ ಕಂಪನಿಗಳ ಆದರ್ಶ, ಕಲಾವಿದರ ಕೌಶಲ್ಯ ಅವರ ಕಣ್ಮುಂದೆ ಇದ್ದವು. ಅವುಗಳ ಹಾದಿಯಲ್ಲಿ ವಾಮನರಾಯರು ತಮ್ಮ ಕಂಪನಿಯನ್ನು ಸಜ್ಜುಗೊಳಿಸಿದರು. ಕಲಾವಿದರ ವ್ಯಕ್ತಿತ್ವವನ್ನು ಬೆಳೆಸಿದರು. ವಿಶ್ವಗುಣಾದರ್ಶ ಕಂಪನಿಯ ಚಟುವಟಿಕೆಗಳನ್ನು ಬಲ್ಲ ಅಂದಿನ ಹಿರಿಯರು ಇದೇ ಮಾತನ್ನು ಉಚ್ಚರಿಸುತ್ತಾರೆ. “ವಿಶ್ವಗುಣಾದರ್ಶ ನಾಟಕ ಮಂಡಳಿ............ ಮಾಸ್ತರರ ಸ್ವಭಾವಕ್ಕೆ ತಕ್ಕ ಹೆಸರು ಸ್ವಾಮೀ ಅವರ ಗುಣ, ಆದರ್ಶ ಎರಡೂ ಮೆಚ್ಚುವ ಹಾಗೇ ಇದ್ದವು”[೨೮]. ಇವರ ನೇತೃತ್ವದಲ್ಲಿ ಈ ಕಂಪನಿ ಸುಮಾರು ಇಪ್ಪತ್ತು ವರುಷ ಕರ್ನಾಟಕದಲ್ಲೆಲ್ಲ ಸಂಚರಿಸಿ ಜಯಭೇರಿ ಹೊಡೆಯಿತು.

ಇಪ್ಪತ್ತು ವರುಷಗಳ ಅವಧಿಯಲ್ಲಿ ಸುಮಾರು ಐವತ್ತಕ್ಕೂ ಹೆಚ್ಚು ಕಲಾವಿದರು ಈ ಕಂಪನಿಯಲ್ಲಿ ಆಗಿ ಹೋಗಿದ್ದಾರೆ. ಅವರಲ್ಲಿ ಅನೇಕ ಜನ ಕಲಾವಿದರ ಹೆಸರುಗಳು ಮಾತ್ರ ಕೇಳಿ ಬರುತ್ತವೆ. ಅವರ ಕುರಿತು ವಿವರವಾದ ಮಾಹಿತಿಗಳು ಲಭ್ಯವಿಲ್ಲ. ಅವುಗಳನ್ನು ಕಲೆಹಾಕಬೇಕೆಂದು ಕಲಾವಿದರ ಮನೆಗಳಿಗೆ ಹೋದರೂ ಅವರ ಸಾಧನೆ ಅವರ ಮನೆಯವರಿಗೇ ಗೊತ್ತಿಲ್ಲ. ನಮ್ಮಲ್ಲಿ ನಾಟಕವೆಂದರೆ ಉದಾಸೀನ ಭಾವ. ಇನ್ನು ನಾಟಕದವರ ಚರಿತ್ರೆ ಎಂದರೆ ತಾತ್ಸಾರ ಭಾವ. ಜನರಲ್ಲಿ ನಾವು ನಾಟಕದವರಲ್ಲ ಎಂದು ತೋರಿಸಿಕೊಡುವುದಕ್ಕಾಗಿಯೇ ಏನೋ ಕಲಾವಿದರ ಮನೆತನದವರು ನಮಗೇನು ಗೊತ್ತಿಲ್ಲ ಎಂದು ಹೇಳಿಬಿಡುತ್ತಾರೆ. ರಂಗಭೂಮಿಯ ಅಧ್ಯಯನಕ್ಕೆ ಇದೊಂದು ದೊಡ್ಡ ಕೊರತೆ ಮರಾಠೀ ರಂಗಭೂಮಿಯ ಚರಿತ್ರೆಯನ್ನು ಅತ್ಯಂತ ಶ್ರದ್ಧೆಯಿಂದ ಬರೆದಿರುವರು ಅವುಗಳಿಗೆ ಸಂಬಂಧಿಸಿದ ದಾಖಲೆಗಳನ್ನು ಅಚ್ಚುಕಟ್ಟಾಗಿ ಸಂಗ್ರಹಿಸಿರುವರು. ಇವತ್ತಿಗೂ ಅಲ್ಲಿ ಮೊದಲಿನ ನಾಟಕಗಳಲ್ಲಿನ ರಂಗಸಂಗೀತದ ಧ್ವನಿಮುದ್ರಿಕೆಗಳು ಲಭ್ಯ ಇವೆ. ಮೊದಲ ನಾಟಕ ಆಡಿದ ದಿನ, ಕಲಾವಿದರ ಹೆಸರು, ಸಂಗೀಯ ನಿರ್ದೇಶಕರು, ನಾಟಕಕಾರರು, ಅದಕ್ಕೆ ಪ್ರೇಕ್ಷಕರಿಂದ ದೊರೆತ ಪ್ರತಿಕ್ರಿಯೆಗಳು ಇವುಗಳೆನ್ನೆಲ್ಲ ಮರಾಠಿ ರಂಗಭೂಮಿಯ ಚರಿತ್ರೆಗಾರರು ಸಂಗ್ರಹಿಸಿ ಇಟ್ಟಿದ್ದಾರೆ. ಈ ಮಾತಿಗೆ ವಾಮನರಾಯರೂ ಹೊರತಾಗಿಲ್ಲ. ಇಂಥ ಮಿತಿಗಳಿಂದಾಗಿ ಕಂಪನಿಯ ಪ್ರಮುಖ ಕಲಾವಿದರನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿದೆ. ಮುಖ್ಯವಾಗಿ ಎನ್ಕೆ, ನಾಡಿಗೇರ, ಬಸವರಾಜ ಮನಸೂರ, ಕೊಟ್ಟೂರಪ್ಪ ಮತ್ತು ಎಚ್. ಕೆ. ರಂಗನಾಥ, ಹ. ವೆಂ. ಸೀತಾರಾಮಯ್ಯ, ರಾಮಕೃಷ್ಣ ಮರಾಠೆ ಮುಂತಾದವರ ಬರಹಗಳನ್ನು ಆಕರಗಳಾಗಿ ಬಳಸಿ ಕಲಾವಿದರನ್ನು ತಕ್ಕಮಟ್ಟಿಗೆ ಪರಿಚಯಿಸಲು ಪ್ರಯತ್ನಿಸಲಾಗಿದೆ. ವಾಮನರಾಯರ ಮಹತ್ವದ

ಸಾಧನೆಯೆಂದರೆ ಸ್ತ್ರೀ ಪಾತ್ರಗಳಿಗಾಗಿ ನಟಿಯರನ್ನೇ ನೇಮಕ ಮಾಡಿಕೊಂಡರು. ಈ ದಿಶೆಯಲ್ಲಿ ಕೊಣ್ಣೂರು ನಾಟಕ ಕಂಪನಿಯ ಶ್ರೀಮಂತ ಪರಂಪರೆಯನ್ನು ಇವರು ಮುಂದುವರೆಸಿದರು. ವಿಶ್ವಗುಣಾದರ್ಶ ನಾಟಕ ಕಂಪನಿಯು ಕಲಾವಿದರಿಂದ, ಕಲಾವಿದೆಯರಿಂದ ನಾಟಕಗಳ ಆಕರ್ಷಣೆ ಹೆಚ್ಚಿಸಿ ರಂಗಭೂಮಿಗೆ ವಿಶಿಷ್ಟ ಸೇವೆ ಸಲ್ಲಿಸಿದ್ದನ್ನು ಇಲ್ಲಿ ಗಮನಿಸೋಣ.

**೧) ವರವಿ ಚೆನ್ನಯ್ಯ:**

ವರವಿ ಚೆನ್ನಯ್ಯ, ವಿಶ್ವಗುಣಾದರ್ಶ ಕಂಪನಿಯ ಆರಂಭದ ದಿನಗಳಲ್ಲಿ ಸ್ತ್ರೀಪಾತ್ರ ನಿರ್ವಹಿಸುತ್ತಿದ್ದ ಪ್ರಸಿದ್ಧ ನಟರು. ಇವರ ಮುಖಭಾವ, ನಟನೆ, ಹಾಡುಗಾರಿಕೆ ಸ್ತ್ರೀ ಪಾತ್ರಕ್ಕೆ ಹೇಳಿ ಮಾಡಿಸಿದಂತಿದ್ದವು. ಇವರ ನಟನೆ ಶಿರಹಟ್ಟಿ ಕಂಪನಿಯಲ್ಲಿ ಆರಂಭವಾಯಿತು, ಶಿರಹಟ್ಟಿ ಕಂಪನಿಯ ಮಾಲೀಕರಾದ ವೆಂಕೋಬರಾಯರು ಶಿರಹಟ್ಟಿಯಲ್ಲಿಯೇ ಇದ್ದ ಶ್ರೀನಿವಾಸ ನರಸಿಂಹ ಹುಜರಾತ್ ಮತ್ತು ಶ್ರೀನಿವಾಸ ಶಾಮಜಿ ಬಾಳೆಹೊಸೂರ ಎಂಬ ಇಬ್ಬರು ಶಾಲಾಮಾಸ್ತರರಿಂದ 'ಪದ್ಮಾವತಿ ಪರಿಣಯ' ನಾಟಕ ಬರೆಸಿದರು. ಅದರಲ್ಲಿ ಪಾತ್ರವಹಿಸಬೇಕಾದ ಕಲಾವಿದರ ಹುಡುಕಾಟದಲ್ಲಿದ್ದಾಗ ವರವಿ ಚೆನ್ನಯ್ಯ, ಕೊಟ್ಟೂರು ಬಸವಯ್ಯ ಎಂಬ ಇಬ್ಬರು ತರುಣರು ಸಿಕ್ಕರು ಬಿದರಳ್ಳಿ ಪಂಚಯ್ಯ ನಾಟಕದ ನಿರ್ದೇಶಕರು ಚನ್ನಯ್ಯ ಮತ್ತು ಬಸವಯ್ಯ ಈ ಇಬ್ಬರು ಪದ್ಮಾವತಿ ಮತ್ತು ಲಕ್ಷ್ಮೀ ಪಾತ್ರಗಳಿಗೆ ಆಯ್ಕೆಯಾದರು. ಪಂಚಯ್ಯನವರ ಕೈಯಲ್ಲಿ ಚೆನ್ನಾಗಿ ತರಬೇತಿ ಪಡೆದರು. ವೆಂಕೋಬರಾಯರೇ ಶ್ರೀನಿವಾಸನ ಪಾತ್ರವಹಿಸುತ್ತಿದ್ದರು. ಚೆನ್ನಯ್ಯನವರ ಪದ್ಮಾವತಿ ಪಾತ್ರ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತೆಂದು ಕೊಟ್ಟೂರ ಬಸವಯ್ಯನವರೇ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾರೆ[೨೫]. ಪದ್ಮಾವತಿ ಪರಿಣಯದ ತರುವಾಯ 'ಭೋಜಪ್ರಬಂಧ', 'ಪ್ರಹ್ಲಾದ', 'ಅನಸೂಯ', 'ಲಂಕಾದಹನ', 'ಕೃಷ್ಣಲೀಲೆ' ಮೊದಲಾದ ನಾಟಕಗಳು ರಂಗಮಂಚವನ್ನೇರಿದವು. ಇವುಗಳಲ್ಲೆಲ್ಲ ಚೆನ್ನಯ್ಯನವರೇ ನಾಯಕಿ ಪಾತ್ರ ನಿರ್ವಹಿಸುತ್ತಿದ್ದರು. ಇವರ ಪಾತ್ರವನ್ನು ನೋಡಿದ ಪ್ರೇಕ್ಷಕರು ಕರ್ನಾಟಕದ ಗಂಧರ್ವ ಎಂದು ಅಭಿಮಾನದಿಂದ ಕರೆಯುತ್ತಿದ್ದರು. ರೊಟ್ಟಿ ಗೋವಿಂದಾಚಾರ್ಯ, ವರವಿ ಚೆನ್ನಯ್ಯ ಮತ್ತು ವಾಮನರಾವ ಮಾಸ್ತರರು ಈ ಮೂವರು ಶಿರಹಟ್ಟಿ ಕಂಪನಿಯ 'ಮೂರು ಮುತ್ತು'ಗಳೆನಿಸಿದರು. ಅದೇನು ಗ್ರಹಚಾರವೋ ಮಾಲೀಕರಿಂದ ವಾಮನರಾಯರ ಸ್ವಾಭಿಮಾನಕ್ಕೆ ಪೆಟ್ಟು ಬೀಳುವ ಪ್ರಸಂಗ ನಡೆಯಿತು. ಅಲ್ಲಿಂದ ಅವರು ಕಂಪನಿ ಬಿಡುವ ಸಿದ್ಧತೆ ನಡೆಸಿದರು. ಆಗ ಅವರೊಂದಿಗೆ ರೊಟ್ಟಿ ಗೋವಿಂದಾಚಾರ್ಯ ಮತ್ತು ವರವಿ ಚೆನ್ನಯ್ಯನವರು ಕಂಪನಿ ಬಿಡಲು ನಿರ್ಧರಿಸಿದರು. ಹಾಡು, ಅಭಿನಯ, ವ್ಯಕ್ತಿತ್ವದಿಂದ ರಂಗಭೂಮಿಯಲ್ಲಿ ಕೀರ್ತಿಸಂಪಾದಿಸಿದ ಈ ಮೂವರೂ ಸೇರಿ ಪಾಲುದಾರಿಕೆ ಆಧಾರದ ಮೇಲೆ ನಾಟಕ ಕಂಪನಿ ಪ್ರಾರಂಭಿಸಿದರು. ಅಲ್ಲಿ ವಾಮನರಾಯರೇ ನಾಯಕರು, ವರವಿ ಚೆನ್ನಯ್ಯನವರೇ ನಾಯಕಿ, ಗೋವಿಂದಾಚಾರ್ಯರೇ ಖಳನಾಯಕ, ಇವರಿಂದ ವಾಮನರಾಯರ ಕಂಪನಿ ಯಶಸ್ಸಿನ ಹಾದಿ

ಹಿಡಿಯಿತು. ವರವಿ ಚೆನ್ನಯ್ಯನವರ ಸ್ತ್ರೀಪಾತ್ರದ ಫೋಟೋ ವಾಮನರಾಯರ ಮಗನ ಮನೆಯಲ್ಲಿದ್ದುದ್ದನ್ನು ನೋಡಿ ಡಾ. ರಾಮಕೃಷ್ಣ ಮರಾಠೆ ಅವರು ವ್ಯಕ್ತಪಡಿಸಿದ ಭಾವನೆಗಳು ಹೀಗಿವೆ: 'ವಾಮನರಾಯರು ಶೇರವಾನಿ ವೇಷದಲ್ಲಿ ಸ್ಟೂಲ್ ಮೇಲೆ ಒಂದು ಕಾಲಿಟ್ಟು ನಿಂತಿರುವ ಶೃಂಗಾರದ ಭಂಗಿ. ಅವರ ಪಕ್ಕದಲ್ಲಿ ಮೈತುಂಬ ಸೆರಗು ಹೊದ್ದುಕೊಂಡ ಸುಂದರ ಲಕ್ಷಣದ ಸ್ತ್ರೀ. ಸೌಮ್ಯಮುಖ ಹಣೆಯ ಮೇಲೆ ದೊಡ್ಡ ಕುಂಕುಮ, ಮೂಗಿನಲ್ಲಿ ನತ್ತು, ಕೈತುಂಬ ಬಳೆ, ಸ್ತ್ರೀಪಾತ್ರದ ಈ ಕಲಾವಿದೆ ಯಾರು ಎಂದು ಕೇಳಿದೆ. ವಾಮನರಾಯರ ಮಗ ವೆಂಕಟರಾಯರು ನನ್ನ ಪ್ರಶ್ನೆಗೆ ನಕ್ಕರು. ಅವಳು ಕಲಾವಿದೆ ಅಲ್ಲ ಕಲಾವಿದ ಹೆಸರು 'ವರವಿ ಚೆನ್ನಯ್ಯ' ಎಂದು ಹೇಳಿದರು. ಅವರು ಹಾಗೆ ಹೇಳಿದ ಮೇಲೆ 'ಹೌದೇ' ಎಂದು ಅನುಮಾನದಿಂದಲೇ ಮತ್ತೇ ಮತ್ತೇ ನೋಡಿದೆ. ಆ ಪೋಟೋದಲ್ಲಿದ್ದ ಸ್ತ್ರೀ ವೇಷಧಾರಿಯು ಭಾವದಲ್ಲಿ, ಭಂಗಿಯಲ್ಲಿ, ಹೆಣ್ತನದ ಕೋಮಲತೆ ತುಂಬಿದೆ. ಮುಖದಲ್ಲಿ ಮೋಹಕತೆ ಮಿಂಚುತ್ತಿದೆ. ಪೋಟೋದಲ್ಲಿ ಹೀಗೆ ರಂಗಭೂಮಿಯ ಮೇಲೆ, ಬಣ್ಣದ ಮೇಕಪ್ಪಿನಲ್ಲಿ ವರವಿ ಚೆನ್ನಯ್ಯ ಪ್ರೇಕ್ಷಕರಿಗೆ ಹೇಗೆ ಕಂಡಿರಬಹುದು? ಇವರ ವೈಯ್ಯಾರದ ಅಭಿನಯ, ಸುಶ್ರಾವ್ಯ ಕಂಠದ ಹಾಡಿನ ಮೋಡಿಗೆ ಅದೆಷ್ಟು ಜನ ಮರುಳಾಗಿ ಮೋಸ ಹೋದರೋ ಯಾರಿಗೆ ಗೊತ್ತು'.[೩೦]

ವರವಿ ಚೆನ್ನಯ್ಯನವರು ಶಿರಹಟ್ಟಿ ಸಮೀಪದ ವರವಿ ಗ್ರಾಮದವರು ಓದಿದ್ದು ನಾಲ್ಕನೇಯ ತರಗತಿ ಮಾತ್ರ. ೧೯೦೩ ರಲ್ಲಿ ಶಿರಹಟ್ಟಿ ಕಂಪನಿ ಆರಂಭವಾದಾಗ ಇವರಿಗೆ ಹದಿನೇಳು ವರ್ಷ. ಕಂಪನಿಯ ಮೊದಲ ನಾಟಕ 'ಪದ್ಮಾವತಿ ಪರಿಣಯ'ದಲ್ಲಿ ಪದ್ಮಾವತಿ ಪಾತ್ರಕ್ಕೆ ಆಯ್ಕೆಯಾದರು ಶಿರಹಟ್ಟಿ ಕಂಪನಿ ಮಹಾರಾಷ್ಟ್ರದ ಸೋಲಾಪೂರದಲ್ಲಿ ಕ್ಯಾಂಪ್ ಮಾಡಿದಾಗ ಬಾಲಗಂಧರ್ವರ ಕಂಪನಿಯೂ ಅಲ್ಲಿಯೇ ಕ್ಯಾಂಪ್ ಮಾಡಿತ್ತೆಂದು, ಗಂಧರ್ವರ ಪಾತ್ರಗಳನ್ನು ನೋಡಿ ಅವರ ಅಭಿನಯ, ಪ್ರಸಾಧನ ಕೌಶಲ್ಯ ಅನುಕರಿಸಿ ಅವರ ಹಾಗೆಯೇ ಪಾತ್ರ ನಿರ್ವಹಿಸುತ್ತಿದ್ದರೆಂದು ಹಿರಿಯರು ನೆನೆಸುತ್ತಾರೆ. ಶಿರಹಟ್ಟಿ ಕಂಪನಿಯಲ್ಲಿ ವಾಮನರಾಯರು ಮತ್ತು ವರವಿ ಚೆನ್ನಯ್ಯನವರ ಜೋಡಿ ತುಂಬ ಪ್ರಸಿದ್ಧಿಯಾಗಿತ್ತು. ಇವರ ಪಾತ್ರ ನೋಡಿ ಮೈಸೂರು ಮಹಾರಾಜರು ಚಿನ್ನದ ಪದಕ ನೀಡಿ ಗೌರವಿಸಿದರು. ಮುಂದೆ ಇಬ್ಬರೂ ಕೂಡಿಯೇ 'ವಿಶ್ವಗುಣಾದರ್ಶ'ಕ್ಕೆ ನಾಂದಿ ಹಾಡಿದರು. ಚೆನ್ನಯ್ಯನವರ ಬಗೆಗೆ ಹೆಚ್ಚು ಮಾಹಿತಿ ಲಭ್ಯ ಇಲ್ಲ ಎಂಬುದು ರಂಗಭೂಮಿಯ ಚರಿತ್ರೆಯಲ್ಲಿಯ ಒಂದು ಕೊರತೆಯಾಗಿದೆ.

**೨) ರೊಟ್ಟಿ ಗೋವಿಂದಾಚಾರ್ಯ:**

'ಶ್ರೀ ಮಹಾಲಕ್ಷ್ಮೀ ಪ್ರಾಸಾದಿಕ ಸಂಗೀತ ನಾಟಕ ಮಂಡಳಿ' ಶಿರಹಟ್ಟಿ ಈ ಸಂಘ ಅಸ್ತಿತ್ವಕ್ಕೆ ಬರುತ್ತಿದ್ದಂತೆಯೇ ಕೆಲ ಅಭಿನಯ ಪ್ರತಿಭೆಗಳು ಹುಟ್ಟಿ, ಮುಂದೆ ಕನ್ನಡ ರಂಗಭೂಮಿಯ ಬೆಳವಣಿಗೆಗೆ ಬೆಳಕು ಚೆಲ್ಲಿದವು. ಅಂತಹ ಮಹಾನ್ ಚೇತನಗಳಲ್ಲಿ ರೊಟ್ಟಿ ಗೋವಿಂದಾಚಾರ್ಯರು ಒಬ್ಬರು. ಇವರು ವೆಂಕೋಬರಾಯರ ಸಮ ವಯಸ್ಕರು; ಬಾಲ್ಯ ಸ್ನೇಹಿತರು, ಕಲಿತದ್ದು ಪ್ರಾಥಮಿಕ ಐದನೆಯ ಈಯತ್ತೆ

ಅಷ್ಟೇ. ಶಿರಹಟ್ಟಿ ಹನುಮಂತ ದೇವರ ಪೂಜಾರಿಕೆ, ವೈದಿಕವೃತ್ತಿ, ಇವರ ಮನೆತನದ ಕಸುಬಾಗಿತ್ತು. ಮನೆಯಲ್ಲಿ ಬಡತನದ ಪರಿಸ್ಥಿತಿ, ಆದರೆ ಕಲೆಯಲ್ಲಿ ಮಾತ್ರ ಶ್ರೀಮಂತರು ಸಂಗೀತ, ಅಭಿನಯಗಳಲ್ಲಿ ಅಮಿತ ಆಸಕ್ತಿ ಇತ್ತು. ಜೊತೆಗೆ ಸಾಧನೆಯ ಬಲದಿಂದ ಉನ್ನತ ಸ್ಥಾನಕ್ಕೇರಿದರು.

ಶಿರಹಟ್ಟಿ ಕಂಪನಿಯ ಮೊದಲ ನಾಟಕ 'ಪದ್ಮಾವತಿ ಪರಿಣಯ' – ವೆಂಕೋಬರಾಯರು ಚೋಳರಾಜನ ಪಾತ್ರದ ಅನ್ವೇಷಣೆಯಲ್ಲಿದ್ದಾಗ ಇವರು ಸಿಕ್ಕರು. ಅಜಾನುಬಾನು ಶರೀರ, ಕಂಚಿನ ಕಂಠ, ರಾಜಾ ಮತ್ತು ದೈತ್ಯ ಪಾತ್ರಗಳಿಗೆ ಒಪ್ಪುವ ರೂಪ. ನಾಟಕದ ತರಬೇತಿಯಲ್ಲಿ ಬಿದರಳ್ಳಿ ಪಂಚಯ್ಯನವರಿಂದ ಕಲಿತ ಸಂಗೀತ ಇವೆಲ್ಲ ಗೋವಿಂದಾಚಾರ್ಯರ ಬಣ್ಣದ ಬದುಕಿಗೆ ಶ್ರೀರಕ್ಷೆಯಾದವು. ಶಿರಹಟ್ಟಿ ಕಂಪನಿಯ ಸಂಚಾರದಲ್ಲಿ ಚೋಳರಾಜನ ಪಾತ್ರಕ್ಕೆ ಅಪಾರ ಕೀರ್ತಿ ದೊರೆಯಿತು. ಅರಮನೆಯಲ್ಲಿ ಪ್ರದರ್ಶಿಸಿದ 'ಪದ್ಮಾವತಿ ಪರಿಣಯ' ದಿಂದ ರೊಟ್ಟಿ ಗೋವಿಂದಾಚಾರ್ಯರ ಅಭಿನಯಕ್ಕೆ ಸುವರ್ಣಪದಕ ಲಭಿಸಿತು. ಚೋಳರಾಜನ ಪಾತ್ರವನ್ನು ಮನಸೆಳೆಯುವಂತೆ ಅಭಿನಯಿಸುತ್ತಿದ್ದರು. ಮುಂದೆ ಕಂಪನಿಯ ಎಲ್ಲ ನಾಟಕಗಳಲ್ಲಿ ಅರಸರ ಪಾತ್ರ ಇವರಿಗೇ ಸೀಮಿತವಾಗಿರುತ್ತಿತ್ತು. ವಾಮನರಾಯರ ಜೊತೆ ಅತ್ಮೀಯ ಸಂಬಂಧ ಇಟ್ಟುಕೊಂಡಿದ್ದ ಇವರು ಕಂಪನಿ ಬೆಳೆಯಲು ಶ್ರಮಿಸಿದರು. ಜೊತೆಗೆ ತಾವೂ ಬೆಳೆದರು.

೧೯೧೩ ರಲ್ಲಿ ವೆಂಕೋಬರಾಯರ ಕಂಪನಿಯಿಂದ ಬಿಡುಗಡೆಯಾದ ನಂತರ ಧಾರವಾಡದಲ್ಲಿ ರೊದ್ದರಾಯರು ಮತ್ತು ಕರಿಗುದರಿ ವಕೀಲರ ಸಹಕಾರದಿಂದ ವಾಮನರಾವರು, ಚೆನ್ನಯ್ಯನವರ ಸಹಯೋಗದಲ್ಲಿ ನಾಟ್ಯ ಸಂಘವೊಂದನ್ನು ಪ್ರಾರಂಭಿಸಿದರು. ಮೂರು ವರ್ಷಕ್ಕೆ ಆ ಸಂಘ ಮುಕ್ತಿ ಪಡೆಯಿತು. ನಂತರ ಸ್ವಂತ ಕಂಪನಿ ಕಟ್ಟುವ ಉದ್ದೇಶದಿಂದ ಕಂಪನಿ ತೊರೆದು ಗೋವಿಂದಾಚಾರ್ಯ, ಚೆನ್ನಯ್ಯನವರ ಸಹಯೋಗದಲ್ಲಿ, ಧಾರವಾಡದಲ್ಲಿ ಶ್ರೀಲಕ್ಷ್ಮೀವೆಂಕಟೇಶ ಸಂಗೀತ ನಾಟಕ ಮಂಡಳಿ' ಯನ್ನು ಹುಟ್ಟುಹಾಕಿದರು. ಶಿರಹಟ್ಟಿಯ ಗಾಣಿಗೇರ ಕೊಟ್ರಪ್ಪ (ಕಪ್ಪತ್ತನವರ) ಎಂಬ ತರುಣ, ಗೋವಿಂದಾಚಾರ್ಯರ ನಾಟಕ ಕಂಪನಿಯಲ್ಲಿ ನಾರದನ ಪಾತ್ರಕ್ಕೆ ಖ್ಯಾತರಾಗಿದ್ದರು. ಇಂಥ ಕೆಲವು ಹೊಸ ಕಲಾವಿದರನ್ನು ಗೋವಿಂದಾಚಾರ್ಯರು ಬೆಳಕಿಗೆ ತಂದರು. ಭಾವೂರಾವ ಪವಾರರ ನಂತರ ಶಿರಹಟ್ಟಿಯ ಇನ್ನೊಬ್ಬ ಯುವಕ ನಾರಾಯಣರಾವ್ ವಿಜಾಪುರೆ ಹಾರ್ಮೋನಿಯಂ ವಾದಕರಾಗಿ ಸಮರ್ಥ ಸೇವೆ ಸಲ್ಲಿಸಿದರು. ಗೋವಿಂದಾಚಾರ್ಯರು ವೆಂಕೋಬರಾಯರು ಆಡುತ್ತಿದ್ದ ನಾಟಕಗಳನ್ನೇ ಹೆಸರು ಬದಲಿಸಿ ಇಲ್ಲವೆ ಕೆಲವೊಂದು ಬದಲಾವಣೆಗಳನ್ನು ಮಾಡಿಕೊಂಡು ಆಡುತ್ತಿದ್ದರು. ಶ್ರೀ ಲಕ್ಷ್ಮೀ ವೆಂಕಟೇಶ ಸಂಗೀತ ನಾಟಕ ಮಂಡಳಿ ೧೯೨೦ ರವರೆಗೆ ನಡೆದು ಆರ್ಥಿಕ ದುಸ್ಥಿತಿಯಿಂದಾಗಿ ನಿಂತು ಹೋಯಿತು. ಸ್ವಂತ ಸಂಸ್ಥೆ ನಿಂತ ಮೇಲೆ ಗೋವಿಂದಾಚಾರ್ಯರು ರಂಗಭೂಮಿಗೆ ಶರಣು ಹೇಳಿ, ನಾಟಕ ವೃತ್ತಿಯಲ್ಲಿ ಆಸ್ಥೆವಹಿಸದೇ ನಿವೃತ್ತ ಜೀವನ ಸಾಗಿಸುತ್ತ ೧೯೩೭ ರಲ್ಲಿ ಸ್ವರ್ಗಸ್ಥರಾದರು.

## ೩) ಗುರುಲಿಂಗಪ್ಪ ಗುಳ್ಳೇದಗುಡ್ಡ:

ಇವರು ಕಂಪನಿಗೆ ವರವಾಗಿದ್ದ ನಟರೂ ಹೌದು ಶಾಪವಾಗಿದ್ದ ನಟರೂ ಹೌದು. ಈ ಮಾತಿಗೆ 'ಶಿವಮೂರ್ತಿ ಸ್ವಾಮಿಗಳ ದಿನಚರಿಯ ಪುಟಗಳೇ ಸಾಕ್ಷಿ. ಗುಳ್ಳೇದಗುಡ್ಡದ ಬಹಳಷ್ಟು ಜನ ಕಲಾವಿದರನ್ನು ಕೊಣ್ಣೂರು ಕಂಪನಿಗೆ ಕರೆದುಕೊಂಡು ಬಂದವರು ಇವರೇ. ಖ್ಯಾತ ನಟಿ ಎಲ್ಲೂಬಾಯಿಯನ್ನು ಈ ಕಂಪನಿಗೆ ಪರಿಚಯಸಿದ ಶ್ರೇಯಸ್ಸು ಇವರದೇ. ಇವರ ದೊಡ್ಡ ದೌರ್ಬಲ್ಯವೆಂದರೆ ಮೇಲಿಂದ ಮೇಲೆ ಕಂಪನಿ ಬಿಟ್ಟು ಹೋಗಿ ಕಂಪನಿಯ ಭವಿಷ್ಯದೊಂದಿಗೆ ಆಟವಾಡುತ್ತಿದ್ದರು. ಈ ಗುಣದಿಂದಾಗಿ ಸ್ವಾಮಿಗಳಿಂದ ಶಿಕ್ಷೆಗೆ ಗುರಿಯಾಗುತ್ತಿದ್ದರೂ ಪಶ್ಚಾತ್ತಾಪಪಟ್ಟು ಮತ್ತೇ ಕಂಪನಿಯ ಬಾಗಿಲು ತಟ್ಟುತ್ತಿದ್ದರು. ದೌರ್ಬಲ್ಯಗಳೇನೇ ಇರಲಿ ಅಭಿನಯ ಮತ್ತು ಹಾಡುಗಾರಿಕೆಯಿಂದ ಯಾವುದೇ ಪಾತ್ರಗಳನ್ನು ಹೌದೆನ್ನುವಂತೆ ನಿರ್ವವಹಿಸುವವರಾಗಿದ್ದರು. ಹರಿಶ್ಚಂದ್ರ, ಶನಿಪ್ರಭಾವದಲ್ಲಿ ಭಟ್ಟ, ಬಸವೇಶ್ವರದಲ್ಲಿ ಗೋವಿಂದರಾವ್ ಪಾತ್ರಗಳಿಂದ ಪ್ರಸಿದ್ಧಿ ಪಡೆದಿದ್ದರು'.[೩೧೨] ವಿಶ್ವಗುಣಾದರ್ಶ ಕಂಪನಿಯ 'ಭಕ್ತ ಪುಂಡಲೀಕ' ನಾಟಕದಲ್ಲಿ ಪುಂಡಲೀಕನ ತಂದೆಯ ಪಾತ್ರವನ್ನು, 'ಭಕ್ತ ಪ್ರಹ್ಲಾದ' ದಲ್ಲಿ ಹಿರಣ್ಯಕಶಿಪುವಿನ ಪಾತ್ರವನ್ನು ಪರಿಣಾಮಕಾರಿಯಾಗಿ ಅಭಿನಯಿಸುತ್ತಿದ್ದರು.

## ೪) ರಾಣೆಬೆನ್ನೂರ ಮಲ್ಲಪ್ಪ:

ರಂಗಕಲೆಯ ಬಗೆಗೆ ಅತೀವ ಆಸಕ್ತಿ, ಅಭಿಮಾನ ಮತ್ತು ಅಭಿನಯ ಈ ಮೂರು ಗುಣಗಳು ಮಲ್ಲಪ್ಪನವರಲ್ಲಿದ್ದವು. ಪ್ರಸಂಗಾವಶಾತ್ ಸಿಕ್ಕ ಪಾತ್ರಕ್ಕೆ ಜೀವ ತುಂಬುವ ಕಲೆಗಾರಿಕೆ ಇವರಲ್ಲಿತ್ತು. ೧೯೧೫ರಲ್ಲಿ ವಾಮನರಾಯರ ಕಂಪನಿ ರಾಣೇಬೆನ್ನೂರಿನಲ್ಲಿ ತಲೆಯೆತ್ತಲು ಇವರ ಸಹಕಾರವೇ ಕಾರಣವೆನ್ನಬೇಕು. ರಾಣೇಬೆನ್ನೂರಿನಲ್ಲಿ ಕಂಪನಿ ಪ್ರಾರಂಭವಾಯಿತು. ಆದರೆ ನಾಟಕದ ಕಲೆಕ್ಷನ್ ನಿರೀಕ್ಷಿಸಿದಷ್ಟು ಆಗಲಿಲ್ಲ. ಆಗ ಕೈಯಲ್ಲಿದ್ದ ಬಂಗಾರದ ಖಡೆಯನ್ನು ಮಲ್ಲಪ್ಪ ರಾಯರಿಗೆ ಕೊಟ್ಟು ಕಂಪನಿಗೆ ಆಪತ್ಬಾಂಧವರಾದರು. ಮುಂದೆ ಕಂಪನಿ ದಾವಣಗೆರೆಗೆ ಹೋಗಲು ಅಲ್ಲಿಯೂ ಅದಕ್ಕೆ ಆಸರೆಯಾಗಿ ನಿಂತರು. ವಾಮನರಾಯರ ಬಗೆಗೆ ಇವರಿಗೆ ಅತೀವ ಪ್ರೀತಿ, ಅಭಿಮಾನ. ಅವರ ನೇತೃತ್ವದಲ್ಲಿ ಕಂಪನಿ ಯಶಸ್ಸಿನಿಂದ ನಡೆಯಬೇಕೆಂದು ಹಂಬಲಿಸುತ್ತಿದ್ದರು. 'ವಿದ್ಯಾಸಾಧನೆ' ನಾಟಕದಲ್ಲಿ ವಿನೋದನ ಪಾತ್ರ ನಿರ್ವಹಿಸುತ್ತಿದ್ದರು. "ತಮ್ಮ ನೇತ್ರ ಪಲ್ಲವಿಯಿಂದಲೇ ಮಾತನಾಡುತ್ತಿದ್ದರು. ಅವರ ನಯಾನಾಭಿನಯ ಅನನ್ಯ ಅದೃಶ್ಯವಾದುದು".[೩೧೩] 'ಲಂಕಾದಹನ' ದಲ್ಲಿ ಹನುಮಂತನ ಪಾತ್ರವನ್ನು ಅಚ್ಚುಕಟ್ಟಾಗಿ ಅಭಿನಯಿಸುತ್ತಿದ್ದರು. 'ಮಾತು ಅಸ್ಖಲಿತ, ಒಂದು ಕಾಲು ಕೊಂಚ ಊನ, ಸದೃಢ ಶರೀರ, ಕಂಚಿನ ಕಂಠ, ಗಂಭೀರ ಪಾತ್ರಗಳಲ್ಲಿ ಎಷ್ಟು ಗಂಭೀರರೋ, ಅಷ್ಟೇ ಹಾಸ್ಯ ಪಾತ್ರಗಳಲ್ಲಿ ಮಾತಿನ ಚತುರ. ಅದು ಸಹಜ ಅಭಿನಯ, 'ಯುವತಿ ವಿಜಯ'ದಲ್ಲಿ ಅವರ ಹುಚ್ಚನ ಪಾತ್ರ ಸರ್ವಥಾ ಮರೆಯುವಂತದ್ದಲ್ಲ'.[೩೧೪]

ಒಳ್ಳೆಯ ನಟನಾ ಕೌಶಲ್ಯ ಇರುವ ಕಲಾವಿದರಾಗಿದ್ದರೂ ಆಗಾಗ ಕಂಪನಿ ಬಿಟ್ಟು ಹೋಗುವ ಮತ್ತು ಕೆಲ ದಿನಗಳ ನಂತರ ಕಂಪನಿಗೆ ಬಂದು ಪಶ್ಚಾತ್ತಾಪ ಪಡುವ ಚಟವನ್ನು ಬೆಳಿಸಿಕೊಂಡಿದ್ದರು. ವಾಮನರಾಯರಿಗೆ ಈ ದೌರ್ಬಲ್ಯ ತಿಳಿದಿತ್ತು ಆದ್ದರಿಂದ ಅವರಾದರೂ ಹೋಗುವಾಗ ಬೀಳ್ಕೊಡುತ್ತಿದ್ದರು ಮತ್ತೆ ಬಂದಾಗ ಸ್ವಾಗತಿಸುತ್ತಿದ್ದರು.

ವ್ಯವಹಾರದ ದೃಷ್ಟಿಯಿಂದ ಸಂಬಳಕ್ಕಾಗಿ ತಕರಾರು ತೆಗೆದು ಮದ್ದೂರು ಕ್ಯಾಂಪಿನಲ್ಲಿ ಹೊರನಡೆದರು. ಮತ್ತೆ ಬೇಕಾದಾಗ ಕಂಪನಿಗೆ ಮರಳುತ್ತಿದ್ದರು. ಕೊನೆಯವರೆಗೂ ವಾಮನರಾಯರ ನಾಟಕ ಮಂಡಳಿ, ವಾಮನರಾಯರ ಜೊತೆಗೂಡಿಯೇ ಕಾಲ ಕಳೆಯುತ್ತಾ ಆತ್ಮೀಯವರಾಗಿದ್ದವರು ರಾಣೆಬೆನ್ನೂರ ಮಲ್ಲಪ್ಪ.

**೫) ಬೇವೂರ ಬಾದಶಹ ಮಾಸ್ತರ:**

ಕರ್ನಾಟಕ ವೃತ್ತಿರಂಗಭೂಮಿಯ ಶ್ರೇಷ್ಠ ಗಾಯಕ ನಟರ ಸಾಲಿನಲ್ಲಿ ಕೇಳಿ ಬರುವ ಹೆಸರು ಬೇವೂರ ಬಾದಶಹ ಮಾಸ್ತರ. ಇವರು ರಂಗಸೇವೆಗೈದ ಕಂಪನಿಗಳು ಹಲವು ವಾಣಿವಿಲಾಸ ನಾಟಕ ಮಂಡಳಿ, ಗದಗ. ಶ್ರೀ ಗಜಾನನ ನಾಟಕ ಮಂಡಳಿ, ಜಮಖಂಡಿ. ಗುರುಸೇವಾ ಸಂಗೀತ ನಾಟಕ ಮಂಡಳಿ, ಕಿತ್ತೂರ. ಕಲಾವೈಭವ ನಾಟಕ ಮಂಡಳಿ, ಏಣಗಿ. ಈ ಕಂಪನಿಗಳಲ್ಲದೆ ಬಾದಶಹ ಅವರು ಸ್ವಂತ ಕಂಪನಿ ಕಟ್ಟಿ ಕಷ್ಟ-ನಷ್ಟಗಳನ್ನು ಅನುಭವಿಸಿದರಂತೆ. ಆದರೆ ಇವರು ಶ್ರೇಷ್ಠ ಗಾಯಕನಟರೆಂದು ಪ್ರಸಿದ್ಧಿಗೆ ಬಂದುದು ವಾಮನರಾಯರ ವಿಶ್ವಗುಣಾದರ್ಶ ನಾಟಕ ಮಂಡಳಿಯಿಂದ. ಸಂಗೀತ ಕಲಾವಿದರೇ ಇಲ್ಲಿ ನಟ-ನಟಿಯರಾಗಿದ್ದರು. ಸಂಗೀತ ನಾಟಕಗಳೇ ಇಲ್ಲಿ ಪ್ರಯೋಗಗೊಳ್ಳುತ್ತಿದ್ದವು. ಹೀಗಾಗಿ ಸಂಗೀತ ಈ ಮಂಡಳಿಯ ವಿಶೇಷವಾಗಿತ್ತು. "ಈ ಮಂಡಳಿಯ ನಾಟಕಗಳಲ್ಲಿ ಬಸವರಾಜ ಮನಸೂರ, ಬೇವೂರ ಬಾದಶಹಾ ಅಭಿನಯಿಸುತ್ತಿದ್ದರೆ ಸಂಗೀತದ ಸ್ಪರ್ಧೆ ಏರ್ಪಡುತ್ತಿತ್ತೆಂದು ಏಣಗಿ ಬಾಳಪ್ಪನವರು ಸ್ಮರಿಸುತ್ತಾರೆ.[೩೨೪] ಬಾದಶಹ ಮಾಸ್ತರರು ರಂಗಗೀತೆಗಳನ್ನು ಶಾಸ್ತ್ರೀಯವಾಗಿ ಹಾಡುತ್ತಿದ್ದರು. ಹಾರ್ಮೋನಿಯಂ, ತಂಬೂರಿ, ಪಿಯಾನೋ, ಡೋಲಕ ಸೊಗಸಾಗಿ ನುಡಿಸುತ್ತಿದ್ದರು. ನಾಟಕಗಳಿಗೆ ಸಂಗೀತ ನಿರ್ದೇಶಿಸುತ್ತಿದ್ದರು. ಆಸಕ್ತರಿಗೆ ಸಂಗೀತವನ್ನು ಕಲಿಸುತ್ತಿದ್ದರು. ಸಂಗೀತಮಯ ಬಹುಮುಖ ವ್ಯಕ್ತಿತ್ವದಿಂದಾಗಿ ಇವರು ರಂಗಭೂಮಿ ಚರಿತ್ರೆಯಲ್ಲಿ ಅಜರಾಮರ ಎನಿಸಿದ್ದಾರೆ. ಬಾದಶಹ ಮಾಸ್ತರರು ಬಾಗಲಕೋಟ ಜಿಲ್ಲೆಯ 'ಬೇವೂರ' ಗ್ರಾಮದವರು. ತಂದೆ ಪೀರಸಾಹೇಬ, ತಾಯಿ ಚಾಂದಬಿ. ಪ್ರಾಥಮಿಕ ಶಾಲೆಯ ದಾಖಲಾತಿ ಪ್ರಕಾರ ಇವರ ಜನ್ಮದಿನಾಂಕ ೦೩-೬-೧೯೦೩ ಇವರಿಗೆ ಒಬ್ಬಳು ತಂಗಿ ಇದ್ದಳು. ಹೆಸರು ಹುಸೇನಬಿ (ಜನ್ನತಬಿ) ಇವಳ ಮಗನೇ ಮೌಲಾಸಾಬ ಬೀಳಗಿ 'ಬಾಬು ಪೇಂಟರ್ ಬೀಳಗಿ' ಎಂದು ಪ್ರಸಿದ್ಧನಾದನು ಬಾದಶಹ ಅವರಿಗೆ ಯಮನವ್ವ ಎಂಬ ಹೆಂಡತಿ ಇದ್ದಳು. ನಾಲ್ಕು ಜನ ಹೆಣ್ಣು ಮಕ್ಕಳಿದ್ದರು, ಲೀಲಾಬಾಯಿ, ಆನಂದಿಬಾಯಿ, ತಾರಾಬಾಯಿ, ಲಕ್ಷ್ಮೀಬಾಯಿ-ಇವರೆಲ್ಲ ಸಂಗೀತ, ನೃತ್ಯ ಹಾಡುಗಾರಿಕೆಯಲ್ಲಿ ಸಾಧನೆ ಮಾಡಿದರು. ತಾರಾಬಾಯಿ ಅವರು ಸಿದ್ಧರಾಮ ಜಂಬಲದಿನ್ನಿ ಅವರ ಜೊತೆ

ಮದುವೆಯಾದರು. ನಾಟಕಗಳಲ್ಲಿ ಪಾತ್ರಗಳನ್ನು ಮಾಡುತ್ತಿದ್ದರು. ಅಭಿನಯ, ರಂಗ ಸಂಗೀತದಲ್ಲಿ ಬಹುದೊಡ್ಡ ಹೆಸರು ಮಾಡಿದ ಅಮೀರಬಾಯಿ ಕರ್ನಾಟಕಿ, ಗೋಹರಬಾಯಿ ಕರ್ನಾಟಕಿ ಅವರಿಗೆ ಏಣಗಿ ಬಾಳಪ್ಪನವರಿಗೆ ಸಂಗೀತ ಕಲಿಸಿದ ಹಿರಿಮೆ ಬಾದಶಹ ಅವರದು ಆದರೆ ಇವರಿಗೆ ಸಂಗೀತ ಹೇಳಿ ಕೊಟ್ಟ ಗುರು ಯಾರೆಂಬುದು ತಿಳಿದು ಬರುವುದಿಲ್ಲ.

ಏಣಗಿ ಬಾಳಪ್ಪನವರ ನೆನಪಿನ ಬುತ್ತಿ-ಕಟ್ಟಿಕೊಡುವ ಬಾದಶಹ ಮಾಸ್ತರರ ಶಬ್ದ ಚಿತ್ರಣಗಳನ್ನು ಈ ಕೆಳಗಿನಂತೆ ದಾಖಲಿಸಬಹುದು. 'ತಿಳಿಯಾದ ಬಣ್ಣ, ತೀಡಿದ ಮೂಗು, ಕೋಲುಮುಖ, ಎತ್ತರದ ನಿಲುವು, ತುಸು ಎತ್ತರದ ಕರಿ ಟೋಪಿ......... ದೂರದಿಂದ ನೋಡಿದರೆ ಬಾದಶಹ ಎಂದು ಗೊತ್ತಾಗಬೇಕು. ಸಂಗೀತ ಅವರ ಮನೆತನದ ಬಳುವಳಿ. ನಟನೆ ಸ್ವಂತ ಮುನ್ನಡೆಯ ಸಾಧನೆ. ರಂಗಭೂಮಿಯ ಮ್ಯಾಲೆ ಈ ನಟ ತನ್ನ ಅಭಿನಯ, ಸಂಗೀತ, ರೂಪದಿಂದ ಹೆಸರಿಗೆ ತಕ್ಕಂತೆ ಬಾದಶಹನಾಗಿಯೇ ತನ್ನ ಕಾಲದಲ್ಲಿ ಮೆರೆದ.[೩೩] 'ಬಾದಶಹ ಮಾಸ್ತರರು ಒಮ್ಮೆ ರಾಣಿ ರುದ್ರಮ್ಮ ನಾಟಕದಲ್ಲಿ ಮಲ್ಲಸರ್ಜನ ಪಾತ್ರ ಮಾಡ್ತಿದ್ರು, ಆ ಪಾತ್ರದ ಒಂದು ಹಾಡು ಮಾಲಕಂಸ ರಾಗದಲ್ಲಿ ಕೂಡಿಸಲಾಗಿತ್ತು. ಬಾದಶಹ ಹಾಡಿದ್ರು. ಒಡನೇ ಪ್ರೇಕ್ಷಕರಿಂದ ಶಹಬಾಸ್‌ಗಿರಿ ಬಂತು ಹಿಂದೆಯೇ ಒನ್ಸ್‌ಮೋರ್ ಕೇಳಿತು. ಆದ್ರ ರಂಗಭೂಮಿಯ ಬಾದಷಾ ಮೊದಲು ಹಾಡಿದ ಹಾಡನ್ನೇ ಹಾಡಿದ್ರು. ಆದ್ರ ಮಾಲಕಂಸ ರಾಗದಲ್ಲಿ ಅಲ್ಲ, ಭೈರವಿಯಲ್ಲಿ ಜನ ಅದನ್ನೂ ಕೇಳಿ ಮೆಚ್ಚಿದ್ರ ಮತ್ತೇ ಒನ್ಸ್‌ಮೋರ್ ಅಂದ್ರ ಮತ್ತೇ ಬಾದಶಹ ಲಲಿತರಾಗದಲ್ಲಿ ಹಾಡಿದ್ರು' ಮಾಸ್ತರರು ಪ್ರತಿಭಾವಂತ ಸಂಗೀತ ಕಲಾವಿದರಾಗಿದ್ದರು. ಒಂದು ಹಾಡನ್ನು ಹಲವು ರಾಗಗಳಲ್ಲಿ ಹಾಡುವ ಪ್ರಬುದ್ಧತೆ ಇತ್ತು.

................ ಸೂಡಿ ಹುಚ್ಚಪ್ಪ ಮತ್ತು ಏಣಗಿ ಬಾಳಪ್ಪ ಕೂಡಿಕೊಂಡು 'ಗುರು ಸೇವಾ ಸಂಗೀತ ನಾಟಕ ಮಂಡಳಿ' ಪ್ರಾರಂಭಿಸಿದರು. ಈ ಕಂಪನಿಯಲ್ಲಿಯೇ ಬಾದಶಹ ಮಾಸ್ತರರು ಏಣಗಿ ಬಾಳಪ್ಪನವರಿಗೆ ಶಾಸ್ತ್ರೀಯ ಸಂಗೀತದ ಗುರುವಾಗಿ ದೊರೆತರು. 'ಬೆಳಗಾವಿ ಸಮೀಪದ ಕುಡಚಿಯಲ್ಲಿ ಕ್ಯಾಂಪ್ ಮಾಡಿದಾಗ ಒಬ್ಬ ಗವಾಯಿಗಳು ನಾಟಕಕ್ಕೆ ಬಂದಿದ್ದರು. ನನ್ನದು (ಏಣಗಿ ಬಾಳಪ್ಪ) ಹೇಮರಡ್ಡಿ ಮಲ್ಲಮ್ಮನ ಪಾತ್ರ, ಗವಾಯಿಗಳು ಮೆಚ್ಚುಗೆ ಸೂಚಿಸಬಹುದೆಂದು ಹಾಡುವಾಗಲೆಲ್ಲ ಅವರ ಕಡೆಗೆ ನೋಡುತ್ತಿದ್ದೆ ಯಾವ ಪ್ರತಿಕ್ರಿಯೆ ಇರಲಿಲ್ಲ. ಆದರೆ ಮಲ್ಲಿಕಾರ್ಜುನ ಪಾತ್ರದಲ್ಲಿದ್ದ ಬಾಷಾ ಸಾಹೇಬರು ಹಾಡಿದಾಗ ತಲೆದೂಗುತ್ತ ಮೆಚ್ಚುಗೆ ತಿಳಿಸಿದರು ಗವಾಯಿಗಳ ಪ್ರತಿಕ್ರಿಯೆ ಒಗಟಾಯಿತು. ಮರುದಿನ ಬಾಷಾಸಾಹೇಬರನ್ನು ಹೀಗೇಕೆಂದು ಕೇಳಿದೆ ಅವರು "ನೀನು ಚೆನ್ನಾಗಿ ಹಾಡುವಿ ಆದರೆ ರಾಗ ತಾಳದಲ್ಲಿ ಶಾಸ್ತ್ರೀಯ ಜ್ಞಾನದ ಕೊರತೆ ಇರುತ್ತದೆ. ಆದ್ದರಿಂದ ಅವರು "ಯಾರು ನಿನ್ನ ಹಾಡಿಗೆ ಮೆಚ್ಚುಗೆ ತೋರಿಸಲಿಲ್ಲವೋ ಅವರಿಂದಲೇ ಮೆಚ್ಚುಗೆ ಬರುವಂತೆ ಸಾಧನೆ ಮಾಡು ಎಂದರು. ಇಬ್ಬರೂ ಮಿರಜಕ್ಕೆ ಹೋಗಿ ಎರಡು ತಂಬೂರಿ ತಂದೆವು. ಬಾದಶಹ ಗುರುಗಳಿಂದಲೇ ಸಂಗೀತದ ಪ್ರಾಥಮಿಕ ಪಾಠ

ಆರಂಭವಾಯಿತು. ರಂಗಕ್ಕೆ ತಕ್ಕಷ್ಟು ಶಾಸ್ತ್ರೀಯ ಜ್ಞಾನ ಸಂಪಾದಿಸಿದೆ. ಮುಂದೊಮ್ಮೆ ಅಲಕ್ಷ್ಯ ಮಾಡಿದ್ದ ಗವಾಯಿಗಳಿಂದಲೇ ಮೆಚ್ಚುಗೆ ಪಡೆದೆ ಹಿಂದೊಮ್ಮೆ ಕೇಳಿದಾಗ ಹಾಡುವವನಲ್ಲ ಎಂದು ತಿಳಿದಿದ್ದೆ ಈಗ ಕೇಳಿದರೆ "ನೀನು ಹಾಡುವವನೆ, ಚೆನ್ನಾಗಿ ಹಾಡಿದೆ" ಎಂದು ಗವಾಯಿಗಳು ಬೆನ್ನು ತಟ್ಟಿ ಹಾರೈಸಿದರು. ಅಂದು ರಂಗಭೂಮಿಯ ಮತ್ತೊಂದು ಪದವಿ ಪಡೆದುಕೊಂಡಂಥ ಧನ್ಯತೆ ನನ್ನದಾಗಿತ್ತು". ಏಣಗಿ ಬಾಳಪ್ಪನವರು ಬಾದಶಹ ಮಾಸ್ತರರ ಹಿರಿಮೆಯನ್ನು ತಮ್ಮ 'ಬಣ್ಣದ ಬದುಕಿನ ಚಿನ್ನದ ದಿನಗಳು' ಆತ್ಮಕಥೆಯಲ್ಲಿ ದಾಖಲಿಸಿದ್ದಾರೆ. ಮಾಸ್ತರರು ಒಂದೇ ನಾಟಕ ಕಂಪನಿಯಲ್ಲಿ ಖಾಯಂ ಆಗಿ ನಿಲ್ಲಲಿಲ್ಲ ಕಂಪನಿಯಿಂದ ಕಂಪನಿಗೆ ತಿರುಗಾಡುತ್ತಿದ್ದರು. ಅವರು ಬಹಳ ದಿನ ಇದ್ದದ್ದು ವಿಶ್ವಗುಣಾದರ್ಶ ನಾಟಕ ಕಂಪನಿಯಲ್ಲಿ ಇದಕ್ಕೆ ಕಾರಣವೇನೆಂದರೆ ಗಾಯನ ಪ್ರತಿಭೆಯ ಪ್ರಸಿದ್ಧ ನಟ, ನಟಿಯರು ಈ ಕಂಪನಿಯಲ್ಲಿದ್ದರು. ಕಂಪನಿಯ ಮಾಲೀಕ ವಾಮನರಾವ ಮಾಸ್ತರರು ಸ್ವತಃ ಹಾಡುಗಾರರು, ನಾಟಕಕಾರರು ಸಂಗೀತದಿಂದಲೇ ಪ್ರೇಕ್ಷಕರನ್ನು ಆಕರ್ಷಿಸುತ್ತಿದ್ದರು. ಬಸವರಾಜ ಮನಸೂರ, ಮಲ್ಲಿಕಾರ್ಜುನ ಮನಸೂರ. ಬಸವರಾಜ ರಾಜಗುರು, ಗುರುರಾವ ದೇಶಪಾಂಡೆ, ಗುಳ್ಳೇದಗುಡ್ಡ ಗಂಗೂಬಾಯಿ, ಸಂಗನಬಸಪ್ಪ ಕುಕನೂರ ಮೊದಲಾದ ಕಲಾವಿದರು ಈ ಕಂಪನಿಯಲ್ಲಿದ್ದರು. ಇವರಲ್ಲಿ ಬೇವೂರ ಬಾದಶಹ ಮಾಸ್ತರರು ಹಿರಿಯರು ಇವರಿಗೆ ಪ್ರತಿಸ್ಪರ್ಧಿಯಾಗಿ ನಿಂತವರೆಂದರೆ ಬಸವರಾಜ ಮನಸೂರ "ಇಬ್ಬರೂ ರಂಗಭೂಮಿಯ ಮೇಲೆ ಧೀರೋದಾತ್ತ ನಾಯಕ ಪಾತ್ರಕ್ಕೆ ಹೇಳಿ ಮಾಡಿಸಿದ ಮೈಕಟ್ಟು, ಪ್ರತಿಭೆ, ಕಲೆ ಉಳ್ಳವರು. ಒಮ್ಮೆ ವಾಮನರಾವ ಮಾಸ್ತರರ ಕಂಪನಿಯಲ್ಲಿದ್ದಾಗ ಅಭಿಮನ್ಯು ನಾಟಕ ಆಡ್ತಿದ್ರು. ಯಾವಾಗಲು ಅರ್ಜುನನ ಪಾತ್ರವನ್ನು ಬಾದಶಹ ಮಾಸ್ತರರೇ ಮಾಡ್ತಿದ್ರು. ಒಂದು ದಿನ ಅರ್ಜುನನ ಪಾತ್ರವನ್ನು ಬೇರೆಯವರು ಮಾಡಿದರು ಆದರೆ ಪ್ರೇಕ್ಷಕರು ಅರ್ಜುನನಿಗಾಗಿ ಬಾದಷಾ ಮಾಸ್ತರರೇ ಬೇಕೆಂದು ಗಲಾಟೆ ಮಾಡಿ ನಾಟಕ ನಿಲ್ಲಿಸಿದ್ರು. ಆಗ ಮಾಲೀಕರು ಅರ್ಧ ತಾಸು ನಾಟಕ ನಿಲ್ಲಿಸಿ ಬಾದಷಾ ಮಾಸ್ತರರಿಗೆ ಬಣ್ಣ ಹಚ್ಚಲಿಕ್ಕೆ ಹೇಳಿ ಅರ್ಜುನನ ವೇಷದಲ್ಲಿ ರಂಗಭೂಮಿಗೆ ತಂದ್ರು. ನಾಟಕ ಸುಗಮವಾಗಿ ನಡೀತು.

ಸಂಗೀತ ವಾದ್ಯಗಳನ್ನು ನುಡಿಸುವುದರಲ್ಲಿಯೂ ಬಾದಶಹ ಮಾಸ್ತರ ನಿಷ್ಣಾತರಾಗಿದ್ದರು. ವಿಶೇಷವಾಗಿ ವೀಣೆ, ತಂಬೂರಿ, ಹಾರ್ಮೋನಿಯಂ, ಪಿಯಾನೋ, ಡೋಲಕ ಮುಂತಾದ ವಾದ್ಯಗಳಲ್ಲಿ ಸಿದ್ಧಹಸ್ತರಾಗಿದ್ದರು. ಸ್ವತಃ ಹಾಡುಗಳಿಗೆ ರಾಗಸಂಯೋಜನೆ ಮಾಡಿ ಹಾಡುತ್ತಿದ್ದರು. ಅಲ್ಲದೆ ರಂಗಭೂಮಿಯ ಮೇಲೆ ವಿಭಿನ್ನ ಪಾತ್ರಗಳನ್ನು ಅಭಿನಯಿಸುತ್ತ ಹಾಡುಗಳನ್ನು ಶಾಸ್ತ್ರೋಕ್ತವಾಗಿ ಹಾಡುತ್ತಿದ್ದರೆ ಬೇವೂರ ಬಾದಷಾ ಅವರಿಗೆ ಸರಿಸಾಟಿಯಾಗಿ ನಿಲ್ಲುವ ರಂಗಗಂಧರ್ವರುಂಟೇ? ಎನ್ನುವ ಹಾಗೆ ಹುಬ್ಬೇರಿಸುವಂತೆ ಮಾಡುತ್ತಿದ್ದರು. ಅಂಥ ಬಹುಮುಖ ಪ್ರತಿಭೆಯ ವ್ಯಕ್ತಿತ್ವ ಬೇವೂರ ಬಾದಶಹ ಅವರದು.

ಸೀತಿಮನಿ ಎಂಬ ಊರಲ್ಲಿದ್ದ 'ಧರ್ಮರ ಮಠ' ದೊಂದಿಗೆ ಬಾದಶಹ ಅವರ ಒಡನಾಟವಿತ್ತು. ಮನಸ್ಸಿಗೆ ನೆಮ್ಮದಿ ಅರಸಿ ಆಗಾಗ ಅಲ್ಲಿಗೆ ಹೋಗುತ್ತಿದ್ದರು. ಸಂಗೀತ ಕಾರ್ಯಕ್ರಮ ನಡೆಸಿಕೊಡುತ್ತಿದ್ದರು. ಆಸಕ್ತರಿಗೆ ಸಂಗೀತ ಕಲಿಸುವ, ನಾಟಕ ಕಲಿಸುವ ಚಟುವಟಿಕೆಗಳಲ್ಲಿ ತೊಡಗುತ್ತಿದ್ದರು. ಯಾರಾದರೂ ಕರೆದರೆ ಅವರು ಕರೆ ಬಂದಲ್ಲಿಗೆ ಹೊರಡುತ್ತಿದ್ದರು. ನಿಸ್ವಾರ್ಥದಿಂದ ಸಂಗೀತ ಕಲಿಸುತ್ತಿದ್ದರು ಹೀಗಾಗಿ ಇವರ ಶಿಷ್ಯ ಬಳಗ ಬಹಳ ಇವರಿಂದ ಸಂಗೀತ ಕಲಿತು ಹೆಸರಾದವರಲ್ಲಿ ಅಮೀರಬಾಯಿ ಕರ್ನಾಟಕಿ, ಗೋಹರಬಾಯಿ ಕರ್ನಾಟಕಿ, ಏಣಗಿ ಬಾಳಪ್ಪ, ಕಮತಗಿಯ ಹನುಮಂತಪ್ಪ, ಬದಾಮಿಯ ಸಾಖರೆ, ಅದೃಶ್ಯಪ್ಪ ಖಟವಟೆ, ಲಾಠಿ ಗುಂಡಪ್ಪ, ವೀರಭದ್ರಪ್ಪ ಪಟ್ಟಣಶೆಟ್ಟಿ, ಹೂವಿನ ಹಡಗಲಿ ವೀರಭದ್ರಪ್ಪ, ಡಿ. ದುರ್ಗಾದಾಸ, ಸೂಳಿಭಾವಿಯ ಬಸಪ್ಪಗೌಡ (ನಾಟಕಕಾರ ಪಿ.ಬಿ.ದುತ್ತರಗಿ ಅವರ ತಂದೆ) ಪ್ರಮುಖರೆನಿಸಿದ್ದಾರೆ.

ಬಾದಶಹಾ ಮಾಸ್ತರರು ಕೆಲವು ಕಾಲ ಹೈದರಾಬಾದಿನಲ್ಲಿ ಸಂಗೀತ ಶಾಲೆ ನಡೆಸಿದ ಬಗೆಗೆ ಉಲ್ಲೇಖಗಳಿವೆ. ಸರ್ವರ್ ಅಲಿಖಾನ್ ಹೆಸರಿನಿಂದ ಈ ಊರಲ್ಲಿದ್ದು ವಿದ್ಯಾರ್ಥಿಗಳಿಗೆ ಸಂಗೀತ ಹೇಳಿಕೊಟ್ಟರಂತೆ. ಸಂಗೀತವನ್ನು ಬೋಧಿಸುವುದಕ್ಕಾಗಿ ಒಂದು ಪುಸ್ತಕವನ್ನು ಬರೆದಿದ್ದರಂತೆ ಅದು ಹಸ್ತಪ್ರತಿರೂಪದಲ್ಲಿಯೇ ಉಳಿದು ಕೊನೆಗೆ ಎಲ್ಲಿಯೋ ಕಳೆದು ಹೋಯಿತೆಂದು ಗೊತ್ತಾಗುತ್ತದೆ. ಹೈದರಾಬಾದಿನಿಂದ ಮರಳಿ ಊರಿಗೆ ಬಂದಾಗ ತುಂಬ ದಣಿದಿದ್ದರಂತೆ ಅಲ್ಲದೆ ಕುಡಿತದ ವ್ಯಸನಕ್ಕೂ ಅಂಟಿಕೊಂಡಿದ್ದರು. ಅವರ ಕೊನೆಯ ದಿನಗಳು ಮತ್ತು ಸಾವಿನ ಬಗೆಗೆ ಖಚಿತತೆ ಇಲ್ಲ. ಆಲಮಟ್ಟಿ ಹತ್ತಿರದ ಸೀತಿಮನಿಯಲ್ಲಿ ಕೊನೆಯುಸಿರೆಳೆದರೆಂದು ಒಂದು ಅಭಿಪ್ರಾಯ. ಅವರ ಶಿಷ್ಯೆ ಅಮೀರಬಾಯಿ ಕರ್ನಾಟಕಿ ಇರುತ್ತಿದ್ದ ಬಿಜಾಪುರದ ಅವರ ಮನೆಯಲ್ಲಿ ಕೊನೆಯುಸಿರೆಳೆದರೆಂದು ಮತ್ತೊಂದು ಅಭಿಪ್ರಾಯ ಆದರೆ ಸತ್ಯವೇನು ಎಂಬುದು ರಹಸ್ಯವಾಗಿಯೇ ಉಳಿದಿದೆ.

ಕರ್ನಾಟಕ ಅಕಾಡೆಮಿಯು ೧೯೬೭ ರಲ್ಲಿ ಬಾದಷಾ ಮಾಸ್ತರರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ. ಇತ್ತೀಚಿಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ 'ಬೇವೂರ ಬಾದಶಹ' ಕಿರು ಹೊತ್ತಿಗೆ ಮಂಟಪಮಾಲೆಯ ೨೧೨ ನೇ ಕೃತಿಯಾಗಿ ಪ್ರಕಟವಾಗಿದೆ. ಇದನ್ನು ಬರೆದವರು ಎಸ್. ಎಸ್. ಬಸುಪಟ್ಟದ. ಒಂದು ಮಿತಿಯಲ್ಲಿ ಅವರ ಚರಿತ್ರೆಯನ್ನು ಕಟ್ಟಿಕೊಡುವ ಮತ್ತು ಅವರ ನೆನಪನ್ನು ಉಳಿಸುವ ಪ್ರಯತ್ನ ಶ್ಲಾಘನೀಯ.

**೬) ಸಂಗನಬಸಪ್ಪ ಕುಕನೂರ:**

ಕಲೆ ಸಂಸ್ಕೃತಿಗಳ ಬೀಡು ಕರ್ನಾಕಟ. ಅದರಲ್ಲೂ ವಿಶೇಷವಾಗಿ ಉತ್ತರಕರ್ನಾಟಕವು ಕಲೆ, ಶಿಲ್ಪವೈಭವ, ಸಂಗೀತ, ವೃತ್ತಿರಂಗಭೂಮಿಯ ಪರಂಪರೆಗೆ ಮೇರು ಪರ್ವತವಿದ್ದಂತೆ. ಇಂದಿಗೆ ಅವುಗಳ ಸಾಧನೆಯನ್ನು ನಾವು ಬೆರಗಿನಿಂದ ನೋಡುತ್ತೇವೆ. ಸಂಗೀತಾಭಿನಯ ಮತ್ತು ವೃತ್ತಿರಂಗಭೂಮಿಯ

ಸಿರಿಸಂಪತ್ತಿನ ಪರಂಪರೆಯ ಕಾಲದಲ್ಲಿ ಬಾಳಿ ಬೆಳಗಿದ ಕಲಾವಿದರು ಎಷ್ಟೆಂದು ಹೇಳಲಾಗದು. ಅಂತಹ ಶ್ರೇಷ್ಠ ಕಲಾವಿದರಲ್ಲಿ ಸಂಗನಬಸಪ್ಪ ಕುಕನೂರ ಇವರ ಹೆಸರು ಅವಿಸ್ಮರಣೀಯವಾದುದು. 'ಭಕ್ತ ಪ್ರಹ್ಲಾದ' 'ಉಷಾ ಸ್ವಯಂವರ'ಗಳಲ್ಲಿ ನಾರದ, ವೀರ ಅಭಿಮನ್ಯುದಲ್ಲಿ ಮೇಘನಾದ, ದ್ರೌಪದಿಸ್ವಯಂವರದಲ್ಲಿ ಶಕುನಿ ಈ ಪಾತ್ರಗಳು ಸಂಗನಬಸಪ್ಪನವರ ಅದ್ಭುತ ಅಭಿನಯದಿಂದ ರಂಗೇರುತ್ತಿದ್ದವು. ವಾಮನರಾಯ ಮಾಸ್ತರರ ಕಂಪನಿಯಲ್ಲಿ ನಟರಾಗಿ, ಅವರ ಪರಮ ಶಿಷ್ಯರಾಗಿ, ತಮ್ಮ ಮನೆಮಾರು ತೊರೆದು, ಆಸ್ತಿಯ ಹಂಗು ಹರಿದು, ಸಂಪೂರ್ಣ ಜೀವನವನ್ನೇ ರಂಗಕ್ಕಾಗಿ ರಂಗಭೂಮಿ ಸೇವೆಗಾಗಿ ಮೀಸಲಾಗಿರಿಸಿ ಬಾಳಿ ಬದುಕಿದ ಈ ಮಹಾನ್ ಕಲಾವಿದನ ಸೇವೆ ಅನನ್ಯವಾದುದು. ಇಂಥ ತ್ಯಾಗಜೀವಿ ಕಲಾವಿದರಿಂದಲೇ ಉತ್ತರ ಕರ್ನಾಟಕ ರಂಗಭೂಮಿಯ ಇತಿಹಾಸ ವೈಭವದ ಮೆಟ್ಟಿಲೇರಿತು. ಅನೇಕ ಸಮೃದ್ಧ ಕಲಾವಿದರ ಕೊಡುಗೆ, ಕಲೆ, ನಟನೆ, ಪ್ರೋತ್ಸಾಹದಿಂದ ಇಂದಿಗೂ ಈ ಕಲೆ ಜೀವಂತವಾಗಿ ಉಳಿದುಕೊಂಡಿದೆ.

ಸಂಗನಬಸಪ್ಪ ಕುಕನೂರರ ಮನೆತನ ಯಾವುದಕ್ಕೂ ಕೊರತೆ ಇಲ್ಲದಂತಹ ಸ್ಥಿತಿವಂತ ಮನೆತನವಾಗಿತ್ತು. ತಂದೆ ಸಂಗಪ್ಪ, ತಾಯಿ ಈರವ್ವ ಒಳ್ಳೆಯ ಧಾರ್ಮಿಕರು. ಆಗಾಗ ಭಜನೆ, ಕೀರ್ತನೆಗಳನ್ನು ಏರ್ಪಡಿಸಿ, ಕಲಾವಿದರನ್ನು ಮನೆಗೆ ಕರೆಸಿ ಗೌರವಿಸುತ್ತಿದ್ದರು. ಮನೆಯಲ್ಲಿ ಜರುಗುವ ಇಂಥ ಸಂಗೀತಮಯ ಕಾರ್ಯಕ್ರಮಗಳು ಬಾಲಕ ಸಂಗನಬಸಪ್ಪನ ಮೇಲೆ ಗಾಢ ಪ್ರಭಾವ ಬೀರಿದವು. ಇವುಗಳ ಪರಿಣಾಮದಿಂದ ಬಾಲಕ ಸಂಗನಬಸಪ್ಪ ಯಾವಾಗಲೂ ರಾಗಾಲಾಪ, ಹಾಡುಗಳನ್ನು ಗುನಿಗುನಿಸುತ್ತಲೇ ಇರುತ್ತಿದ್ದನು. ಹೀಗಾಗಿ ಸಂಗೀತದ ಕಡೆ ಅವನ ಒಲವು ಹೆಚ್ಚತೊಡಗಿತು. ಎಲ್ಲೆಲ್ಲಿ ಭಜನೆ, ಕೀರ್ತನೆಗಳು ಇರುತ್ತಿದ್ದವೋ ಅಲ್ಲಿ ಸಂಗನಬಸಪ್ಪನ ಹಾಜರಾತಿ ಇರುತ್ತಿತ್ತು. ಅನೇಕ ಸಭೆ ಸಮಾರಂಭಗಳಲ್ಲಿ ಪಾಲ್ಗೊಂಡು ಉತ್ಸಾಹದಿಂದ ಹಿಮ್ಮೇಳದಲ್ಲಿ ನಿಂತು ತಾಳಬಾರಿಸುತ್ತ ಹುರುಪಿನಿಂದ ಹಾಡುತ್ತಿದ್ದನು. ಸಂಗೀತದ ಗುಂಗಿನಲ್ಲಿದ್ದ ಮಗನ ಸ್ಥಿತಿ ನೋಡಿ ತಂದೆಯವರು ಶಾಸ್ತ್ರೀಯವಾದ ರೀತಿಯಲ್ಲೇ ಸಂಗೀತ ತರಬೇತಿ ಕೊಡಿಸಲು ನಿರ್ಧರಿಸಿದರು. ಆಗ ಅವರಿಗೆ ನೆನಪಾದದ್ದು ವಾಮನರಾಯರ ಕಂಪನಿ. ಸಂಗನಬಸಪ್ಪನಿಗೆ ಹದಿನಾರು ವಯಸ್ಸು. ಸಂಗೀತ ಕಲಿಸುವ ಗುರುವಿಗೆ ಅಂದಿನ ಕಾಲದಲ್ಲಿ ವಿಶೇಷ ಮನ್ನಣೆಯಿತ್ತು. ಸಂಗೀತ ಕಲಿಯಬೇಕೆಂದರೆ ನಾಟಕ ಕಂಪನಿಗಳನ್ನು ಹುಡುಕಿಕೊಂಡು ಹೋಗಬೇಕು. ಆಗ ವಿಶ್ವಗುಣಾದರ್ಶ ನಾಟಕ ಮಂಡಳಿ ರಾಯಚೂರು ಜಿಲ್ಲೆಯಲ್ಲಿ ಸುತ್ತಾಡುತ್ತಿತ್ತು ಸಂಘದೊಡೆಯ ವಾಮನರಾಯರು ಸಂಗೀತ ಕ್ಷೇತ್ರದಲ್ಲಿ ಅಪಾರ ಪರಿಣಿತಿ, ಹಾಗೂ ಹೆಸರು ಮಾಡಿದ್ದರಿಂದ ಸಂಗೀತ ಮಾಸ್ತರರೆಂದೇ ಪ್ರಸಿದ್ಧರಾಗಿದ್ದರು. ಸುರೇಲ ಕಂಠ, ಸೂಕ್ಷ್ಮ ಸ್ವರಬೇಧ ಜ್ಞಾನ ಪಡೆದಿದ್ದ ಸಂಗನಬಸಪ್ಪನವರಿಗೆ ವಾಮನರಾವ ಮಾಸ್ತರರ ನಾಟಕ ಮಂಡಳಿಯ ಪ್ರವೇಶ ಸುಲಭವಾಯಿತು. ಅತೀವ ಉತ್ಸುಕನಾಗಿ ಸಂಗೀತ ಕಲಿಯಲು ಬಂದ ಈ ಶಿಷ್ಯನನ್ನು ನೋಡಿ ವಾಮನರಾಯರು ಪ್ರೀತಿಯಿಂದ ಮಾತನಾಡಿಸಿ, ತರಬೇತಿ ಕೊಡಲು ಒಪ್ಪಿಗೆ ಸೂಚಿಸಿದರು.

ವಾಮನರಾಯರ ನಾಟಕ ಮಂಡಳಿ ಶಿಸ್ತುಬದ್ಧವಾದ ಅನೇಕ ನಿಯಮ, ಕಟ್ಟು ಕಟ್ಟಳೆಗಳಿಂದ ಕೂಡಿತ್ತು. ಶಿಸ್ತು ಮತ್ತು ನೀತಿಗೆ ಹೆಸರಾಗಿದ್ದ ಮಾಸ್ತರರ ನಾಟಕ ಮಂಡಳಿಯಲ್ಲಿ ಸಂಗನಬಸಪ್ಪನ ಸಂಗೀತ ಅಭ್ಯಾಸ ಪ್ರಾರಂಭವಾಯಿತು. ಸಂಗೀತ ಪಾಠದ ಜೊತೆಗೆ ಅಭಿನಯ ತರಬೇತಿಯು ಸಹಜವಾಗಿ ದೊರೆಯಿತು. ಪಾತ್ರ ಮಾಡಬೇಕೆಂಬ ಆಸೆಯೂ ದಿನದಿಂದ ದಿನಕ್ಕೆ ಬೆಳೆಯಿತು. ಅಲ್ಲಿ ನಡೆಯುತ್ತಿದ್ದ ಅನೇಕ ನಾಟಕಗಳನ್ನು ನೋಡಿ ಬಣ್ಣದ ಕನಸುಗಳನ್ನು ಹೆಣೆದ. ನೋಡಲು ಸ್ಫುರದ್ರೂಪಿಯಾದ ಸಂಗನಬಸಪ್ಪನು ತುಂಬಾ ಆಕರ್ಷಕ ತರುಣನಾಗಿದ್ದನು. ನಾಟಕದಲ್ಲಿ ಅಭಿನಯಿಸುವ ಅಭಿಲಾಷೆಯನ್ನು ವ್ಯಕ್ತಪಡಿಸಿದಾಗ, ಪರೀಕ್ಷಿಸಿ ನೋಡಬೇಕೆಂದು ವಾಮನರಾಯರು ನಾಟಕದಲ್ಲಿ ಪಾತ್ರ ನೀಡಿದರು. ಸಂಗೀತ ಕಲಿಯಲು ಬಂದ ಶಿಷ್ಯ ನಾಟಕಗಳಲ್ಲಿ ಭಾಗವಹಿಸಿ ಗುರುವಿನ ಮನ ಗೆದ್ದು, ಪ್ರೀತಿ ಸಂಪಾದಿಸಿದ. ಇಲ್ಲಿಂದ ಸಂಗನಬಸಪ್ಪನ ವೃತ್ತಿರಂಗಭೂಮಿಯ ಜೀವನದ ಅಧ್ಯಾಯ ಪ್ರಾರಂಭವಾಯಿತು.

'ಭಕ್ತಪ್ರಹ್ಲಾದ' ನಾಟಕದಲ್ಲಿ ನಾರದನ ಪಾತ್ರಧಾರಿಯಾದ ಸಂಗನಬಸಪ್ಪ ತಂಬೂರಿ ಹಿಡಿದು, ಹಾಡುಗಳನ್ನು ಹಾಡುತ್ತಿರುವಾಗ ಜನ ಮಂತ್ರಮುಗ್ಧರಾಗುತ್ತಿದ್ದರಂತೆ. ಆ ಮನಮೋಹಕ ಸನ್ನಿವೇಶ ಎಲ್ಲರ ಮನ ಹಿಡಿದಿಡುವಂತಿರುತ್ತಿತ್ತು. ಹಾಡು ಮುಗಿದು ಮಾತು ಹೇಳತೊಡಗಿದಾಗ ಪ್ರೇಕ್ಷಕರು ಕೇಕೆ ಹಾಕುತ್ತಾ, ಸಿಳ್ಳೆ ಹೊಡೆದು ಹುರಿದುಂಬಿಸುತ್ತಿದ್ದರು. ಚಪ್ಪಾಳೆ ತಟ್ಟುತ್ತ ತಮ್ಮ ಮೆಚ್ಚುಗೆ ಸೂಚಿಸುತ್ತಿದ್ದರು. ಗಾನರತ್ನ ಗಂಗೂಬಾಯಿ, ಖಯಾದು, ಬಸವರಾಜ ಮನಸೂರ, ಹಿರಣ್ಯಕಶಪ, ಸಂಗೀತರತ್ನ ಮಲ್ಲಿಕಾರ್ಜುನ ಮನಸೂರರ, ಪ್ರಹ್ಲಾದ – ಈ ಎಲ್ಲಾ ಮಹಾನ್ ಕಲಾವಿದರ ಬಳಗದಲ್ಲಿ ಸಂಗನಬಸಪ್ಪನ ನಾರದ ಪಾತ್ರ ವಿಶೇಷವಾಗಿತ್ತು. ಶಾಸ್ತ್ರೀಯ ಸಂಗೀತದ ಹಿರಿಮೆ ಮೆರೆವ ಇವರೆಲ್ಲರೂ ರಂಗದ ಮೇಲೆ ಬಂದರೆ ಸಂಗೀತ ಕಛೇರಿಯೇ ಏರ್ಪಟ್ಟಂತೆ ಭಾಸವಾಗುತ್ತಿತ್ತು. ಮಲ್ಲಕಾರ್ಜುನ ಮನಸೂರ ಬಾಲ ಕಲಾವಿದರಾಗಿ ಕಂಪನಿ ಸೇರಿದಾಗ ಅವರಿಗೆ ದಿನವೂ ಸಂಗೀತ ಹೇಳಿಕೊಟ್ಟವರು ಸಂಗನಬಸಪ್ಪ. ಮಲ್ಲಿಕಾರ್ಜುನ ಮನಸೂರರ ಮೊದಲ ಸಂಗೀತ ಗುರುಗಳೆಂದರೆ ವಾಮನರಾವ ಮಾಸ್ತರ ಮತ್ತು ಸಂಗನಬಸಪ್ಪ, ಕುಕನೂರ ಸಂಗನಬಸಪ್ಪನವರ ಸಂಗೀತಜ್ಞಾನ ಅಗಾಧವಾಗಿತ್ತೆಂದು ಮನಸೂರರು ಸ್ಮರಿಸಿದ್ದಾರೆ.

ಸಂಘದ ಹಿರಿಯ ಕಲಾವಿದರಾದ ಗಾನರತ್ನ ಗಂಗೂಬಾಯಿ, ಬಸವರಾಜ ಮನಸೂರ, ಗುರುರಾವ್ ದೇಶಪಾಂಡೆ ಇವರೆಲ್ಲ ಪರಿಸ್ಥಿತಿಯ ಅನುಕೂಲತೆ ನೋಡಿ ಕಂಪನಿ ಬಿಟ್ಟು ಹೋದರು. ಆದರೆ ಇದಕ್ಕೆ ಅಪವಾದವೆಂಬಂತೆ ಸಂಗನಬಸಪ್ಪ ಕಂಪನಿ ತೊರೆಯದೆ ನಿಷ್ಠೆಯ ಬದುಕನ್ನು ಇಟ್ಟುಕೊಂಡು, ವಿಶ್ವಗುಣಾದರ್ಶ ಕಂಪನಿ ಅಸ್ತಿತ್ವದಲ್ಲಿರುವಷ್ಟು ದಿನ ವಾಮನರಾಯರ ಕೈಬಿಡದೆ ಶ್ರದ್ಧೆ ಭಕ್ತಿಯಿಂದ ಅಪಾರ ಸೇವೆಗೈದು ವಾಮನರಾಯರ ಮೆಚ್ಚುಗೆ, ಅಭಿಮಾನಕ್ಕೆ ಪಾತ್ರರಾದರು. ಭಕ್ತ ಪುಂಡಲೀಕ, ಸಾಧ್ವಿ–ಸಖೂಬಾಯಿ ನಾಟಕಗಳಲ್ಲಿ ಉತ್ತಮ ಪಾತ್ರ ಮಾಡಿದರು. ವೀರ ಅಭಿಮನ್ಯು ನಾಟಕದಲ್ಲಿ ಮೇಘನಾದನಾಗಿ ಮನೋಜ್ಞ ಅಭಿನಯ ನೀಡಿದರು. ಪ್ರೇಕ್ಷಕರನ್ನು ನಗೆಗಡಲಲ್ಲಿ

ಮುಳುಗಿಸುತ್ತಿದ್ದರು. ಅವರ ಅದ್ಭುತ ಅಭಿನಯ ಅವರನ್ನು ಅಷ್ಟೊಂದು ಎತ್ತರಕ್ಕೇರಿಸಿತ್ತೆಂದು ಹೇಳಬಹುದು.

ಕೌರವರು ರಚಿಸಿರುವ ಚಕ್ರವ್ಯೂಹ ಭೇದಿಸುವ ಸುದ್ದಿ ತಿಳಿಸಲು ಹೊರಡುವ ಸನ್ನಿವೇಶಗಳನ್ನು ಮೇಘನಾದ ಪಾತ್ರಧಾರಿ ಸಂಗನಬಸಪ್ಪ ಮಾಡುವ ಅಭಿನಯ, ನಗೆಪಾಟಲಾಗುವ ಸಂದರ್ಭಗಳು ಸಹಜಅಭಿನಯದ ಮೂಲಕ ಯಶಸ್ವಿಯಾಗಿ ಪ್ರೇಕ್ಷಕವರ್ಗಕ್ಕೆ ಅಪ್ಯಾಯಮಾನವೆನಿಸಿದ್ದವು. ವಿಶ್ವಗುಣಾದರ್ಶದ ನಂತರ 'ಶ್ರೀ ಕೃಷ್ಣ ನಾಟಕ ಮಂಡಳಿ', 'ವಿಶ್ವರಂಜನಿ ನಾಟಕ ಮಂಡಳಿ'ಗಳಲ್ಲಿ ಪ್ರಮುಖ ಪಾತ್ರಗಳನ್ನೂ ನಿರ್ವಹಿಸಿದರು. ತದನಂತರ ಊರಿಗೆ ಬಂದು ತಮ್ಮದೇ ಆದ 'ಭರತಕಲಾ ನಾಟ್ಯಸಂಘ' ಪ್ರಾರಂಭಿಸಿದರು. ಸಂಗನಬಸಪ್ಪ ನಾಟಕ ಪ್ರಪಂಚ ಸೇರಿದ ಮೇಲೆ ಸಂಸಾರಿಕ ಪ್ರಪಂಚ ಮರೆತರು. ಇದು ತಂದೆ ತಾಯಿ ಕುಟುಂಬದವರಿಗೆ ಸರಿಬರಲಿಲ್ಲ. ಬಣ್ಣದ ಹುಚ್ಚಿಗೆ ಬಿದ್ದ ಮಗನ ಬಗ್ಗೆ ಚಿಂತಿಸಿದರು. ಇರುವ ಒಬ್ಬ ಮಗ ಆಸ್ತಿಪಾಸ್ತಿ ನೋಡಿಕೊಂಡು ತಮಗೆ ಸಹಾಯಕನಾಗಬಹುದೆಂಬ ಅವರ ಕನಸು ಕನಸಾಗಿಯೇ ಉಳಿಯಿತು.

ನಾಟಕದ ಜೊತೆಗೆ ಚಾರಿತ್ರ್ಯವನ್ನು ಉಳಿಸಿಕೊಂಡು ಬಂದಿದ್ದ ಸಂಗನಬಸಪ್ಪನವರ ಜೀವನವು ತಂದೆಯವರ ಜೀವನದಲ್ಲಿ ಅನಿರೀಕ್ಷಿತ ಬದಲಾವಣೆ ತಂದಿತು. ಅವರು ಆಧ್ಯಾತ್ಮದತ್ತ, ತತ್ವಜ್ಞಾನ, ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಮೊದಲಿನಿಂದಲೂ ಅವರಲ್ಲಿ ಧಾರ್ಮಿಕ ಚಟುವಟಿಕೆಗಳು ಒಳಗೊಳಗೆ ಮನೆ ಮಾಡಿದ್ದವು. ಅದಕ್ಕೆ ಮುಕ್ತವಾದ ಅವಕಾಶ ಸಿಕ್ಕ ಮೇಲೆ ಅದುವೆ ಅವರ ಬದುಕಾಯಿತು. ಯಾತ್ರಾರ್ಥಿಯಾಗಿ ಸಂಚರಿಸುತ್ತಾ ಪಾಠ, ಪ್ರವಚನಗಳಲ್ಲಿ ಸಂಪೂರ್ಣ ತೊಡಗಿಸಿಕೊಂಡರು ಊರನ್ನು ಬಿಟ್ಟು ಬಿಜಾಪೂರ, ಗುಲಬರ್ಗಾ, ರಾಯಚೂರು ಜಿಲ್ಲೆಗಳಲ್ಲಿ ಸಂಚರಿಸುತ್ತಾ ಕಾಲ ಕಳೆಯತೊಡಗಿದರು. ಮಗ ಬಣ್ಣದ ಬದುಕಿಗೆ ಶರಣಾದಂತೆ, ತಂದೆ ಅಧ್ಯಾತ್ಮದಲ್ಲಿ ತಲ್ಲೀನರಾದರು. ಊರಲ್ಲಿಯ ಮನೆಯ ಜವಾಬ್ದಾರಿ ನೋಡಿಕೊಳ್ಳುವ ಹೊಣೆಗಾರಿಕೆ ಅನಿವಾರ್ಯವಾಗಿ ಅಳಿಯ ಕೊಟ್ರೆಪ್ಪ ಗುತ್ತಿಯ ಹೆಗಲಿಗೆ ಬಿತ್ತು. ಮಗನು ನಾಟಕಕ್ಕಾಗಿ, ತಂದೆ ಅಧ್ಯಾತ್ಮಕ್ಕಾಗಿ ಸದಾ ಸಂಚಾರ ನಡೆಸಿದರು.

ನಾಟಕ ಮಂಡಳಿ ಮುಚ್ಚಿದ ನಂತರ ಊರಲ್ಲಿಯೇ ಇರಲು ಸಂಗನಬಸಪ್ಪನವರಿಗೆ ಕುಟುಂಬವರ್ಗದವರು ಆಗ್ರಹಿಸಿದರು. ತಂದೆಯವರು ಊರು ಬಿಟ್ಟುಹೋಗಿ ಗುಲಬರ್ಗಾ ಜಿಲ್ಲೆಯ ಸೇಡಂ ಮಠದ ಸ್ವಾಮಿಗಳಾಗಿ ಪ್ರವಚನ ಕೀರ್ತನೆಗಳಿಂದ ಪ್ರಸಿದ್ಧರಾಗಿದ್ದರು. ಎಷ್ಟು ಹೇಳಿದರೂ ಸಂಗನಬಸಪ್ಪನವರ ಮನಸ್ಸು ಮನೆಯಲ್ಲಿರಲು ಒಪ್ಪಲಿಲ್ಲ. ರಂಗಭೂಮಿಯಲ್ಲಿ ಪ್ರಸಿದ್ಧಿ ತಂದು ಕೊಟ್ಟ ನಾರದನ ಪಾತ್ರ ಹಾಗೂ ಆತ್ಮೀಯ ಸಂಗಾತಿ-ತಂಬೂರಿ ಮತ್ತೆ ಅವರನ್ನು ರಂಗದತ್ತ ಎಳೆದವು. ನಟ ಸಾರ್ವಭೌಮ ಹಂದಿಗನೂರು ಸಿದ್ರಾಮಪ್ಪನವರ 'ವಿಶ್ವಕಲಾರಂಜನ ನಾಟ್ಯಸಂಘ' ಕ್ಕೆ ಹೋಗಿ, ತಂಬೂರಿ

ನುಡಿಸುತ್ತ ಉತ್ತಮ ಅಭಿನಯದ ಮೂಲಕ ಪಾತ್ರಕ್ಕೆ ಜೀವ ತುಂಬಿದರು. ವಯಸ್ಸಾಗುತ್ತಾ ಬಂದಂತೆ ಪಾತ್ರ ನಿರ್ವಹಣೆ ಅಸಾಧ್ಯವಾಗತೊಡಗಿತು. ಧೈರ್ಯಗೆಡದೆ ರಂಗಮಂದಿರವೇ ತನ್ನ ಅರಮನೆ ಎಂದು ತಿಳಿದು ನಿತ್ಯವು ತಂಬೂರಿ ನುಡಿಸುತ್ತ ನಾಟಕ ಕಂಪನಿಯಲ್ಲಿಯೇ ಕಾಲಕಳೆಯತೊಡಗಿದರು. ಸಿದ್ರಾಮಪ್ಪನವರು ಸಂಗನಬಸಪ್ಪನವರ ಈ ಸ್ಥಿತಿ ಕಂಡು ಅವರ ವಿನೂತನ ರೀತಿಯ ರಂಗಸೇವೆಗೆ ಬೆರಗಾದರು. ನಾಟ್ಯ ಸಂಘ ಗುಳೇದಗುಡ್ಡದಲ್ಲಿ ಮುಕ್ಕಾಂ ಮಾಡಿದಾಗ ಒಂದು ಘಟನೆ ನಡೆಯಿತು.

ಒಂದು ದಿನ ತಂಬೂರಿ ನುಡಿಸುತ್ತ ರಂಗಗೀತೆಗಳನ್ನು ಹಾಡುತ್ತ ತಲ್ಲೀನರಾಗಿದ್ದರು ಕಲಾವಿದರು ಊಟಕ್ಕೆ ಕರೆದಾಗ ಅವರಿಗೆ ಎಚ್ಚರ ತಂಬೂರಿ ಕೆಳಗಿಟ್ಟು ಊಟಕ್ಕೆ ಹೋದರು ಬರುವಷ್ಟರಲ್ಲಿ ಅಕಸ್ಮಿಕವಾಗಿ ತಂಬೂರಿ ಒಡೆಯಿತು. ಆದಾದ ಕೆಲದಿನಗಳಲ್ಲಿ ಕಾಕತಾಳೀಯವೆಂಬಂತೆ ಸಂಗನಬಸಪ್ಪನವರ ಆರೋಗ್ಯದಲ್ಲಿ ತೀವ್ರ ಬದಲಾವಣೆಗಳಾದವು. ದೇಹ ಸ್ಥಿತಿ ಏರುಪೇರಾಯಿತು. ಚರ್ಮರೋಗದ ಬಳಲಿಕೆ ಚೇತರಿಸಿಕೊಳ್ಳಲಿಕ್ಕೆ ಅನುವು ಮಾಡಿ ಕೊಡಲಿಲ್ಲ. ನರಳುತ್ತಲೇ ಒಂದು ದಿನ ಸಂಗನಬಸಪ್ಪನವರ ದೇಹವು ತಂಬೂರಿನಾದ ಹೊರಡಿಸದೆ ಸ್ತಬ್ಧವಾಯಿತು. ನಾರದರಾಗಿ ನುಡಿಸುತ್ತಿದ್ದ ತಂಬೂರಿಗೂ ಸಂಗನಬಸಪ್ಪನವರ ಜೀವನಕ್ಕೂ ಇದ್ದ ಅವಿಭಾಜ್ಯ ಸಂಬಂಧ ಅವರ ನಿರ್ಗಮನದಿಂದ ದೃಢಪಟ್ಟಿತು. ಆ ನಾರದನ ಅಮೋಘ ಅಭಿನಯ, ಮೇಘನಾದನ ಪಾತ್ರ, ತಂಬೂರಿಯ ನಾದ ಮಾಧುರ್ಯ, ಅನುಭವಿಸಿದ ರಸಿಕರು ಅವರನ್ನು ಮರೆಯುವಂತಿಲ್ಲ ಅವರ ಸಾಧನೆ, ಸಂಗೀತ ಸಮರ್ಪಣೆ ರಂಗಭೂಮಿಯ ಚರಿತ್ರೆಯಲ್ಲಿ ಅವಿಸ್ಮರಣೀಯ ಅಧ್ಯಾಯವಾಗಿದೆ.

**೭) ಕೇಶವಭಟ್ಟ ಮಿಶ್ರಿಕೋಟಿ:**

ವಾಮನರಾಯರ 'ವಿಶ್ವಗುಣಾದರ್ಶ'ದ ಹೆಸರಾಂತ ಕಲಾವಿದರಲ್ಲಿ ಮಿಶ್ರಿಕೋಟಿಯ ಕೇಶವಭಟ್ಟ ವಾಡೇದ ಅವರೂ ಒಬ್ಬರು. ೧೮೯೯ ರಲ್ಲಿ ಹುಟ್ಟಿದರು. ಬಾಲ್ಯದಿಂದಲೂ ಸಂಗೀತದ ಕಡೆ ವಿಶೇಷ ಆಸಕ್ತಿ. ಹೆಚ್ಚಿನ ವಿದ್ಯಾಭ್ಯಾಸ ಮಾಡಲು ಆಗಲಿಲ್ಲ. ಐದನೇ ತರಗತಿಗೆ ಓದು ನಿಲ್ಲಿಸಿ, ಸಂಗೀತ ಕಲಿಯುವ ಆತುರದಿಂದ ಅನೇಕ ಕಡೆಗಳಲ್ಲಿ ಸುತ್ತಾಡಿದರು. ಮುಂದೆ ವಾಮನರಾಯರ ಕಂಪನಿಯಲ್ಲಿ ಪ್ರವೇಶ ಸಿಕ್ಕಿತು. ಸಂಗೀತ ಸಾಧನೆಯ ಜೊತೆಗೆ ಅಭಿನಯ ಕಲೆಯನ್ನು ಮೈಗೂಡಿಸಿಕೊಂಡರು.

ಅಜಾನುಬಾಹು ಶರೀರ, ಸುಮಧುರ ಕಂಠದ ಕೇಶವಭಟ್ಟರು ನೋಡಲು ಸಾದಗಪ್ಪಾಗಿದ್ದರೂ ಬಣ್ಣದ ಮೈಯಿಂದ ರಂಗಕ್ಕೆ ಬಂದರೆ ಆಕರ್ಷಕವಾಗಿ ಕಾಣುತ್ತಿದ್ದರು.

'ವಿದ್ಯಾಸಾಧನೆ' ನಾಟಕದಲ್ಲಿ ಕೇಶವಭಟ್ಟರು 'ಶುಕ್ರಾಚಾರ್ಯ'ನ ಪಾತ್ರಕ್ಕೆ ಒಪ್ಪುವಂತಿದ್ದರು, ಕೇಶವಭಟ್ಟರು ತಮ್ಮ ತುಂಬಿದ ವ್ಯಕ್ತಿತ್ವದ ಅಭಿನಯದಿಂದ, ಕೊನೆಯತನಕವೂ ಆ ಪಾತ್ರ ಕುಗ್ಗದಂತೆ ಗಾಂಭೀರ್ಯವನ್ನು ಕಾಯ್ದುಕೊಂಡು ಹೋಗುತ್ತಿದ್ದರು. 'ಭಕ್ತಪ್ರಹ್ಲಾದ' ದಲ್ಲಿ ಕೇಶವಭಟ್ಟರ ಹಿರಣ್ಯ ಕಶ್ಯಪನ ಪಾತ್ರದ ಆ ಹುರಿಮೀಸೆ, ಕೆಂಗಣ್ಣು, ಆ ಹಣೆಯಗಂಧ ಆ ಗಧೆ ! ಇವೆಲ್ಲವನ್ನು ನೆನೆದಾಗ

ಇನ್ನೂ ಆ ಭಯಾನಕತೆ ಜುಮ್ಮೆನ್ನುವಂತ್ತಿತ್ತೆಂದು ಎನ್ಕೆಯವರು ತಮ್ಮ ಅನುಭವ ಬರೆದಿದ್ದಾರೆ.[೨೮] ಲಂಕಾದಹನದಲ್ಲಿ–ರಾವಣ ಪಾತ್ರವನ್ನು ಹಾಗೂ 'ಬಾಜೀರಾವ್ ಪೇಶ್ವೆ' ನಾಟಕದಲ್ಲಿ 'ಬಾಪೂ ಗೋಖಲೆ'ಯ ಪಾತ್ರವನ್ನು ಸಹ ಅಷ್ಟೇ ಸುಂದರವಾಗಿ ಅಭಿನಯಿಸುತ್ತಿದ್ದರು.

ಕೇಶವಭಟ್ಟರಿಗೆ ವೀರ, ರೌದ್ರ, ಪಾತ್ರಗಳಿಗೆ ಅವಶ್ಯವಾಗಿದ್ದ ರೂಪ, ಗಾಂಭಿರ್ಯ, ಅಂಗರಚನೆ, ಕಂಠ ಎಲ್ಲವೂ ಇದ್ದವು.

**ಎಲೇ ಮಾಧವನೇ ನಿನ್ನ ಹೃದಯ ಭೇದಿಸುವೆ ಖೂಳ, ನೀಚ**

**ಫಡಫಡ ನಿನ್ನ ವೈಕುಂಠವ ನಾ ಸುಡುವೆನೀಗ ಬೇಗ ।**

ಎಂದು ಗದೆ ತೋರುತ್ತಾ, ಗೊಗ್ಗರು ಧ್ವನಿಯಲ್ಲಿ ರಂಗವೇದಿಕೆ ನಡುಗುವ ದೃಶ್ಯ ಕಣ್ಮುಂದೆ ಕುಣಿದಂತೆ ಆಗುತ್ತದೆ [೨೯].

ಕೃಷ್ಣಾರ್ಜುನರ ಯುದ್ಧದಲ್ಲಿ – ಚಿತ್ರಸೇನ, ವೀರ ಅಭಿಮನ್ಯುವಿನಲ್ಲಿ – ಜಯದ್ರಥ, ಪದ್ಮಾವತಿ ಪರಿಣಯದಲ್ಲಿ ಚೋಳರಾಜ, ಕೃಷ್ಣಲೀಲೆಯಲ್ಲಿ – ಕಂಸ ಮುಂತಾದವು ಇವರ ಜನಪ್ರಿಯ ಪಾತ್ರಗಳಾಗಿದ್ದವು. ಗಾನಾಭಿನಯದ ವಿಶೇಷತೆಯಿಂದ ಭಟ್ಟರು ವಿಶ್ವಗುಣಾದರ್ಶದ ಆಸ್ತಿಯಾಗಿ ನಿಂತರು. ಕೇಶವಭಟ್ಟರ ನಿಷ್ಠೆ ಪ್ರಾಮಾಣಿಕತೆ ವಾಮನರಾಯರ ಮೆಚ್ಚುಗೆ ಪಡೆದವು. ಅವರ ಮೇಲೆ ತಮ್ಮ ದೃಢವಿಶ್ವಾಸವಿಟ್ಟು ಯಾವುದೇ ಕೆಲಸವಿರಲಿ ಅವರನ್ನು ಕೇಳಿಯೇ ಮಾಡುತ್ತಿದ್ದರು. ಕಂಪನಿಯ ಕೆಲವೊಂದು ಜವಾಬ್ದಾರಿ ಕೆಲಸಗಳನ್ನು ಕೇಶವಭಟ್ಟರೇ ನಿರ್ವಹಿಸುತ್ತಿದ್ದರು. ಕಂಪನಿ ಇಳಿಮುಖವಾಗಲು ಅದನ್ನು ತೊರೆದು ತೀರ್ಥಯಾತ್ರೆ ಕೈಗೊಂಡರು. ಅನಂತರ ಮಿಶ್ರೀಕೋಟಿಯಲ್ಲಿಯೇ ಉಳಿದು ಕೀರ್ತನೆ ಮಾಡುತ್ತ ಕಾಲಕಳೆಯತೊಡಗಿದರು. ಹೀಗೆ ಎಂಟು ವರುಷಗಳ ಕಾಲ ಕಾಯಕ ನಿರತರಾಗಿರಲು ಒಮ್ಮಿಂದೊಮ್ಮೆಲೆ ಅನಾರೋಗ್ಯ ತಲೆದೋರಿ ಹೊಟ್ಟೆನೋವಿನ ಬಾಧೆಯಿಂದ ಬಳಲುತ್ತ ೧೯೪೪ ರಲ್ಲಿ ಕೊನೆಯುಸಿರೆಳೆದರು. ಅದ್ಭುತ ನಟನ ಕಲಾಸೇವೆ ರಂಗಭೂಮಿಯಿಂದ ಕಣ್ಮರೆಯಾಗಿ ಹೋಯಿತು.

**೮) ಬಸವರಾಜ ಮನಸೂರ:**

ಧಾರವಾಡದ ಪಶ್ಚಿಮಕ್ಕೆ ಎಂಟು ಮೈಲು ದೂರದಲ್ಲಿರುವ ಚಿಕ್ಕ ಗ್ರಾಮ ಮನಸೂರ, ಇದು ಭಾರತದ ಸಾಂಸ್ಕೃತಿಕ ಭೂಪಟದಲ್ಲಿ ಬಸವರಾಜ ಮನಸೂರ ಮತ್ತು ಮಲ್ಲಿಕಾರ್ಜುನ ಮನಸೂರರಿಂದ ಮಹತ್ವದ ಸ್ಥಾನ ಪಡೆದಿದೆ. ತಮ್ಮ ಮಲ್ಲಿಕಾರ್ಜುನ ಅನೇಕ ವರ್ಷ ರಂಗಸೇವೆಗೈದು ಶಾಸ್ತ್ರೀಯ ಸಂಗೀತವನ್ನು ನೆಲೆಯಾಗಿರಿಸಿಕೊಂಡು ಶಿಖರಕ್ಕೇರಿದರೆ ಅಣ್ಣ ಬಸವರಾಜರು ಇಡೀ ಜೀವನವನ್ನು ರಂಗಸೇವೆಯಲ್ಲಿಯೇ ಕಳೆದರು.

ಬಸವರಾಜರು ಹುಟ್ಟಿದ್ದು ೧೯೦೫ ರಲ್ಲಿ ತಂದೆ ಭೀಮರಾಯಪ್ಪ ತಾಯಿ ನೀಲಮ್ಮ. ಸುಶಿಕ್ಷಿತ ಮತ್ತು ಶ್ರೀಮಂತ ಮನೆತನ. ನಾಟಕ ಸಂಗೀತವೆಂದರೆ ಭೀಮರಾಯಪ್ಪನವರಿಗೆ ಅಚ್ಚುಮೆಚ್ಚು. ಮೇಳಗಳನ್ನು ಕರೆಸಿ ಪ್ರದರ್ಶನ ಏರ್ಪಡಿಸುತ್ತಿದ್ದರು. ದೊಡ್ಡಾಟಗಳಲ್ಲಿ ತಾವೂ ಪಾತ್ರ ಮಾಡುತ್ತಿದ್ದರು. ತಾಯಿ ನೀಲಮ್ಮಾ ಮದುವೆಯ ಹಾಡು, ಗರತಿಯ ಹಾಡು, ಬೀಸುವ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ತಂದೆಯವರೊಂದಿಗೆ ಚಿಕ್ಕವನಿದ್ದಾಗಲೇ ಬಸವರಾಜ ದೊಡ್ಡಾಟ ನೋಡಲು ಹೋಗುತ್ತಿದ್ದನು. ಮಕ್ಕಳೆಲ್ಲ ಓದಿ ನೌಕರಿ ಹಿಡಿಯಲಿ ಎಂಬ ಆಶೆಯಿಂದ ಬಸವರಾಜನನ್ನು ಧಾರವಾಡದ ಮಾಳಾಪೂರ ಕನ್ನಡ ಶಾಲೆಗೆ ಸೇರಿಸಿದರು. ಗಂಡು ಮಕ್ಕಳಿಲ್ಲದ ಹೆಣ್ಣಜ್ಜ, ಅನಾಡ ಚೆನ್ನವೀರಪ್ಪನವರ ಮನೆಯಲ್ಲಿ ವಾಸ್ತವ್ಯದ ಏರ್ಪಾಟು ಮಾಡಿದರು. ಅಜ್ಜನ ಪ್ರೀತಿಗೆ ಪಾತ್ರನಾಗಿ ಬಸವಣ್ಣೆಪ್ಪ (ಬಸವಣ್ಣೆಪ್ಪ ತಂದೆ ತಾಯಿಗಳು ಬಸವರಾಜನಿಗೆ ನಾಮಕರಣ ಮಾಡಿದ ಹೆಸರು) ಆನಂದದಲ್ಲಿಯೇ ದಿನಗಳನ್ನು ನೂಕಿದ. ಅಭ್ಯಾಸದ ಕಡೆಗೆ ಲಕ್ಷ್ಯ ಹರಿಸಲಿಲ್ಲ. ಶಿಕ್ಷಣ ತಲೆಗೆ ಹತ್ತದಾಯಿತು. ಪುಂಡ ಹುಡುಗರ ಸಹವಾಸ ಸೇರಿ ಪುಢಾರಿಯಾಗಿ ಪಾಟೀ ಚೀಲ ಮರಕ್ಕೆ ಹಾಕಿ ಆಟವಾಡುತ್ತ ಶಾಲೆಗೆ ಚಕ್ಕರ್ ಹೊಡೆಯಹತ್ತಿದ ಇದರಿಂದ ಅಜ್ಜನ ಶಿಕ್ಷೆಗೆ ಗುರಿಯಾಗಬೇಕಾಯ್ತು. ಶಾಲೆಯಲ್ಲಿ ಕಲಿತದ್ದು ಬಹಳವಲ್ಲ. ಪ್ರಾಥಮಿಕ ಶಿಕ್ಷಣವನ್ನಷ್ಟೇ ಪೂರೈಸಿದರು. ಆ ವೇಳೆಗೆ ಅವರಿಗೆ ಶಾಲಾ ಕಲಿಕೆಯಲ್ಲಿ ಸಮಾಧಾನ ಕಳೆದಿತ್ತು. ಸಂಗೀತದ ಹುಚ್ಚು ತಲೆಗೇರಿತ್ತು. ಮಗನ ಈ ಇಂಗಿತವನ್ನರಿತ ತಂದೆ ಭೀಮರಾಯಪ್ಪನವರು ಮನಸೂರಿಗೆ ವಾಪಸ ಕರೆ ತಂದರು.

ಭೀಮರಾಯಪ್ಪನರು ತಮಗೆ ಚೆನ್ನಾಗಿ ಪರಿಚಯವಿದ್ದ ಕರ್ನಾಟಕ ಸಂಗೀತ ವಿದ್ವಾಂಸರಾದ ರಬಕವಿಯ ಅಯ್ಯಪ್ಪಸ್ವಾಮಿಯವರನ್ನು ಕರೆತಂದು, ತಮ್ಮ ಮಗನಿಗೆ ಸಂಗೀತ ವಿದ್ಯೆ ಹೇಳಿಕೊಡಲು ಕೇಳಿದರು. ಅದಕ್ಕೆ ಒಪ್ಪಿದ ಅಯ್ಯಪ್ಪಸ್ವಾಮಿ ಸಂಗೀತಪಾಠವನ್ನು ಬಸವರಾಜನಿಗೆ ನೀಡತೊಡಗಿದರು. ಆಗ ಬಸವರಾಜನಿಗೆ ಹತ್ತು ವರ್ಷ. ಈ ವಯಸ್ಸಿಗೆ ಸಂಗೀತ ಕಲಿಯುವ ಯೋಗ ಲಭಿಸಿದ್ದು ಸುದೈವವೇ ಎನ್ನಬೇಕು.

ಅಯ್ಯಪ್ಪಸ್ವಾಮಿಯವರಲ್ಲಿ ಬಸವರಾಜ ಎರಡು ವರ್ಷ ಸತತ ಪಾಠ, ಪ್ರವಚನ, ಸಂಗೀತ ಅಭ್ಯಾಸ ಮಾಡಿದರು. ಅಯ್ಯಪ್ಪಸ್ವಾಮಿಯವರ ನಿರ್ದೇಶನದಲ್ಲಿ 'ಕೀಚಕ ವಧೆ' ನಾಟಕದಲ್ಲಿ ಬಸವರಾಜನದು ಪ್ರಧಾನ ಪಾತ್ರ. 'ಕೀಚಕ'ನಾಗಿ ಅಭಿನಯ ಹಾಡುಗಾರಿಕೆಯಿಂದ ಜನರ ಮತ್ತು ಮನೆಯವರ ಮೆಚ್ಚುಗೆ ಪಡೆದುಕೊಂಡರು.

ಅಜ್ಜ ಅನಾಡ ಚೆನ್ನವೀರಪ್ಪನವರಿಗೆ ಸಾಹಿತಿಗಳು, ಕಲಾವಿದರೆಂದರೆ ಪಂಚಪ್ರಾಣ. ಹೀಗಾಗಿ ಅವರಿಗೆ ಅನೇಕ ಸಾಹಿತಿ, ಸಂಗೀತಗಾರರ ಒಡನಾಟ ಅಪಾರವಾಗಿತ್ತು. ಅಜ್ಜನ ಮನೆಯ ಪರಿಸರ

ಸಂಗೀತ ಸಾಹಿತ್ಯಾಸಕ್ತಿಗಳಿಗೆ ಹೆಚ್ಚಿನ ಅನುವು ನೀಡಿತು. ಮೊಮ್ಮಗನಿಗೆ ಶಾಲೆಯ ಅಭ್ಯಾಸದಲ್ಲಿ ಆಸಕ್ತಿ ಇಲ್ಲದ್ದನ್ನು ಕಂಡು ಸಂಗೀತ ಕಲಿಸಲು ನಿರ್ಧರಿಸಿದರು.

ಅಂದು ಸಂಗೀತ ಕಲಿಯಬೇಕೆಂದರೆ ನಾಟಕ ಕಂಪನಿಗಳತ್ತ ಹೆಜ್ಜೆ ಹಾಕಬೇಕಾಗಿತ್ತು. "ಅಜ್ಜನ ಗೆಳೆಯ ಮಧ್ವರಾಯರಿಗೆ ವಾಮನರಾಯ ಮಾಸ್ತರರು ಚಿರಪರಿಚಿತರು. ಮಧ್ವರಾಯರು ಬಸವರಾಜನನ್ನು ಆಗ ಧಾರವಾಡದಲ್ಲಿ ಕ್ಯಾಂಪ್ ಮಾಡಿದ್ದ ವಾಮನರಾವ್ ಮಾಸ್ತರ ನಾಟಕ ಕಂಪನಿಗೆ ಕರೆದೊಯ್ದು "ಇಂವಾ ಅನಾಡ ಚೆನ್ನವೀರಪ್ಪನವರ ಮೊಮ್ಮಗ ಭಾಳ ಛಂದ ಹಾಡತಾನ, ಸ್ವಲ್ಪ ಉಡಾಳ ಅದಾನ. ನಿಮ್ಮ ಕಂಪನ್ಯಾಗ ಇಟಗೊಂಡ್ರ ದಾರಿಗೆ ಬರೂಮಟಾ ಬಿಡಬ್ಯಾಡ್ರಿ" ಎಂದು ಪರಿಚಯಿಸಿದರು. ವಾಮನರಾವರು ಬಸವರಾಜನನ್ನು ಹಾಡಿಸಿದರು, ಮೆಚ್ಚಿದರು. ಇನ್ನು ಮುಂದೆ ಇಲ್ಲೇ ಇರು ಅಂದರು. ದಿಕ್ಕು ಸಿಕ್ಕಿತು. ಸಂಗೀತ ಅಭಿನಯ ಶಿಕ್ಷಣಕ್ಕೆ ವಿದ್ಯಾಮಂದಿರದಂತಿದ್ದ ರಾಯರ ಕಂಪನಿ ಇವರ ಹವ್ಯಾಸಕ್ಕೆ ಪ್ರಶಸ್ತ ನೆಲೆಯೆನಿಸಿತು[೪೦]. 'ಕಾಳಿದಾಸ' ನಾಟಕದ ಬಾಲಭೋಜನ, ಪಾತ್ರದಿಂದ ರಂಗಸೇವೆಯೂ ಪ್ರಾರಂಭವಾಯಿತು. ನಟನಿಗಿರಬೇಕಾದ ಸುಂದರ ಮೈಕಟ್ಟು, ಸುಮಧುರ ಕಂಠಸಿರಿಯಿಂದ ವಾಮನರಾಯರ ಮನಗೆದ್ದಿದ್ದರು. ರಾಯರ ರಂಗ ತರಬೇತಿಯಿಂದ ಪಳಗಿದರು. ೧೨ ವರ್ಷ ಸಂಗೀತ ಅಭ್ಯಾಸ ಮಾಡಿಸಿ ಮಾಸ್ತರರು ಒಳ್ಳೆಯ ರೀತಿಯಿಂದ ಕಲಿಸಿ, ಬೆಳೆಸಲು ಅಪಾರವಾಗಿ ಶ್ರಮಿಸಿದರು.

ಮುಂದೆ ಬರಬರುತ್ತ ಬಸವರಾಜ ಮನಸೂರ ಎಕ್ಸಟ್ರಾ ನಟರಾದರು. ಯಾರಾದರೂ ಕಂಪನಿ ಬಿಟ್ಟು ಹೋದರೆ ಅಥವಾ ಯಾರಾದರೂ ಖಾಯಿಲೆ ಬಿದ್ದರೆ, ಅದು ಹಾಸ್ಯ, ಕರುಣ, ಭೀಭತ್ಸ ಯಾವುದೇ ಪಾತ್ರವಿರಲಿ ಅವನ್ನು ನಿರ್ವಹಿಸುವ ಜವಾಬ್ದಾರಿ ಇವರಿಗಿದ್ದಿದ್ದರಿಂದ ಎಲ್ಲವನ್ನೂ ನಿಭಾಯಿಸುತ್ತಿದ್ದರು. ಬಲುಬೇಗನೆ ಖ್ಯಾತಿಯ ನಟರೆನಿಸಿದರು. ವಾಮನರಾಯರ ಸಲಹೆಯಂತೆ ಸಂಗೀತನಿಧಿ ಕೆ. ವಾಸುದೇವಾಚಾರ್ಯರಲ್ಲಿ ಸಂಗೀತಾಭ್ಯಾಸ ಮಾಡಿದರು. ಉತ್ತರ ಕರ್ನಾಟಕದ ಅಂದಿನ ವೈಭವದ ದಿನಗಳಲ್ಲಿ ಬಸವರಾಜ ಮನಸೂರ, ಗಂಗೂಬಾಯಿ ಗುಳ್ಳೇದಗುಡ್ಡ ಜನಪ್ರಿಯ ರಂಗಜೋಡಿಯಾಗಿ ಪ್ರೇಕ್ಷಕರ ಮನಸೂರೆಗೊಂಡಿದ್ದರು.

"ಭಕ್ತ ಪುಂಡಲೀಕ", ಸಂದೇಹ ಸಾಮ್ರಾಜ್ಯ, "ಸಖೂಬಾಯಿ" ನಾಟಕಗಳು ಬೆಂಗಳೂರು ಕ್ಯಾಂಪಿನಲ್ಲಿ ಅಖಂಡ ಒಂದು ವರ್ಷ ನಡೆದವು. ಬಸವರಾಜ ಮನಸೂರರ ಸಂಗೀತ ಅಭಿನಯಕ್ಕೆ ರಸಿಕರ ಪ್ರಶಂಸೆಯ ಸುರಿಮಳೆಯಾಯಿತು, ಹಾಡುಗಳಿಗೆ "ಒನ್ಸ್‌ಮೋರ್" ತಪ್ಪಿದ್ದಲ್ಲ[೪೧].

ವಿಶ್ವಗುಣಾದರ್ಶದಿಂದ ಗಂಗೂಬಾಯಿಯವರ ಕಂಪನಿ ಸೇರಿದರು. ನೀಲಕಂಠ ಬುವಾರಲ್ಲಿ ಹೆಚ್ಚಿನ ಸಂಗೀತ ಕಲಿತರು. ಗದಗ ಕ್ಯಾಂಪಿನಲ್ಲಿ ಕಂದಗಲ್ಲ ಹನುಮಂತರಾಯರ "ವರಪ್ರಧಾನ" "ಕಿತ್ತೂರು ರುದ್ರಮ್ಮ" ಪ್ರದರ್ಶನ ನಡೆದವು. ಬಸವರಾಜರ 'ಹುಕ್ಕ'ನ ಪಾತ್ರದ ಅದ್ಭುತ ಅಭಿನಯಕ್ಕೆ ಗದಗಿನ ರಸಿಕರು ೧೯೩೨ರಲ್ಲಿ "ನಟಶೇಖರ" ಹಾಗೂ ಮಲ್ಲಿಕಾರ್ಜುನರಿಗೆ "ಸಂಗೀತ ರತ್ನ" ಬಿರುದು ನೀಡಿ ಸತ್ಕರಿಸಿದರು.

೧೯೩೫ರಲ್ಲಿ ಎಚ್.ಎಂ. ವ್ಹಿ. ಯಿಂದ ಕರೆ ಬಂತು. 'ಬಾಜೀರಾವ್ ಪೇಶ್ವೆ, ಭಕ್ತಸಖೂಬಾಯಿ, ಪಾರ್ವತಿ ಸತ್ವ ಪರೀಕ್ಷೆಯ ನಾಟಕಗಳ ಆರು ಹಾಡುಗಳ ಧ್ವನಿ ಮುದ್ರಣ ನೀಡಿದರು'.

ಮಧುರ ಕಂಠದ ಬಸವರಾಜ ಮನಸೂರ ಅದೇ ಹೊಸದಾಗಿ ವಾಮನರಾಯರ ಕಂಪನಿ ಸೇರಿದಾಗ. ಆಗ ೧೩-೧೪ ವರ್ಷಗಳಿದ್ದಿರಬೇಕು. 'ಕವಿರತ್ನ ಕಾಳಿದಾಸ'ದಲ್ಲಿ ಬಾಲಭೋಜನ ಪಾತ್ರ ಚೆನ್ನಾಗಿ ಮಾಡುತ್ತಿದ್ದರು. ಪ್ರೇಕ್ಷಕರ ಹೃದಯಗಳು ಕರಗುವಂತೆ ಬಸವರಾಜರು ಭಕ್ತಪ್ರಹ್ಲಾದನ ಪಾತ್ರವನ್ನು ನಿರ್ವಹಿಸಿದ್ದು ಸ್ಮರಣೀಯವಾಗಿದೆ. ಹೀಗಾಗಿ ನಾಟಕವು ಮೊದಲಿನಿಂದ ಕೊನೆಯವರೆಗೂ ಕಳೆಕಟ್ಟುತ್ತಿದ್ದವು. ಕಂಪನಿ ತೊರೆದಿದ್ದ ಬಸವರಾಜ 'ತೀರ್ಥಹಳ್ಳಿ' ಕ್ಯಾಂಪಿನಲ್ಲಿ ಮತ್ತೇ ಮಾಸ್ತರರ ಕಂಪನಿಯನ್ನು ಸೇರಿಕೊಂಡರು. ಮಹಾನಂದಾ ನಾಟಕದಲ್ಲಿ – ಮಹಾನಂದಿ ಪಾತ್ರ ಮಾಡುತ್ತಿದ್ದರು.

ವಿಶ್ವಗುಣಾದರ್ಶದ ನಂತರ 'ಶ್ರೀ ಕೃಷ್ಣ ನಾಟಕ ಮಂಡಳಿ' ಯರಾಶಿ ಭರಮಪ್ಪನವರ 'ವಾಣಿ ವಿಲಾಸ', 'ಹಕ್ಕುಂಡಿ ವೀರಪ್ಪನವರ' 'ವಿಶ್ವರಂಜಿನಿ' ಮುಂತಾದ ಮಂಡಳಿಗಳಲ್ಲಿ ಹಿರಿಯನಟರಾಗಿ ಕಲಾಪ್ರತಿಭೆ ಮೆರೆದರು. 'ಶ್ರೀ ಸಿದ್ಧರಾಮ'ದಲ್ಲಿ ಸಿದ್ಧರಾಮ 'ಸಂಶಯ ಸಾಮ್ರಾಜ್ಯ'ದಲ್ಲಿ ಆನಂದ ಶೇಠ, 'ಚಿತ್ರಾಂಗದಾ'ದಲ್ಲಿ ಅರ್ಜುನ, 'ಕುರುಕ್ಷೇತ್ರ' ಅಕ್ಷಯಾಂಬರಗಳಲ್ಲಿ ಶ್ರೀ ಕೃಷ್ಣ 'ಕಡ್ಲಿಮಟ್ಟಿ ಸ್ಟೇಷನ್ ಮಾಸ್ತರ'ದಲ್ಲಿ ನಾಯಕ – ಹೀಗೆ ಸುಪ್ರಸಿದ್ಧ ಪಾತ್ರಗಳಲ್ಲಿ ಅಭಿನಯಿಸಿದರು. ರಂಗಭೂಮಿಯಷ್ಟೇ ಅಲ್ಲ ಸಂಗೀತ, ಚಿತ್ರರಂಗಗಳಲ್ಲೂ ಪ್ರತಿಭೆಯನ್ನು ಮೆರೆದರು.

೧೯೫೪ ರಲ್ಲಿ 'ಕಲಾ ಪ್ರಕಾಶ ನಾಟಕ ಮಂಡಳಿ' ಹೆಸರಿನ ಸ್ವಂತ ಕಂಪನಿ ಪ್ರಾರಂಭಿಸಿದರು. ಇದು ಹದಿನಾಲ್ಕು ವರುಷ ಕರ್ನಾಟಕದ ತುಂಬ ಸಂಚರಿಸಿ ನಾಟಕಗಳನ್ನು ಪ್ರದರ್ಶಿಸಿತು. ೧೯೪೫ ರಲ್ಲಿ ಕಂಪನಿ ಆರ್ಥಿಕ ದುಃಸ್ಥಿತಿಯಿಂದಾಗಿ ತತ್ತರಿಸಿ ಅಂತಿಮ ತೆರೆ ಕಂಡಿತು. ಅನಿವಾರ್ಯವಾಗಿ ಬಸವರಾಜರು ಬದುಕಿಗಾಗಿ ಸಂಗೀತವನ್ನೇ ಅವಲಂಬಿಸಬೇಕಾಯಿತು. ಐವತ್ತನೇ ವಯಸ್ಸಿನಲ್ಲಿ ಗಂಧರ್ವ ಮಹಾವಿದ್ಯಾಲಯದ ಸಂಗೀತ ಪರೀಕ್ಷೆ ಪಾಸು ಮಾಡಿ ೧೯೭೦ ರಲ್ಲಿ ರಾಣೆಬೆನ್ನೂರಿನ ಹೈಸ್ಕೂಲಿನಲ್ಲಿ ಸಂಗೀತ ಶಿಕ್ಷಕರಾಗಿ ನೇಮಕಗೊಂಡರು.

ಬಸವರಾಜರದು ಬಹುಮುಖ ವ್ಯಕ್ತಿತ್ವ, ಸಂಗೀತ ಅಭಿನಯ ಕ್ಷೇತ್ರದಲ್ಲಿ ಸಲ್ಲಿಸಿದ ಅಪಾರ ಸೇವೆಗೆ ೧೯೬೦ರಲ್ಲಿ ಕರ್ನಾಟಕ ಸರಕಾರ ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ ಹಾಗೂ ಮಾಶಾಸನವನ್ನು ನೀಡಿ ಗೌರವಿಸಿತು. ಕನ್ನಡ ರಂಗಭೂಮಿಯ ಕಲಾದಿಗ್ಗಜರೆನಿಸಿಕೊಂಡ ರಂಗಚೇತನ ಬಸವರಾಜ ಮನಸೂರ ಸೆಪ್ಟೆಂಬರ ೧೨, ೧೯೮೯ ರಂದು ಶಿವೈಕ್ಯರಾದರು. ಅವರು ರಂಗ ಸಂಗೀತ, ಅಭಿನಯಕ್ಕೆ ನೀಡಿದ ಕೊಡುಗೆ ಚಿರಸ್ಮರಣೀಯ.

೯) **ಮಲ್ಲಿಕಾರ್ಜುನ ಮನಸೂರ:**

ಹಿಂದೂಸ್ತಾನಿ ಸಂಗೀತ ಕ್ಷೇತ್ರದಲ್ಲಿ ಸ್ವರಸಾಮ್ರಾಟರೆಂದೇ ಖ್ಯಾತರಾಗಿದ್ದ ಮಲ್ಲಿಕಾರ್ಜುನ ಮನಸೂರರ ಸ್ವರದ ಅಭ್ಯಾಸ ಪ್ರಾರಂಭವಾದದ್ದು 'ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿ'ಯಲ್ಲಿ. ಆಗ ಅವರಿಗೆ ಕೇವಲ ಎಂಟು ವರುಷ. ಆಗಲೇ ಅಣ್ಣ ಬಸವರಾಜ ಮನಸೂರ ಆ ಕಂಪನಿಯಲ್ಲಿ ನಟರಾಗಿದ್ದರು. ಅವರ ಹಾದಿಯನ್ನೇ ಹಿಡಿದು ಮಲ್ಲಿಕಾರ್ಜುನರು ಕಂಪನಿ ಸೇರಿದರು. ಆಗ ವಿಶ್ವಗುಣಾದರ್ಶ ಕಂಪನಿ ಹೊಸಪೇಟೆಯಲ್ಲಿತ್ತು. ಒಂದು ದಿನ ಆಕಸ್ಮಾತ್ತಾಗಿ ಎಂಟು ವರ್ಷದ ಮಲ್ಲಿಕಾರ್ಜುನ ಮನಸೂರ ಕ್ಯಾಂಪಿಗೆ ಬಂದರು. ಅಣ್ಣ ಬಸವರಾಜ ಮನಸೂರರಿಗೆ ತಮ್ಮನು ಕಂಪನಿ ಸೇರುವುದು ಬೇಡವಾಗಿತ್ತು. ನಾಟಕದವರ ಬಗೆಗೆ ಸಾಮಾಜಿಕ ದೃಷ್ಟಕೋನ ಗೌರವಾನ್ವಿತವಾಗಿರಲಿಲ್ಲ. ತಾನೇನೊ ತಪ್ಪು ಹಾದಿ ತುಳಿದಿದ್ದಾಗಿದೆ, ಅದೇ ಹಾದಿ ತಮ್ಮನು ತುಳಿಯಬಾರದೆಂದು, ಊರಲ್ಲಿದ್ದು ಶಾಲೆಗೆ ಹೋಗಬೇಕೆಂದು ತಿಳುವಳಿಕೆ ಹೇಳಿದರು. ಮಲ್ಲಿಕಾರ್ಜುನನಿಗೆ ಒಪ್ಪಿಗೆ ಆಗಲಿಲ್ಲ, ಅಣ್ಣನು "ಸಾಲಿ ಬಿಟ್ಟು ಮುಂದೆ ಏನು ಮಾಡಾಂವ? ಎಂದು ಕೇಳಿದರೆ 'ನಿನ್ಹಂಗ ನಾಟಕ ಕಂಪನ್ಯಾಗ ಇರ್ತೀನಿ' ಎಂದ ಬಸವರಾಜರಿಗೆ ಮುಗಿಲು ಹರಿದು ಮೈಮೇಲೆ ಬಿದ್ದಂತಾಯಿತು. ಒಂದು ತಾಸು ಭಾಷಣ ಮಾಡಿ ಮಲ್ಲಿಕಾರ್ಜುನನ ಮನಸ್ಸು ಬದಲಿಸಿ ಮನಸೂರಿಗೆ ಕಳಿಸಿದರಂತೆ. ಆರು ತಿಂಗಳು ಕಳೆಯುವುದರಲ್ಲಿ ಒಂದು ದಿನ ಮತ್ತೆ ಮಲ್ಲಿಕಾರ್ಜುನ ಕಂಪನಿಗೆ ಹಾಜರಾದ. ಅಣ್ಣನ ಉಪದೇಶ ಕೇಳಿ ಮತ್ತೇ ಊರಿಗೆ ಹೋದ. ಅದಾದ ಒಂದು ತಿಂಗಳಲ್ಲಿ ಗಂಟು ಮೂಟೆ ಕಟ್ಟಿಕೊಂಡೇ ಬಂದ "ನಾನು ಈ ಕಂಪನ್ಯಾಗ ಇರಾಂವಾ. ನನಗ ಸಾಲೀ ಬ್ಯಾಡಾಗೈತಿ"[೪೨] ಎಂದು ಹಟ ಹಿಡಿದ ಬಸವರಾಜರಿಗೆ ಬೇರೆ ದಾರಿ ಕಾಣಲಿಲ್ಲ ತಮ್ಮನನ್ನು ಕರೆದುಕೊಂಡು ವಾಮನರಾಯರಿಗೆ ಭೇಟಿಯಾದರು ಅವನ ಮನದಿಂಗಿತವನ್ನು ಹೇಳಿದರು. ರಾಯರು ಸಂಗೀತದ ಪ್ರಾಥಮಿಕ ಜ್ಞಾನ ಕೊಡಲು ಒಪ್ಪಿದರು. ಸಂಗೀತವು ನಾಭಿಯಿಂದ ಬರಬೇಕು, ಹೃದಯಾಂತರಾಳದಿಂದ ಕಾರಂಜಿಯಂತೆ ಪುಟಿಯಬೇಕು ಎಂಬ ಅರಿವನ್ನು ಮಲ್ಲಿಕಾರ್ಜುನನಲ್ಲಿ ಮೂಡಿಸಿದರು. ಸಂಗೀತದ ಜೊತೆಜೊತೆಗೆ ಚಿಕ್ಕಮಟ್ಟ ಪಾತ್ರಗಳನ್ನು ಕೊಟ್ಟರು 'ಭಕ್ತಪ್ರಲ್ಹಾದ'ದಲ್ಲಿ 'ಗೋಟ್ಯಾ' ಎಂಬ ಹಾಸ್ಯ ಪಾತ್ರ, 'ಕೃಷ್ಣಲೀಲೆ'ಯಲ್ಲಿ ವಿಜಯ ಪಾತ್ರಗಳು ಪ್ರೇಕ್ಷಕರನ್ನು ನಗೆಗಡಲಲ್ಲಿ ತೇಲಿಸುತ್ತಿದ್ದವು.

'ಬಾಜೀರಾವ ಪೇಶವೆ' ಎಂಬ ಮರಾಠಿ ನಾಟಕವನ್ನು ವಾಮನರಾಯರು ಅನುವಾದಿಸಿ ಪ್ರಯೋಕ್ಕೆತ್ತಿಕೊಂಡರು ಅದರಲ್ಲಿ ಸ್ವರಾಜ್ಯ ಲಕ್ಷ್ಮೀ ಎಂಬ ಸ್ತ್ರೀ ಪಾತ್ರವನ್ನು ಮಲ್ಲಿಕಾರ್ಜುನರು ಮಾಡುತ್ತಿದ್ದರು. ಇವರ ಪಾತ್ರಗಳಿಗೆ ಸಂಗೀತವೇ ಶ್ರೀರಕ್ಷೆ ಅಭಿನಯಕ್ಕಿಂತ ಹಾಡಿಗೆ ಪ್ರಾಧಾನ್ಯ ಮುಂದೆ ಕಂಪನಿ ಬೆಂಗಳೂರು, ತುಮಕೂರು, ಗದಗ ಕ್ಯಾಂಪು ಮುಗಿಸಿ ಅಥಣಿಗೆ ಬಂದಾಗ ಒಂದು ದಿನ ಮಲ್ಲಿಕಾರ್ಜುನರ ಹಾಡುಗಳನ್ನು ಕೇಳಿ ಅಥಣಿ ಶಿವಯೋಗಿಗಳು 'ಸಾಧನೆ' ಮುಂದುವರೆಸಿ

ಕೀರ್ತಿಶಾಲಿಯಾಗುವಿ ಆಶೀರ್ವದಿಸಿದರು. ಕಂಪನಿ ಬಾಗಿಲುಕೋಟೆಗೆ ಬಂದಾಗ ಪ್ರಸಿದ್ಧ ಸಂಗೀತ ಗವಾಯಿ ನೀಲಕಂಠ ಮಿರಜಕರ ಬುವಾರನ್ನು ಭೆಟ್ಟಿ ಮಾಡಿದರು. ಅವರು ಗ್ವಾಲಿಯರ್ ಘರಾಣೆಯ ಪ್ರಸಿದ್ಧ ಗವಾಯಿಗಳು. ಮಲ್ಲಿಕಾರ್ಜುನ ಮನಸೂರ ಅವರ ಕಂಠ, ಸ್ವರಜ್ಞಾನ, ಸಂಗೀತದಲ್ಲಿದ್ದ ಆಸಕ್ತಿ ತಿಳಿದು ಶಿಷ್ಯನನ್ನಾಗಿ ಸ್ವೀಕರಿಸಿದರು. ಇಲ್ಲಿಂದ ನಾಟಕ ಕಂಪನಿಯ ಒಡನಾಟ ಕಡಿಮೆ ಆಗಿ ಶಾಸ್ತ್ರೀಯ ಸಂಗೀತದಲ್ಲಿ ಸಾಧನೆ ಮುಂದುವರೆಯಿತು. ಮಧ್ಯದಲ್ಲಿ ಬಿಡುವು ಇದ್ದಾಗ ತಿಂಗಳು ಎರಡು ತಿಂಗಳು ವಿಶ್ವಗುಣಾದರ್ಶಕ್ಕೆ ಬಂದು ಸಂಗೀತ, ಅಭಿನಯದ ಸೇವೆ ಸಲ್ಲಿಸುತ್ತಿದ್ದರು. ತಮ್ಮ ಸಂಗೀತ ಸಾಧನೆಗೆ ವಾಮನರಾಯರ ಕಂಪನಿಯೇ ಮೊದಲ ಗುರುಕುಲ ಆಶ್ರಮವಾಗಿತ್ತೆಂದು ಮನಸೂರರು ಆಗಾಗ ಸ್ಮರಿಸುತ್ತಿದ್ದರು.

ಮಲ್ಲಿಕಾರ್ಜುನ ಮನಸೂರರ ಊರು ಧಾರವಾಡದ ಹತ್ತಿರದ ಮನಸೂರು. ತಂದೆ ಭೀಮರಾಯಪ್ಪನವರಿಗೆ ದೊಡ್ಡಾಟ, ನಾಟಕಗಳ ಹುಚ್ಚು ಅವರು ಅಯ್ಯಪ್ಪಸ್ವಾಮಿ ಎಂಬ ಕರ್ನಾಟಕ ಸಂಗೀತಗಾರರನ್ನು ಕರೆತಂದರು. ಅಯ್ಯಪ್ಪಸ್ವಾಮಿ ನಾಟಕ ಮಾಸ್ತರರೂ ಆಗಿದ್ದರು. “ಅದು ಸಂಗೀತ ನಾಟಕಗಳ ಯುಗ. ಕೂತರೆ ಹಾಡು, ನಿಂತರೆ ಹಾಡು, ಕೋಪ ಬಂದರೆ ಹಾಡು, ದುಃಖ ಉಕ್ಕಿದರೆ ಹಾಡು, ಹಾಡೇ ಹಾಡು. ಎಲ್ಲವೂ ಶಾಸ್ತ್ರೀಯ ಸಂಗೀತದ ಮಟ್ಟಗಳು. ಹಾಗಾಗಿ ಸಂಗೀತಗಾರರೇ ನಾಟಕ ಮಾಸ್ತರರಾಗುವ ಅನಿವಾರ್ಯತೆಯಿತ್ತು. ಅಯ್ಯಪ್ಪಸ್ವಾಮಿ ಮನಸೂರ ಗ್ರಾಮದ ಬಾಲಕರಿಂದ ‘ಸೈರಂಧ್ರಿ’ ನಾಟಕದ ತಾಲೀಮು ಆರಂಭಿಸಿದರು. ಮಲ್ಲಿಕಾರ್ಜುನ ಮನಸೂರರ ಅಣ್ಣ ಹನ್ನೆರಡು ವರ್ಷದ ಬಸವರಾಜರದು ಪ್ರಧಾನ ಪಾತ್ರ. ಅಯ್ಯಪ್ಪಸ್ವಾಮಿಯವರು ಸಂಜೆ ಬಸವರಾಜರಿಗೆ ರಂಗಗೀತೆಗಳನ್ನು ಕಲಿಸುತ್ತಿದ್ದಾಗ, ಅದನ್ನು ನೋಡಿ ಮನಸೂರರ ಕುತೂಹಲ ಹೆಚ್ಚಿತು. ಕೈಯಲ್ಲಿದ್ದ ಗೋಲಿ ಗುಂಡು, ಚಿಣಿಫಣಿ ಬಿಸಾಕಿ ದಿನಾಲೂ ಕುಳಿತು ಕೇಳುತ್ತಿದ್ದ. ಅಯ್ಯಪ್ಪಸ್ವಾಮಿ ಹಾಡುತ್ತಿದ್ದಾಗ ಮಲ್ಲಿಕಾರ್ಜುನನ ಕಣ್ಣೂ ತೇವಗೊಳ್ಳುತ್ತಿದ್ದವು”[೪೩]. ತನ್ನಿಂದ ತಾನೇ ಹೃದಯಾಂತರಾಳದಲ್ಲಿ ಸ್ವರಗಳು ಮಾರ್ದನಿಗೊಳ್ಳತೊಡಗಿದವು. ರಂಗದತ್ತ ಒಲವು ಸಂಗೀತದತ್ತ ಮೂಡಿದ್ದು ಹೀಗೆ ಮುಂದೆ ಕೆಲ ದಿನಗಳಲ್ಲಿ ಬಸವರಾಜರು ವಾಮನರಾವ ಮಾಸ್ತರರ ವಿಶ್ವಗುಣಾದರ್ಶ ನಾಟಕ ಕಂಪನಿ ಸೇರಿದರು. ಶಾಲೆಗೆ ಹೋಗುತ್ತಿದ್ದ ಮಲ್ಲಿಕಾರ್ಜುನನ ಮನಸ್ಸು ಶಾಲೆಯಲ್ಲಿ ಕೂತರೂ ಏಕಾಗ್ರತೆ ಇರದೆ ದೂರದಲ್ಲೆಲ್ಲೊ ಕೇಳಿ ಬರುವ ಕೋಗಿಲೆಯ ಧ್ವನಿಯನ್ನು ಆಲಿಸುತ್ತಿತ್ತು. ಅಣ್ಣನಂತೆ ತಾನೂ ನಟನಾಗಬೇಕೆಂಬ ಅದಮ್ಯ ಬಯಕೆಯು ವಾಮನರಾವಮಾಸ್ತರರ ಕಂಪನಿಗೆ ಬರುವಂತೆ ಮಾಡಿತು. ಎಷ್ಟು ಹೇಳಿದರೂ ಕೇಳದೇ ತನ್ನ ೯-೧೦ ನೇ ವಯಸ್ಸಿಗೆ ಮಾಸ್ತರರ ‘ವಿಶ್ವಗುಣಾದರ್ಶ ನಾಟಕ ಮಂಡಳಿ’ ಪ್ರವೇಶಿಸಿದರು. ಗಾಯಕ ನಟ ವಾಮನರಾಯರೇ ಇವರ ಪ್ರಾಥಮಿಕ ಸಂಗೀತ ಗುರುಗಳು.

ವಾಮನರಾಯರು ಶಿಸ್ತಿನ ಸಿಪಾಯಿ, "ವಿಶ್ವಗುಣಾದರ್ಶ ಕಂಪನಿ" ಹೆಸರಿಗೆ ತಕ್ಕಂತೆ ಆದರ್ಶ ಸಂಸ್ಥೆಯಾಗಿತ್ತು. ಹಾರ್ಮೋನಿಯಂ ಮಾಸ್ತರರಾದ, ಪಾಂಡೋಬಾ ಮತ್ತು ಕುಕನೂರ ಸಂಗನಬಸಪ್ಪವರುಗಳು ಮಲ್ಲಿಕಾರ್ಜುನನಿಗೆ ರಂಗಗೀತೆಗಳನ್ನು ಕಲಿಸುತ್ತಿದ್ದರು. ಮಲ್ಲಿಕಾರ್ಜುನ ಕಂಪನಿಯಲ್ಲಿ ಜೀವನಕ್ಕೆ ಅಮೂಲ್ಯವಾಗಿ ಬೇಕಾದ ಅನೇಕ ಪಾಠ, ಪ್ರವಚನ, ಸಂಗೀತ, ಅಭಿನಯ ಎಲ್ಲವನ್ನು ಅನಾಯಾಸವಾಗಿ ಕಲಿತುಕೊಂಡನು. ಪಾತ್ರಗಳಿಗೆ ಜೀವತುಂಬಿ, ಸುಮಧುರ ರಾಗ, ತಾಳದಿಂದ ರಸಿಕ ಹೃದಯಗಳನ್ನು ಗೆದ್ದ ಇವರ ಸುಶ್ರಾವ್ಯ ಹಾಡು ಜನರಿಗೆ ತುಂಬಾ ಹಿಡಿಸಿದ್ದವು. ಮಲ್ಲಿಕಾರ್ಜುನನಲ್ಲಿ ಸುಪ್ತವಾಗಿದ್ದ ಕಲಾವಂತಿಕೆ ಉದ್ದೀಪಿಸಿತು. ಅನೇಕ ಒಳ್ಳೆಯ ಅವಕಾಶಗಳನ್ನು ಸದುಪಯೋಗಪಡಿಸಿಕೊಂಡು ಎರಡೇ ವರ್ಷದಲ್ಲಿ ರಸಿಕ ಪ್ರೇಕ್ಷಕರ ಮನವನ್ನು ಗೆದ್ದುಕೊಂಡು ರಂಗಭೂಮಿಗೆ ಪರಿಚಿತನಾದನು.

'ಭಕ್ತಪ್ರಹ್ಲಾದ'ದ ಗೋಟ್ಯಾ, 'ಶ್ರೀಕೃಷ್ಣಲೀಲೆ'ಯ ವಿಜಯ ಈ ಹಾಸ್ಯ ಪಾತ್ರಗಳನ್ನು ಪರಿಣಾಮಕಾರಿಯಾಗಿ ಅಭಿನಯಿಸಿ ಜನರನ್ನು ನಗೆಗಡಲಲ್ಲಿ ತೇಲಿಸುತ್ತಿದ್ದರು. ಬೆಂಗಳೂರು ಕ್ಯಾಂಪ್ ಗುಬ್ಬಿ ಥಿಯೇಟರಿನಲ್ಲಿ ಇವರು ಗೋಟ್ಯಾ ಪಾತ್ರದಲ್ಲಿ ಪ್ರವೇಶಿಸಿದರೆ ಪ್ರೇಕ್ಷಕರಿಂದ ಚಪ್ಪಾಳೆಗಳ ಸುರಿಮಳೆಯಾಗುತ್ತಿತ್ತು. ಒಂದು ದಿನ ನಟಭಯಂಕರ ಗಂಗಾಧರರಾಯರು ಆನಂದಭರಿತರಾಗಿ ರಂಗಮಂಚಕ್ಕೆ ಬಂದು ಬಹುಮಾನ ನೀಡಿ ಬೆನ್ನು ಚಪ್ಪರಿಸಿದರು. 'ವೀರ ಅಭಿಮನ್ಯು'ವಿನಲ್ಲೂ ಅದ್ಭುತ ಅಭಿನಯದಿಂದ ಜನರ ಗಮನ ಸೆಳೆದರು. ಹಾಡುಗಾರಿಕೆಯ ಮೋಡಿ ಶ್ರೋತೃಗಳಿಗೆ ರಸದೌತಣ ನೀಡುತ್ತಿತ್ತು. ಭಕ್ತ ಪ್ರಹ್ಲಾದನಾಗಿ ಮಲ್ಲಿಕಾರ್ಜುನ, ಪ್ರೇಕ್ಷಕರಿಂದ ಮೆಚ್ಚುಗೆಯ ಸುರಿಮಳೆಯನ್ನೇ ಪಡೆಯುತ್ತಿದ್ದರು. 'ವೀರ ಅಭಿಮನ್ಯು' ನಾಟಕಕ್ಕೆ ಸಂಗೀತವನ್ನು ಇವರೇ ಸಂಯೋಜನೆ ಮಾಡಿದ್ದರು. ಶ್ರೀಕೃಷ್ಣನ ಪಾತ್ರದಲ್ಲಿ ವಾಮನರಾಯರು ಭೈರವಿಯಲ್ಲಿ ಹಾಡುತ್ತಿದ್ದ 'ಮಮ ಪಾಂಡವಪ್ರಿಯಾ', ಖಮಾಜ್ ರಾಗಗಲ್ಲಿ ಹಾಡುತ್ತಿದ್ದ, 'ಭಕ್ತ ಪರಿಪಾಲನಾ ಸತ್ಯ ಮಮಜೀವನಾ' ಹಾಡುಗಳು ಪ್ರೇಕ್ಷಕರಿಂದ ಮೇಲಿಂದಮೇಲೆ ಒನ್ಸಮೋರ್ ಪಡೆಯುತ್ತಿದ್ದವು. ಈ ನಾಟಕದ ಅದ್ಭುತ ಯಶಸ್ಸಿನ ಹಿಂದೆ ಮಲ್ಲಿಕಾರ್ಜುನ ಮನಸೂರರ ಸಾಧನೆಯೂ ಇತ್ತು. ತಾನೇ ಸಂಗೀತ ಸಂಯೋಜಿಸಿ ನಿರ್ದೇಶಿಸಿದ ಈ ನಾಟಕದಲ್ಲಿ ಮನಸೂರರು ಶಕುನಿ ಪಾತ್ರವನ್ನು ಮನೋಜ್ಞವಾಗಿ ಅಭಿನಯಿಸುತ್ತಿದ್ದರು. ಈ ಕುಟಿಲ ಪಾತ್ರವನ್ನು ತಮ್ಮ ವ್ಯಂಗ್ಯ ಅಭಿನಯದಿಂದ ಯಶಸ್ವಿಯಾಗಿ ನಿರ್ವಹಿಸುತ್ತಿದ್ದರು. ಹೀಗೆ ಕಂಠ ಮಾಧುರ್ಯ, ಆಭಿನಯ ಕೌಶಲ್ಯದಿಂದ ವಾಮನರಾಯರ ಅಚ್ಚುಮೆಚ್ಚಿನ ಶಿಷ್ಯರಾಗಿ ಮಲ್ಲಿಕಾರ್ಜುನ ಅವರ ಪ್ರೀತಿಗೆ ಪಾತ್ರರಾಗಿ ಮುಂದೆ ಸಂಗೀತ ಕ್ಷೇತ್ರದಲ್ಲಿ ಅದ್ಭುತ ಗಾಯಕರಾಗಿ ಬೆಳಗಿದರು.

## ೧೦) ಗುರುರಾವ ದೇಶಪಾಂಡೆ:

ಗ್ವಾಲಿಯರ ಘರಾಣೆಯ ದಿಗ್ಗಜರಲ್ಲೊಬ್ಬರಾದ ಪಂ. ಗುರುರಾವ ದೇಶಪಾಂಡೆಯವರು ೧೯೮೯ ರಲ್ಲಿ ಧಾರವಾಡದಲ್ಲಿ ಜನಿಸಿದರು. ಸುಸಂಸ್ಕೃತ ದೇಶಪಾಂಡೆ ಮನೆತನದ ನಾರಾಯಣರಿಗೆ ಮೂರು ಜನ ಗಂಡು ಮಕ್ಕಳು. ಎರಡನೆಯ ಮಗನೆ ಗುರುರಾಯ ಹಿರಿಯ ಮಗ ಪದವೀಧರನಾಗಿ ಶಿಕ್ಷಕನಾಗಿದ್ದ. ಗುರುರಾಯರು ಹೆಚ್ಚಿನ ವಿದ್ಯಾಭ್ಯಾಸ ಕಲಿತು ವಕೀಲನಾಗಬೇಕೆಂಬುದು ತಂದೆ ನಾರಾಯಣರ ಇಚ್ಛೆಯಾಗಿತ್ತು. ಹುಟ್ಟಿನೊಂದಿಗೆ ಮಧುರಕಂಠ ಪಡೆದುಕೊಂಡು ಬಂದಿದ್ದ ಗುರುರಾಯರ ಒಲವು ಸಂಗೀತದತ್ತ ಹರಿಯುತ್ತಿತ್ತು. ನಾರಾಯಣರಾಯರು ಸಹ ಸಂಗೀತದ ಅಭಿಮಾನಿಗಳಾಗಿದ್ದರು. ಸ್ವತಃ ಕರ್ನಾಟಕೀ ಸಂಗೀತ ಬಲ್ಲವರಾಗಿದ್ದರು. ಶಾಲಾದಿನಗಳಲ್ಲಿಯೇ ಸಂಗೀತದ ಬಗ್ಗೆ ವಿಶೇಷ ಆಸಕ್ತಿ ತಳೆದ ಗುರುರಾಯರು ಕಾಲೇಜು ಕಟ್ಟೆ ಹತ್ತುವುದರೊಳಗಾಗಿ ಸಂಪೂರ್ಣ ಸಂಗೀತದತ್ತ ತಮ್ಮ ಮನಸ್ಸನ್ನು ಹರಿಸಿದ್ದರು. ತಮ್ಮ ಮನೆಯ ಸಮೀಪವಿದ್ದ ಪಿತ್ರೆ ವಕೀಲರ ಬಳಿ ತಂದೆಗೆ ತಿಳಿಯದಂತೆಯೇ ಸಂಗೀತಾಭ್ಯಾಸಕ್ಕೆ ತೊಡಗಿದ್ದರು. ಮಗನ ಸಂಗೀತಾಸಕ್ತಿಯನ್ನು ಗಮನಿಸಿದ ನಾರಾಯಣರಾಯರು ಮಗನ ಸಂಗೀತ ಯಾತ್ರೆಗೆ ಸಕಲ ಏರ್ಪಾಡು ಮಾಡಿಕೊಟ್ಟರು. ಆರಂಭದಲ್ಲಿ ಪಿತ್ರೆ ವಕೀಲರಲ್ಲಿ ಹಾಗೂ ದತ್ತೋಪಂತ ಜೋಶಿಯವರಲ್ಲಿ ಹಾಗೂ ರಾಮಕೃಷ್ಣಬುವಾ ವಝೆಯವರ ಶಿಷ್ಯರಾಗಿ ಸಂಗೀತಾಭ್ಯಾಸ ಮಾಡಿದರು.

ವಝೆಬುವಾ ಬೆಳಗಾವಿಯಲ್ಲಿ ನೆಲೆಸಿದರ ಪರಿಣಾಮವಾಗಿ ಅವರ ಬಳಿ ಇದ್ದು ಕಲಿತು, ಗುರುರಾಯ ಸಂಗೀತ ಸಾಧನೆ ಮಾಡಿ ಹೆಸರು ಪಡೆದುಕೊಂಡನು. ೧೯೩೦ರ ಹೊತ್ತಿಗೆ ಕರ್ನಾಟಕದಲ್ಲಿ ಗ್ವಾಲಿಯರ ಘರಾಣೆಯ ಸಂಗೀತದ ಪ್ರಸಿದ್ಧ ಗಾಯಕರೆಂಬ ಖ್ಯಾತಿ ಹೊಂದಿದರು. ವಿವಾಹ ಬಂಧನದಲ್ಲಿ ಸಿಲುಕಿದ ಮೇಲೆ ಗುರುರಾಯರು ಜೀವನೋಪಾಯಕ್ಕಾಗಿ ರಂಗಭೂಮಿಯನ್ನವಲಂಭಿಸಬೇಕಾಯಿತು. ಆಗಿನ ಕಾಲದ ನಾಟಕ ಕಂಪನಿಗಳು ಒಂದರ್ಥದಲ್ಲಿ ಹಿಂದೂಸ್ತಾನಿ ಸಂಗೀತದ ವೇದಿಕೆಯಾಗಿದ್ದವು. ಹೆಸರಾಂತ ಸಂಗೀತಕಾರರು ನಾಟಕ ಕಂಪನಿಗಳಲ್ಲಿ ನಟರಾಗಿ, ಗಾಯಕರಾಗಿ, ಸಂಗೀತ ನಿರ್ದೇಶಕರಾಗಿ ಕೆಲಸ ಮಾಡುತ್ತಿದ್ದರು. ಆರಂಭದಲ್ಲಿ ವಾಮನರಾಯರ ನಾಟಕ ಕಂಪನಿ ಸೇರಿದ ಗುರುರಾಯರು ನಟನೆ ಹಾಗೂ ಗಾಯನದಲ್ಲಿ 'ರಂಗಭೂಮಿಯ' ಆಕರ್ಷಣೆಯಾಗಿದ್ದರು. ವಾಮನರಾಯರ ಕಂಪನಿಯ 'ಕೃಷ್ಣಾರ್ಜುನ ಕಾಳಗ' ನಾಟಕದಲ್ಲಿ ಅರ್ಜುನನ ಪಾತ್ರದಲ್ಲಿ ಗುರುರಾಯರು, ಕೃಷ್ಣನ ಪಾತ್ರದಲ್ಲಿ ವಾಮನರಾಯರು ನೀಡಿದ ಅಭಿನಯ ಆ ದಿನಗಳಲ್ಲಿ ಒಂದು ಅವಿಸ್ಮರಣೀಯ ಸನ್ನಿವೇಶಗಳಾಗಿದ್ದವು. "ಸುಖದಾ ರಮಣೀಯವಾದ ಗಂಗಾತಟಜಲ ನಿವಾಸ ಸಂತೋಷ ವಸಂತ ಮಾಸ" – – – (ಯಮನ್ ರಾಗ) ಈ ಗೀತೆಯನ್ನು ಹಾಡುತ್ತಾ ನಿಂತರೆ ವಾಮನರಾಯರು ಈ ಹಾಡಿನ ಗುಂಗಿಗೆ, ಗುರುರಾಯರ

ಕಂಠಕ್ಕೆ ಬೆರಗಾಗಿ ಮಾರು ಹೋಗಿ ತಲೆದೂಗುತ್ತಾ ನಿಂತು ಬಿಡುತ್ತಿದ್ದರಂತೆ. ಇನ್ನು ಪ್ರೇಕ್ಷಕರಂತೂ 'ಒನ್ಸ್‌ಮೋರ'ನ ಸುರಿಮಳೆಯನ್ನೇ ಅರ್ಪಿಸುತ್ತಿದ್ದರಂತೆ[೪೪].

ನೋಡಲು ಅಷ್ಟೇನೂ ಆಕರ್ಷಕರಲ್ಲದ ಗುರುರಾಯರು ಅಭಿನಯಕ್ಕಿಂತ ಹಾಡುಗಾರಿಕೆಯಲ್ಲೇ ಜನಮನ್ನಣೆ ಗಳಿಸುತ್ತಿದ್ದರು. ರಾಮಾಯಣದಲ್ಲಿ ರಾಮ, ಸಂದೇಹ ಸಾಮ್ರಾಜ್ಯದಲ್ಲಿ ಆನಂದಶೇಠ, ಮಹಾಭಾರತದ ನಾಟಕಗಳಲ್ಲಿ ಶ್ರೀಕೃಷ್ಣ ಅರ್ಜುನ ಮುಂತಾದ ಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಕನ್ನಡ ರಂಗ ಸಂಗೀತಕ್ಕೆ ಶಾಸ್ತ್ರೀಯ ಸೊಬಗನ್ನು ನೀಡುತ್ತಿದ್ದರು.

ಗುರುರಾಯರು ಉಚ್ಚ ಕಾಲೇಜು ಶಿಕ್ಷಣ ಪಡೆದವರು. ರಂಗಭೂಮಿಯ ಮೇಲೆ ಅವರ ಹಾಗೆ ಶುದ್ಧಶಾಸ್ತ್ರೀಯ ಹಾಡುಗಾರಿಕೆಯಲ್ಲಿ ಹೆಸರು ಮಾಡಿದವರು ಅಂದಿನ ಕನ್ನಡ ನಾಟಕ ರಂಗದಲ್ಲಿ ಇನ್ನೊಬ್ಬರಿದ್ದಿಲ್ಲ. ಇದರಿಂದಾಗಿ ಗುರುರಾಯರೆಂದರೆ ವಾಮನರಾಯರಿಗೆ ವಿಶೇಷ ಅಭಿಮಾನ ಗುರುರಾಯರ ಸಂಬಂಧದಿಂದ ಕಂಪನಿಯು ಬಾಗಲಕೋಟೆ, ಧಾರವಾಡ, ಹುಬ್ಬಳ್ಳಿಗಳಲ್ಲಿ ಇಪ್ಪತ್ತರ ದಶಕದಲ್ಲಿ ವಿಶೇಷ ಲೋಕಪ್ರಿಯತೆಯನ್ನು ಗಳಿಸಿತು. ಗುರುರಾಯರು ಅನೇಕ ಸಲ ವಾಮನರಾಯರು ನಿರ್ವಹಿಸುತ್ತಿದ್ದ ಮುಖ್ಯ ಪಾತ್ರಗಳನ್ನು ಮಾಡಿದ್ದುಂಟು. ಆದವಾನಿ, ದಾವಣಗೆರೆಗಳಲ್ಲಿ 'ಕಾಳಿದಾಸ' ನಾಟಕದಲ್ಲಿ ಭೋಜ, 'ಮಹಾನಂದ'ದಲ್ಲಿ ದೇವೇಂದ್ರ, 'ಸಂದೇಹ ಸಾಮ್ರಾಜ್ಯ'ದಲ್ಲಿಯ ಆನಂದಶೇಠ ಪಾತ್ರಗಳನ್ನು ಯಶಸ್ವಿಯಾಗಿ ನಿರ್ವಹಿಸಿದರು.

'ಗುರುರಾಯರು ಮಾಸ್ತರರ ಕಂಪನಿಯಲ್ಲಿ ಖಾಯಂ ಆಗಿ ನಿಲ್ಲಲಿಲ್ಲ ಅವರಿಗೆ ತಮ್ಮ ಶಾಸ್ತ್ರೀಯ ಸಂಗೀತವನ್ನು ಮುಂದುವರೆಸಬೇಕಿತ್ತು ತಮ್ಮ ಗುರಿ ಸಾಧನೆಗಾಗಿ ಅವರ ಮಾರ್ಗವು ಸುಗಮವಾಗಲಿ ಎಂದು ಬಗೆದು ವಾಮನರಾಯರು ಅವರಿಗೆ ಸಲ್ಲಬೇಕಾದ ಪೂರ್ತಿ ಹಣವನ್ನು ಸಂದಾಯ ಮಾಡಿ ಅನುಕೂಲ ಮಾಡಿಕೊಟ್ಟರು. ಗುರುರಾಯರು ಕಂಪನಿ ಬಿಟ್ಟರೂ ಮಾಸ್ತರರೊಂದಿಗೆ ಮಧುರ ಸಂಬಂಧ ಬೆಳಿಸಿಕೊಂಡಿದ್ದರು ಅವರಿಬ್ಬರದು ಸಾಂಸ್ಕೃತಿಕ ಸ್ನೇಹವಾಗಿತ್ತು. ಗುರುರಾಯರ 'ಭಾರತ ವಾಚನ'ವನ್ನು ವಾಮನರಾಯರು ಮರೆಯುವಂತಿರಲಿಲ್ಲ ಕುಮಾರವ್ಯಾಸನನ್ನು ಮೈಗೂಡಿಸಿಕೊಂಡ ಗುರುರಾಯರು ಮಾಸ್ತರರಿಗೆ ಅದರ ಸವಿಯುಣಿಸಿದ್ದರು.

ಗುರುರಾಯರ ಸಂಬಂಧದಿಂದ ಕಂಪನಿಯು ಬಾಗಲಕೋಟೆ, ಧಾರವಾಡ, ಹುಬ್ಬಳ್ಳಿಗಳಲ್ಲಿ ಇಪ್ಪತ್ತರ ದಶಕದಲ್ಲಿ ವಿಶೇಷ ಲೋಕಪ್ರಿಯತೆಯನ್ನು ಗಳಿಸಿತು. ಗುರುರಾಯರು ಅನೇಕ ಸಲ ವಾಮನರಾಯರು ನಿರ್ವಹಿಸುತ್ತಿದ್ದ ಮುಖ್ಯಪಾತ್ರಗಳನ್ನು ಮಾಡಿದ್ದುಂಟು. ಸುಧಾರಿಸಿದ ಊರುಗಳಲ್ಲಿ ಗುರುರಾಯರ ಹೆಸರಿಗೆ ಮಾನ ಮೌಲ್ಯಗಳು ಹೆಚ್ಚುತ್ತಿದ್ದವು. ಗುರುರಾಯರು ತಮ್ಮ ರಂಗ ಪ್ರವೇಶಗಳನ್ನು ಗಂಗೂಬಾಯಿ ಕಂಪನಿಯಲ್ಲಿ ಮಾಡಿದರು. ಅಭಿನಯದ ಬೆಳವಣಿಗೆ ಪಡೆದುದು ವಿಶ್ವಗುಣಾದರ್ಶದ

ರಂಗದ ಮೇಲೆಯೇ ಭೋಜರಾಜನ ಪಾತ್ರ, ಅರ್ಜುನನ ಪಾತ್ರಗಳು ಗಟ್ಟಿಯಾಗುವಂತೆ ವಾಮನರಾಯರ ನಿರ್ದೇಶನ ಒಂದು ರೂಪವನ್ನೂ, ಸಂಸ್ಕಾರವನ್ನೂ ನೀಡಿತ್ತು'.

ಕೆಲ ವರ್ಷಗಳ ನಂತರ ಕಂಪನಿ ಬಿಟ್ಟು ಸಂಗೀತದಲ್ಲಿ ಇನ್ನಷ್ಟು ಸಾಧನೆ ಮಾಡಬೇಕೆಂದು ಪ್ರಯಾಣ ಬೆಳೆಸಿದರು. ಮುಂಬೈ ಆಕಾಶವಾಣಿಯಲ್ಲಿ ಎನ್ಕೆಯವರೊಡಗೂಡಿ ಕನ್ನಡ ಚಟುವಟಿಕೆ ಹಮ್ಮಿಕೊಳ್ಳಲು ಶ್ರಮಿಸಿದರು. ೧೯೫೦ ರಲ್ಲಿ ಧಾರವಾಡ ಆಕಾಶವಾಣಿ ಕೇಂದ್ರ ಪ್ರಾರಂಭಗೊಂಡಾಗ ಇವರೇ ಸಂಗೀತ ನಿರ್ದೇಶಕರಾಗಿ ಸೇವೆಗೆ ನಿಂತರು. ಎನ್ಕೆಯವರು ಮುಂಬೈನಿಂದ ಧಾರವಾಡಕ್ಕೆ ವರ್ಗವಾಗಿ ಬಂದರು. ಈ ಉಭಯರ ಸಮ್ಮಿಲನ ಆಕಾಶವಾಣಿಗೆ ಹೊಸ ಆಯಾಮ ಕಲ್ಪಿಸಿಕೊಟ್ಟಿತು. ೧೯೬೬ ರಲ್ಲಿ ಆಕಾಶವಾಣಿ ಕೆಲಸದಿಂದ ನಿವೃತ್ತಿಯಾದ ಮೇಲೆ ಗುರುರಾಯರು, ಮಗನ ಹತ್ತಿರ ಜೀವನದ ಕೊನೆಯ ದಿನಗಳನ್ನು ಕಳೆದರು. ಆಗಾಗ ಧಾರವಾಡಕ್ಕೆ ಬರುತ್ತಿದ್ದರೆಂದೂ, ಕೊನೆಯಲ್ಲಿ ಅವರು ಗುರುದೇವ ರಾನಡೆಯವರ ಪರಮಭಕ್ತರಾಗಿದ್ದರೆಂದು ತಿಳಿದುಬರುತ್ತದೆ.

ಹುಬ್ಬಳ್ಳಿಯಲ್ಲಿ ಗಮಕ ಸಂಗೀತದ ಸಮ್ಮೇಳನದಲ್ಲಿ "ಗಮಕ ಗೌರಿಶಂಕರ" ಬಿರುದು ನೀಡಿ ಇವರನ್ನು ಗೌರವಿಸಲಾಯಿತು. ಪುಣೆಯಲ್ಲಿ ಪಂಡಿತ ಭೀಮಸೇನ ಜೋಶಿಯವರು, ದೇಶಪಾಂಡೆ ಅವರ ೬೦ನೇ ಹುಟ್ಟು ಹಬ್ಬದ ಷಷ್ಠಿಪೂರ್ತಿ ಸಮಾರಂಭ ಏರ್ಪಡಿಸಿ ಸನ್ಮಾನಿಸಿದರು. ಗಂಗೂಬಾಯಿ ಹಾನಗಲ್ಲರು ಕುಂದಗೋಳದಲ್ಲಿ ಸವಾಯಿ ಗಂಧರ್ವರ ಪುಣ್ಯಸ್ಮರಣೆ ಸಂಗೀತೋತ್ಸವದಲ್ಲಿ "ಗಾಯನಾಚಾರ್ಯ" ಎಂಬ ಬಿರುದು ನೀಡಿ ಸನ್ಮಾನಿಸಿದರು. ೧೯೭೧ ರಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಸನ್ಮಾನಿಸಿ ಪ್ರಶಸ್ತಿ ನೀಡಿ ಗೌರವಿಸಿತು.

ವಾಮನರಾವ ಮಾಸ್ತರ ಶ್ರೀ ವಿಶ್ವಗುಣಾದರ್ಶ, ಗಂಗೂಬಾಯಿ ಅವರ ಶ್ರೀ ಕೃಷ್ಣ ನಾಟಕ ಮಂಡಳಿ, ಅಬ್ಬಿಗೇರಿ ಬಸನಗೌಡರ, ಕನ್ನಡ ಸಾಹಿತ್ಯ ಸೇವಾ, ವೇಣಿಧಾಳ ಸ್ವಾಮಿಯವರ ಶ್ರೀ ವಿದ್ಯಾರಣ್ಯ ಮತ್ತು ಕೊಪ್ಪಳ ಕಂಪನಿಗಳಲ್ಲಿ ತಮ್ಮ ಕಲಾಸೇವೆ ಸಲ್ಲಿಸಿದ ಗುರುರಾಯರು ತಮ್ಮ ಕೊನೆಯ ದಿನಗಳನ್ನು ಬೆಂಗಳೂರಿನ ತಮ್ಮ ಮಗನ ಬಳಿಯೇ ಕಳೆದರು. ೧೯೮೨ ಡಿಶೆಂಬರ ೨ ರಂದು ನಮ್ಮನ್ನಗಲಿದ ಗುರುರಾಯರು ೮೨ ವರ್ಷಗಳ ಕಾಲ ಜೀವಿಸಿದ್ದರು. ರಂಗ ಸಂಗೀತವನ್ನು ಜೀವಂತವಾಗಿರಿಸಿ, ಶಾಸ್ತ್ರೀಯ ರಂಗಸಂಗೀತ ಪರಂಪರೆಯಲ್ಲಿ ಹೆಸರಾಗಿ ಗುರುರಾಯರು ಇತಿಹಾಸದ ಪುಟಗಳಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ.

೧೧) ಡಿ. ದುರ್ಗಾದಾಸ:

ಬಳ್ಳಾರಿ ಜಿಲ್ಲೆ, ನಾರಾಯಣ ದೇವರ ಕೆರೆಯ ಮೂಡಲಪಾಯ ಬಯಲಾಟದ ಕುಟುಂಬದಲ್ಲಿ ೧೯೨೧ ರಲ್ಲಿ ದುರ್ಗಾದಾಸ ಜನಿಸಿದರು. ಮೂರನೆಯ ತರಗತಿಯವರೆಗೆ ಶಿಕ್ಷಣ, ಸಂಜೀವಮ್ಮ, ಅಣ್ಣ ಹನುಮಂತಪ್ಪರೊಂದಿಗೆ ರಂಗಕಲಾ ಸೇವೆ ಆರಂಭಿಸಿದರು. ಗರುಡ ಸದಾಶಿವರಾಯರೇ ಇವರ ಅಭಿನಯ ಗುರುಗಳು. ಮೂರು ವರುಷ ಅವರ ಕಂಪನಿಯಲ್ಲಿದ್ದು, ಅಲ್ಲಿಂದ ವಾಮನರಾಯರ ಕಂಪನಿ ಪ್ರವೇಶಿಸಿದರು. ಗರುಡರ ಕಂಪನಿಯಲ್ಲಿದ್ದಾಗ ಅಭಿನಯ ಕಲೆಯಲ್ಲಿ ಒಳ್ಳೆಯ ತರಬೇತಿ ಸಿಕ್ಕಿತು. ಇದರಿಂದ ವಾಮನರಾಯರ ಕಂಪನಿಯಲ್ಲಿ ಪೋಷಕ ಪಾತ್ರಗಳನ್ನು ಚೆನ್ನಾಗಿ ನಿರ್ವಹಿಸುವಂತಾಯಿತು. ದೈಹಿಕ ನಿಲುವು, ಅಭಿನಯ ಚಾತುರ್ಯದಿಂದ ಇವರ ಪಾತ್ರಗಳು ಸೊಗಸಾಗಿ ಕಾಣುತ್ತಿದ್ದವು. ವಾಮನರಾವ ಮಾಸ್ತರರು ಹುಬ್ಬಳ್ಳಿಯಲ್ಲಿ 'ವೀರ ಅಭಿಮನ್ಯು' ನಾಟಕ ಪ್ರಯೋಗಿಸಿದರು. ಆಧುನಿಕ ತಂತ್ರಗಳಿಂದ ಟ್ರಾನ್ಸಫರ್ ಸೀನಿನಲ್ಲಿ ಅಳವಡಿಸಿ ನಾಟಕವನ್ನು ವಿಜೃಂಭಿಸುವಂತೆ ಮಾಡಿದ್ದರು. ಇದರಲ್ಲಿ ಡಿ. ದುರ್ಗಾದಾಸ ಜಯದ್ರಥನ ಪಾತ್ರದಲ್ಲಿ ಅಭಿನಯಿಸಿದ್ದರು. ೧೯೪೦ ರಲ್ಲಿ ಕಂದಗಲ್ಲರ 'ಬಡತನದ ಭೂತ' ನಾಟಕದಲ್ಲಿ ಇಂದಿರಾಚರಣನ ಪಾತ್ರವಹಿಸಿ ಅಪಾರ ಮೆಚ್ಚುಗೆ ಪಡೆದರು. ಅನಂತರ 'ಚಿತ್ರಾಂಗದಾ'ದ ಅರ್ಜುನನ ಪಾತ್ರವು, ಅಜಾನುಬಾಹು ಶರೀರದ ಡಿ. ದುರ್ಗಾದಾಸರಿಗೆ ಹೇಳಿಮಾಡಿಸಿದಂತಿತ್ತು. ಈ ಪಾತ್ರದ ಅಭಿನಯ ಕೌಶಲ್ಯಯ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರವಾಯಿತು. ಈ ಪಾತ್ರವು ತೋರುತ್ತಿದ್ದ ವೀರ ಅಭಿನಯ ನೋಡಿ ಕಂದಗಲ್ಲ ಹನಮಂತರಾಯರು ಖುಷಿ ಪಟ್ಟರು. ಇದರಿಂದ ದುರ್ಗಾದಾಸರ ಬೇಡಿಕೆ ಹೆಚ್ಚಾಯಿತು. ಏಣಗಿ ಕಂಪನಿ, ಶ್ರೀರಂಜನಿ, ಗೋಕಾಕ ಕಂಪನಿಗಳಲ್ಲಿ ಕೆಲಕಾಲ ಸೇವೆ ಸಲ್ಲಿಸಿದರು. ಹೇಮರಡ್ಡಿ ಮಲ್ಲಮ್ಮ ನಾಟಕದಲ್ಲಿ–ವೇಮಣ್ಣನ ಪಾತ್ರ ರಾಜಾಹರಿಶ್ಚಂದ್ರದಲ್ಲಿ–ಹರಿಶ್ಚಂದ್ರ ಪಾತ್ರವನ್ನು ಮನೋಜ್ಞವಾಗಿ ಅಭಿನಯಿಸುತ್ತಿದ್ದರು. ಇಂಥದೇ ಪಾತ್ರವೆಂದು ಹೇಳವಂತಿಲ್ಲ. ಯಾವುದೇ ಪಾತ್ರವಿರಲಿ ಅದನ್ನು ಅರ್ಥೈಸಿ. ಅದರ ಒಳಹೊಕ್ಕು, ಆ ಪಾತ್ರಕ್ಕೆ ಜೀವತುಂಬಿ ಅಭಿನಯಿಸುವ ಪ್ರತಿಭೆ ದುರ್ಗಾದಾಸರಲ್ಲಿತ್ತು. ಇವರು 'ದ್ರುಪದ ಕನ್ಯಾ' ಎನ್ನುವ ನಾಟಕವನ್ನು ಬರೆದಿದ್ದಾರೆ.

ಇವರ ರಂಗಸೇವೆ ಮೆಚ್ಚಿ 'ಗದಗ ಸರಸ್ವತಿ ಥೇಟರ್'ದಲ್ಲಿ ಸನ್ಮಾನಿಸಲಾಯಿತು. ಹುಯಿಲಗೋಳ ನಾರಾಯಣರಾವ್, ಶ್ರೀಕಂಠಶಾಸ್ತ್ರಿಗಳು, ಕಂದಗಲ್ ಹನುಮಂತರಾಯರು ಮತ್ತು ಮಹಾಂತೇಶ ಶಾಸ್ತ್ರಿ ಈ ಮಹಾನ್ ನಾಟಕಕಾರರೆಲ್ಲ ಕೂಡಿ ಇವರ ರಂಗಸೇವೆ, ಅಭಿನಯವನ್ನು ಮೆಚ್ಚಿಕೊಂಡು 'ಕಲಾಕಿನ್ನರ' ಎಂಬ ಬಿರುದು ನೀಡಿ ಹಾರೈಸಿದರು. ವಾಮನರಾಯರ ಕಂಪನಿ ನಿಲ್ಲುವವರೆಗೆ ಅನೇಕ ಪೋಷಕ ಪಾತ್ರಗಳನ್ನು ಚೆನ್ನಾಗಿ ನಿರ್ವಹಿಸುತ್ತಿದ್ದರು. ೧೯೮೦ ರಲ್ಲಿ ಕರ್ನಾಟಕ ನಾಟಕ ಅಕಾಡೆಮಿಯಿಂದ ಗೌರವ ಪ್ರಶಸ್ತಿಯೂ ಲಭಿಸಿದೆ. ಇವರ ರಂಗಭೂಮಿಯ ಸೇವೆ ಅನೇಕ ಕಂಪನಿಗಳಿಗೆ ಸಂದಿದೆ ಎಂದು ಹೇಳಬಹುದು.

**ಆ: ಪ್ರಮುಖ ಕಲಾವಿದೆಯರು:**

ಕೊಣ್ಣೂರು ಕಂಪನಿ ನಂತರ ಮಹಿಳೆಯರಿಗೆ ಪ್ರವೇಶ ನೀಡಿದ ಎರಡನೆ ಕಂಪನಿಯೆಂದರೆ 'ವಿಶ್ವಗುಣಾದರ್ಶ ನಾಟಕ ಮಂಡಳಿ' ಆಗಿನ್ನೂ ಮಹಿಳೆ ಪಾತ್ರ ಮಾಡಬೇಕೇ? ಬೇಡವೇ? ಎಂಬ ಚರ್ಚೆ ಜೋರಾಗಿತ್ತು. ಮಹಾರಾಷ್ಟ್ರದಲ್ಲಿ ಪ್ರತಿ ವರುಷ ಜರುಗುತ್ತಿದ್ದ ನಾಟಕ ಸಮ್ಮೇಳನದಲ್ಲಿ ಈ ವಿಷಯವೇ ಚರ್ಚೆಯ ಮುಖ್ಯ ಭಾಗವಾಗಿತ್ತು. ನಾಟಕದಲ್ಲಿ ಮಹಿಳೆ ಪಾತ್ರ ಮಾಡುವುದರಿಂದ ಆಗುವ ಅನುಕೂಲಗಳೇನು? ಅನಾನುಕೂಲಗಳೇನು? ಎಂದು ಅಲ್ಲಿನ ವಿಚಾರ ಸಂಕೀರಣಗಳಲ್ಲಿ ಪ್ರಬಂಧಗಳು ಮಂಡನೆಯಾಗುತ್ತಿದ್ದವು. ಈ ಚರ್ಚೆ ೧೯೩೦ ರ ವರೆಗೆ ಇತ್ತು. ಬಾಲ ಗಂಗಾಧರ ತಿಲಕರ ಸ್ವರಾಜ್ಯ ಚಳವಳಿಯ ಕಂಕಣವನ್ನು ಅಲ್ಲಿಯ ಕಂಪನಿಗಳು ಕಟ್ಟಿಕೊಂಡಿದ್ದವು. ಮಹಿಳೆ ಕಂಪನಿಯಲ್ಲಿದ್ದರೆ ಕಂಪನಿಯ ಸಂಘಟನೆ ಮೂರು ದಿನದಲ್ಲಿ ಮೂರಾಬಟ್ಟೆ ಆಗುವುದೆಂಬ ನಂಬಿಕೆ ಬಲವಾಗಿತ್ತು. ಹೀಗಾಗಿ ಸಾಂಗಲಿಕರ ನಾಟಕ ಮಂಡಳಿ, ಕಿರ್ಲೋಸ್ಕರ ನಾಟಕ ಮಂಡಳಿಗಳಲ್ಲಿ ಸ್ತ್ರೀಪಾತ್ರಗಳನ್ನು ಮಾಡುವುದಕ್ಕಾಗಿ ನಟವರ್ಗವಿತ್ತು. ಆ ಕಾಲದ ಅಲ್ಲಿಯ ರಂಗಭೂಮಿಗೆ ರಾಷ್ಟ್ರಕಟ್ಟುವ ಹೊಣೆ ಇತ್ತು. ಅದಕ್ಕಾಗಿ ಕಂಪನಿಯನ್ನು ಒಗ್ಗಟ್ಟಿನಿಂದ ಕಟ್ಟಿ, ನೈತಿಕವಾಗಿ ಬಲಗೊಳಿಸುವುದು ರಂಗಕರ್ಮಿಗಳ ಮುಖ್ಯ ಗುರಿಯಾಗಿತ್ತು.

ಉತ್ತರ ಕರ್ನಾಟಕದ ರಂಗಭೂಮಿ ಕೂಡ ಇಂಥದೇ ಆದರ್ಶ ಮುಂದಿಟ್ಟುಕೊಂಡು ಕಂಪನಿಗಳನ್ನು ಸಂಘಟಿಸುವ ಪ್ರಯತ್ನದಲ್ಲಿತ್ತು ಹಲಸಿ ಕಂಪನಿ, ಶಾಂತ ಕವಿಗಳ ಕಂಪನಿಗಳಲ್ಲಿ ಸ್ತ್ರೀಪಾತ್ರಗಳನ್ನು ಪುರುಷರೇ ನಿರ್ವಹಿಸುತ್ತಿದ್ದರು. ಶಿರಹಟ್ಟಿ ಕಂಪನಿ, ಹಲಗೇರಿ ಕಂಪನಿಗಳು ಕೂಡಾ ೧೯೨೦ ರ ವರೆಗೂ ಮಹಿಳೆಯರನ್ನು ಕಂಪನಿಗೆ ಸೇರಿಸಿಕೊಳ್ಳಲಿಲ್ಲ. ಗರುಡ ಸದಾಶಿವರಾಯರು ಸಹ ೧೯೩೨ ರವರೆಗೆ ಸ್ತ್ರೀಯರನ್ನು ಕಂಪನಿಗೆ ಸೇರಿಸಿಕೊಂಡಿರಲಿಲ್ಲ. ಇದಕ್ಕೆಲ್ಲ ರಂಗಭೂಮಿಯನ್ನು ನೈತಿಕವಾಗಿ ಕಟ್ಟುವ, ರಾಷ್ಟ್ರೀಯ ಸಂಕಲ್ಪ ಈಡೇರಿಸುವ ಹಂಬಲವೇ ಕಾರಣವಾಗಿತ್ತು. ಇಂಥ ಪರಿಸ್ಥಿತಿಯಲ್ಲಿ ಕೊಣ್ಣೂರು ಕಂಪನಿಯ ಒಡೆಯ ಶಿವಮೂರ್ತಿಸ್ವಾಮಿ ಕಣಬರಗಿಮಠರು ೧೯೦೨ ರ ಸುಮಾರು ಮಹಿಳೆಯರಿಗೆ ಪ್ರವೇಶ ನೀಡಿದರು. ರಂಗಭೂಮಿಯನ್ನು ಸರ್ವಾಂಗ ಸುಂದರವಾಗಿ ಕಟ್ಟುವುದು ಅವರ ಹೆಬ್ಬಯಕೆ ಆಗಿತ್ತು. ಅಲ್ಲದೆ ಸ್ತ್ರೀಪಾತ್ರವನ್ನು ಸ್ತ್ರೀಯರು ಮಾಡಿದರೇ ಚೆಂದ ಎಂಬ ನಿಲುವು ಅವರದಾಗಿತ್ತು. ಅದಕ್ಕೆ ಮುಖ್ಯ ಪ್ರೇರಣೆ ಒದಗಿದ್ದು ಗೋಕಾವಿ ನಾಡಿನ 'ಶ್ರೀ ಕೃಷ್ಣ ಪಾರಿಜಾತ' ಬಯಲಾಟದಿಂದ. ಶಿವಮೂರ್ತಿಸ್ವಾಮಿಗಳು ನಾಟಕ ಕಂಪನಿ ಕಟ್ಟುವುದಕ್ಕಿಂತ ಮೊದಲು ಬಯಲಾಟಗಳ ಪ್ರಿಯರಾಗಿದ್ದರು. ಅವರು ದೊಡ್ಡಾಟಗಳಲ್ಲಿ ಪಾತ್ರ ಮಾಡುತ್ತಿದ್ದುದರ ಬಗ್ಗೆ ದಾಖಲೆಗಳಿವೆ. ಶ್ರೀಕೃಷ್ಣ ಪಾರಿಜಾತದ ಸಂಗೀತ ಮತ್ತು ಕೌಜಲಗಿ ನಿಂಗವ್ವನ ಸತ್ಯಭಾಮೆಯ ಪಾತ್ರ ಇವೆರಡೂ ಇವರ ಮೇಲೆ ಅಗಾಧ ಪರಿಣಾಮ ಬೀರಿದ್ದವು. ಅದಕ್ಕಾಗಿಯೇ ತಮ್ಮ ಕಂಪನಿಯಲ್ಲಿ ಮಹಿಳೆಯರಿಗೆ ಪ್ರವೇಶ ನೀಡಲು

ಮುಂದಾದರು. ಇವರ ಕಂಪನಿ ಪ್ರವೇಶಿಸಿದ ಎಲ್ಲವ್ವ ಗುಳ್ಳೇದಗುಡ್ಡ ವೃತ್ತಿರಂಗಭೂಮಿಯ ಮೊದಲ ನಟಿ ಎಂಬ ಖ್ಯಾತಿ ಪಡೆದಳು. ಎಲ್ಲವ್ವ ಸ್ತ್ರೀ ಮತ್ತು ಪುರುಷ ಪಾತ್ರಗಳೆರಡನ್ನೂ ಚೆನ್ನಾಗಿ ಅಭಿನಯಿಸುತ್ತಿದ್ದಳು. ೧೯೧೭ ರ ಸುಮಾರು ಗುಳ್ಳೇದಗುಡ್ಡ ಎಲ್ಲವ್ವ, ಗುರುಲಿಂಗಪ್ಪ ಗೊಂಬಿ ಮತ್ತು ಇವರ ಸಾಕು ಮಗಳು ಗಂಗೂಬಾಯಿ ವಾಮನರಾಯರ ವಿಶ್ವಗುಣಾದರ್ಶ ಕಂಪನಿಗೆ ಬಂದರು. ವೃತ್ತಿರಂಗಭೂಮಿಯ ಮೊದಲ ನಟಿ ಪ್ರವೇಶಿಸಿದ ಎರಡನೇ ಕಂಪನಿ ಇದು.

ವಾಮನರಾಯ ಮಾಸ್ತರರು ಚಾರಿತ್ರ್ಯದಲ್ಲಿ ಶುದ್ಧರು ಅವರ ಕಂಪನಿ ಕೂಡ ಅಷ್ಟೇ. ಯಾವುದೇ ಅನೀತಿ, ಅವ್ಯವಹಾರಗಳಿಗೆ ಅಲ್ಲಿ ಆಸ್ಪದವಿರುತ್ತಿರಲಿಲ್ಲ. ರಾಯರು ಯಾವ ಕಲಾವಿದರ ಬಗೆಗೂ ಸಂದೇಹ ಪಡುತ್ತಿರಲಿಲ್ಲ. ಅವರನ್ನು ಕೂಡಿಸಿಕೊಂಡು ಧರ್ಮ, ನೀತಿಯ ಮಹತ್ವ ಹೇಳುತ್ತಿದ್ದರು. ಅವರ ನಡೆ ನುಡಿ ಒಂದಾಗಿದ್ದರಿಂದ ಅವರ ಸಹವಾಸದಲ್ಲಿ ತಪ್ಪು ಹೆಜ್ಜೆ ಇಡಲು ಯಾರಿಗೂ ಮನಸ್ಸಾಗುತ್ತಿರಲಿಲ್ಲ. ಈ ಮಾತಿಗೆ ಬಸವರಾಜ ಮನಸೂರ, ಕೊಟ್ಟೂರಪ್ಪನವರ ಆತ್ಮಕಥೆಗಳೇ ನಿದರ್ಶನ. ರಾಯರು ಮಹಿಳೆಯನ್ನು ಕಂಪನಿಗೆ ಸೇರಿಸಿಕೊಳ್ಳಲು ಹಿಂದೇಟು ಹಾಕಲಿಲ್ಲ. ಸಂಸಾರದ ರಥಕ್ಕೆ ಹೆಣ್ಣು ಗಂಡು ಹೇಗೆ ಅಗತ್ಯವೋ ಹಾಗೆಯೇ ನಾಟಕ ಸಂಸಾರಕ್ಕೂ ಪುರುಷರ ಜೊತೆಗೆ ಸ್ತ್ರೀಯರು ಬೇಕೆಂದು ಅವರ ಅಭಿಪ್ರಾಯವಾಗಿತ್ತು. ರಂಗದ ಮೇಲೆ ಮಹಿಳೆಯರಿಗೆ ನಿಷಿದ್ಧವಿದ್ದ ಕಾಲದಲ್ಲಿ ವಾಮನರಾಯರು ತಮ್ಮ ಕಂಪನಿಗೆ ಬಂದ ಎಲ್ಲವ್ವ ಗುಳ್ಳೆದಗುಡ್ಡ, ಗುರುಲಿಂಗಪ್ಪ ಗೊಂಬಿ, ಗಂಗೂಬಾಯಿ ಅವರನ್ನು ಸಂತೋಷದಿಂದ ಬರಮಾಡಿಕೊಂಡರು. ಸಂಗೀತ ಕಲಿಯಬೇಕೆನ್ನುವ ಹಂಬಲ ಹೊಂದಿದ್ದ ಗಂಗೂಬಾಯಿಗೆ ತಂದೆಯಾಗಿ, ಗುರುವಾಗಿ ಸಂಗೀತ ಕಲಿಸಿ ಬೆಳೆಸಿದರು. ವಾಮನರಾಯರಿಗೆ ಮಹಿಳೆಯರ ಬಗ್ಗೆ ಗೌರವವಿತ್ತು, ವಿಶ್ವಾಸವಿತ್ತು. ಅವರ ಗರಡಿಯಲ್ಲಿಯೇ ಸಂಗೀತ, ಅಭಿನಯದ ಪಟ್ಟುಗಳನ್ನು ಕಲಿತು ಗುಳ್ಳೇದಗುಡ್ಡ ಗಂಗೂಬಾಯಿ ಕನ್ನಡ ರಂಗಭೂಮಿಗೆ ಅಮೂಲ್ಯ ಕೊಡುಗೆಯೆನಿಸಿದಳು. 'ಗಾನರತ್ನ' ಬಿರುದಿನಿಂದ ಸನ್ಮಾನಿತಳಾದಳು. ಇದರಿಂದ ಮಹಿಳೆಯರ ಬಗೆಗೆ ವಿಶ್ವಗುಣಾದರ್ಶ ಕಂಪನಿಯ ಧೋರಣೆ ಏನಿತ್ತೆಂಬುದು ಸ್ಪಷ್ಟವಾಗುತ್ತದೆ.

**೧) ಎಲ್ಲೂಬಾಯಿ ಗುಳ್ಳೇದಗುಡ್ಡ:**

ಕರ್ನಾಟಕ ವೃತ್ತಿರಂಗಭೂಮಿಯ ಮೊದಲ ನಟಿ ಎಂಬ ಹೆಗ್ಗಳಿಕೆ ಎಲ್ಲೂಬಾಯಿ ಅವರದು. ವಿಶ್ವಗುಣಾದರ್ಶ ನಾಟಕ ಮಂಡಳಿಗೆ ಬರುವುದಕ್ಕಿಂತ ಮೊದಲು ಬಾಗಲಕೋಟಿ ಹತ್ತಿರದ ಹುಲ್ಲೂರ ಪರಪ್ಪನವರ ನಾಟಕ ಮಂಡಳಿಯಲ್ಲಿದ್ದ ಬಗೆಗೆ ಮಾಹಿತಿ ಸಿಗುತ್ತದೆ. ಈಕೆಯನ್ನು ಕೊಣ್ಣೂರ ಕಂಪನಿಗೆ ಪರಿಚಯಿಸಿದವರು ಗುಳ್ಳೇದಗುಡ್ಡ ಗುರುಲಿಂಗಪ್ಪನವರು. ಶಿವಮೂರ್ತಿಸ್ವಾಮಿಗಳು ನಟಿಯರ ಹುಡುಕಾಟದಲ್ಲಿದ್ದಾಗ ಅದೇ ಕಂಪನಿಯಲ್ಲಿದ್ದ ಗುರುಲಿಂಗಪ್ಪ ಎಲ್ಲೂಬಾಯಿಯವರನ್ನು ಕರೆದುಕೊಂಡು ಶಿವಮೂರ್ತಿಸ್ವಾಮಿಗಳಿಗೆ ಭೆಟ್ಟಿ ಮಾಡಿಸುತ್ತಾರೆ. ಇದು ನಡೆದಿದ್ದು ೧೯೦೮ ರಲ್ಲಿ ಎಲ್ಲವ್ವನ ರೂಪ,

ಹಾಡುಗಾರಿಕೆ, ಅಭಿನಯ ನೋಡಿ ಸ್ವಾಮಿಗಳು ಕಂಪನಿಯಲ್ಲಿ ಕರೆದುಕೊಂಡರು. ಇವಳ ಪ್ರವೇಶದಿಂದ ಕೊಣ್ಣೂರ ಕಂಪನಿಯ ಆಕರ್ಷಣೆ ಹೆಚ್ಚಿತು.

ಎಲ್ಲೂಬಾಯಿ 'ಸ್ತ್ರೀಪಾತ್ರಗಳ ಜೊತೆಗೆ ಪುರುಷಪಾತ್ರದಲ್ಲಿಯೂ ಕಾಣಿಸಿಕೊಂಡು ಅದ್ಭುತವಾಗಿ ಅಭಿನಯಿಸಿದ್ದಳು. 'ಬಸವೇಶ್ವರ'ದಲ್ಲಿ ಮೊದಲು ಮಾದಲಾಂಬಿಕೆಯಾಗಿ ನಂತರ ಬಿಜ್ಜಳನ ಪಾತ್ರವಹಿಸಿ ಎಲ್ಲವ್ವ ವೀರಾಸನದಲ್ಲಿ ಕುಳಿತುಕೊಳ್ಳುವ ಭಂಗಿ ಕುತೂಹಲಕರವಾಗಿತ್ತೆಂದು ಶಿವಮೂರ್ತಿಸ್ವಾಮಿಗಳು ಬರೆದಿದ್ದಾರೆ. ಗುರುಲಿಂಗಪ್ಪ ಗಂಗಣ್ಣವರ ಮತ್ತು ಎಲ್ಲವ್ವ ಕೊಣ್ಣೂರ ಕಂಪನಿಯ ಜನಪ್ರಿಯ ಜೋಡಿ ಎನಿಸಿದ್ದರು[೪೫]. ಎಲ್ಲೂಬಾಯಿ, ರಾಜಾ ಹರಿಶ್ಚಂದ್ರ, ಶನಿಪ್ರಭಾವ, ಬಸವೇಶ್ವರ ನಾಟಕಗಳಲ್ಲಿ ಮುಖ್ಯ ಸ್ತ್ರೀಪಾತ್ರಗಳನ್ನು ನಿರ್ವಹಿಸುತ್ತಿದ್ದಳು ಸ್ತ್ರೀಯರು ರಂಗಭೂಮಿ ಸಮೀಪ ಸುಳಿಯುತ್ತಿರಲಿಲ್ಲದ. ಆ ಕಾಲದಲ್ಲಿ ಧೈರ್ಯದಿಂದ ಪಾತ್ರ ಮಾಡಿದ ಮತ್ತು ಸ್ತ್ರೀಯರಿಗೆ ಸ್ಫೂರ್ತಿ ನೀಡಿದ ಶ್ರೇಯಸ್ಸು ಎಲ್ಲೂಬಾಯಿ ಅವರದು, ಎಲ್ಲೂಬಾಯಿಗಿಂತ ಮೊದಲು ಜನಪದ ರಂಗಭೂಮಿಯಲ್ಲಿ ಸ್ತ್ರೀಯರು ಅಭಿನಯಿಸುತ್ತಿದ್ದರು. 'ಶ್ರೀಕೃಷ್ಣ ಪಾರಿಜಾತ'ದಲ್ಲಿ ಅಭಿನಯಿಸಿ ಕೌಜಲಗಿ ನಿಂಗಮ್ಮ ಪ್ರಖ್ಯಾತಳಾಗಿದ್ದಳು. ಇವಳ ಪ್ರಭಾವದಿಂದಲೇ ಕೊಣ್ಣೂರ ಕಂಪನಿಯ ಮಾಲೀಕರಾಗಿದ್ದ ಶಿವಮೂರ್ತಿಸ್ವಾಮಿಗಳು 'ಸ್ತ್ರೀಪಾತ್ರಕ್ಕೆ ಸ್ತ್ರೀಯರಿದ್ದರೆ ಚೆನ್ನ' ಎಂದು ಮಹಿಳೆಯರ ಶೋಧಕ್ಕೆ ತೊಡಗಿದರು. ಅವರ ಹುಡುಕಾಟಕ್ಕೆ ಎಲ್ಲೂಬಾಯಿ ಎಂಬ ಅನರ್ಘ್ಯಕಲಾರತ್ನ ದೊರೆತಿದ್ದು ವೃತ್ತಿರಂಗಭೂಮಿಗೆ ವರವಾಗಿ ಪರಿಣಮಿಸಿತು.

ಕೊಣ್ಣೂರ ಕಂಪನಿ ಬಿಟ್ಟ ಮೇಲೆ ಎಲ್ಲೂಬಾಯಿ, ಗುರುಲಿಂಗಪ್ಪ ಮತ್ತು ಸಾಕು ಮಗಳು ಗಂಗೂಬಾಯಿ ಈ ಮೂವರು ವಾಮನರಾವ ಮಾಸ್ತರರ 'ವಿಶ್ವಗುಣಾದರ್ಶ ನಾಟಕ ಮಂಡಳಿ'ಯನ್ನು ಪ್ರವೇಶಿಸಿದರು. 'ಭಕ್ತ ಪುಂಡಲೀಕ'ದಲ್ಲಿ ಪುಂಡಲಿಕನ ತಾಯಿ ತಂದೆ ಆಗಿ ಅಭಿನಯಿಸುತ್ತಿದ್ದರು. 'ಸಾಧ್ವಿ ಸಖೂಬಾಯಿ'ಯ ಚಂಡಿಕಾಬಾಯಿ ಪಾತ್ರದಲ್ಲಿ ಎಲ್ಲೂಬಾಯಿ ತೋರುತ್ತಿದ್ದ ದರ್ಪದ ಹಾವಭಾವ ನೋಡುವವರನ್ನು ದಂಗುಬಡಿಸುತ್ತಿತ್ತು.

'ಗಾನರತ್ನ' ಬಿರುದಿನಿಂದ ಖ್ಯಾತಳಾದ ಗಂಗೂಬಾಯಿಯನ್ನು ರಂಗಭೂಮಿಗೆ ಕೊಟ್ಟ ಹಿರಿಮೆ ಕೂಡ ಎಲ್ಲವ್ವನದು. ಗಂಗೂಬಾಯಿಗೆ ಸಂಗೀತ ಕಲಿಸುವುದಕ್ಕಾಗಿಯೇ ತುಂಬ ಶ್ರಮಪಟ್ಟಳು. ಮೊದಲು ವಾಮನರಾಯರಿಂದ, ಆಮೇಲೆ ಶಂಕರರಾವ ಸರನಾಯಕರಿಂದ, ಬಾಳಕೃಷ್ಣ ಬುವಾ ಕಪಿಲೇಶ್ವರ ಗವಾಯಿಗಳಿಂದ ಗಂಗೂಬಾಯಿ ಶಾಸ್ತ್ರೀಯ ಸಂಗೀತ ಕಲಿತಳು. ವಾಮನರಾಯರ ಕಂಪನಿ ಬಿಟ್ಟು, ಮಗಳ ಜೊತೆ ಸೇರಿ 'ಶ್ರೀಕೃಷ್ಣ ನಾಟಕ ಮಂಡಳಿ' ಹುಟ್ಟುಹಾಕಿದರು. ವಯಸ್ಸಾದ ಮೇಲೆ ಅಭಿನಯ ಬಿಟ್ಟು ಮಗಳ ಶ್ರೇಯೋಭಿವೃದ್ಧಿಗೆ ಹಾರೈಸುತ್ತ ಬದುಕಿದರು. 'ಪಾರ್ವತಿ ಸತ್ವ ಪರೀಕ್ಷಾ', 'ಸಂತ ಸಖೂಬಾಯಿ', 'ಸಂದೇಹ ಸಾಮ್ರಾಜ್ಯ' ನಾಟಕಗಳಲ್ಲಿ ಮಗಳು ಅಭಿನಯಿಸುತ್ತಿದ್ದ ಪಾತ್ರಗಳನ್ನು, ಸಂಗೀತಗಳನ್ನು ಕೇಳಿ ಹೆಮ್ಮೆಪಡುತ್ತಿದ್ದಳು.

ಎನ್ನೆ ಅವರು ಹೇಳುವಂತೆ 'ಹೆಸರು ಗಳಿಸಿ, ಹಣ, ಪ್ರಸಿದ್ಧಿ ಹೊಂದಿದ ಎಲ್ಲವ್ವ ಒಬ್ಬ ಧೈರ್ಯವಂತ ಸಂಗೀತನಟಿ ಎಂದು ಅನ್ನಲೇಬೇಕು ಯಾಕೆಂದರೆ ಸ್ತ್ರೀಯರಿಗೆ 'ನಿಷೇಧ'ವಾಗಿದ್ದ ರಂಗಭೂಮಿಯ ಕ್ಷೇತ್ರದಲ್ಲಿ ನಟಿಯರ ಬಾಳಿಗೆ ಎಲ್ಲವ್ವ ಸ್ಫೂರ್ತಿಯ ಸೆಲೆಯಾದರು. ಎಲ್ಲವ್ವನ ನಂತರ ರಂಗಭೂಮಿಯಲ್ಲಿ ಅನೇಕ ಸ್ತ್ರೀಯರು ಪ್ರಸಿದ್ಧಿ ಹೊಂದಿದರು. ವೃತ್ತಿರಂಗವನ್ನೇರಿ, ಶಾಸ್ತ್ರೀಯ ಸಂಗೀತವನ್ನು ಶ್ರಮವಹಿಸಿ ರೂಢಿಸಿಕೊಂಡಿದ್ದ ಎಲ್ಲೂಬಾಯಿ ಕನ್ನಡ ರಂಗಭೂಮಿಗೆ 'ಸ್ತ್ರೀ'ಯರಾಗಮನಕ್ಕೆ ಪ್ರಥಮ ಮೆಟ್ಟಿಲಾದರು. ಇಂದು ನಿಜಕ್ಕೂ ಕನ್ನಡ ವೃತ್ತಿರಂಗಭೂಮಿ ಎಲ್ಲೂಬಾಯಿ ಅವರನ್ನು ನೆನೆಯಲೇಬೇಕು.

ಮಗಳು ಗಂಗೂಬಾಯಿಯ ಮರಣವನ್ನೂ ಸಹಿಸಿಕೊಂಡು ಶತಾಯುಷಿಯಾಗಿ ಬಾಳಿ ರಂಗಭೂಮಿಯನ್ನು ಬೆಳಗಿದವರು ಎಲ್ಲೂಬಾಯಿ ಗುಳ್ಳೇದಗುಡ್ಡ. ನಟನೆಯಲ್ಲಿ ಅದ್ಭುತವಾದದ್ದೇನನ್ನೂ ಸಾಧಿಸದಿದ್ದರೂ ಸ್ಮರಣೀಯ ವ್ಯಕ್ತಿಯಾಗಿ ನೆನಪಲ್ಲಿ ಉಳಿದವರು ಇವರು[೪೭].

ಕೊಣ್ಣೂರ ಕಂಪನಿ ಮತ್ತು ವಿಶ್ವಗುಣಾದರ್ಶ ಕಂಪನಿಗಳಲ್ಲಿ ಪಾತ್ರವಹಿಸಿ ಕಂಪನಿಗಳ ವೈಭವಕ್ಕೆ ಕಾರಣಳಾದ ಎಲ್ಲೂಬಾಯಿ ಗುಳ್ಳೇದಗುಡ್ಡ ಅವರ ರಂಗಸ್ಥಾಪನೆ ಅವಿಸ್ಮರಣೀಯವಾದುದು.

**೨) ಗಂಗೂಬಾಯಿ ಗುಳ್ಳೇದಗುಡ್ಡ:**

ಕನ್ನಡ ವೃತ್ತಿರಂಗಭೂಮಿಯ ವೈಭವದ ದಿನಗಳಿಗಾಗಿ ತನ್ನ ಸಂಗೀತ, ಅಭಿನಯ ಕಲೆಯನ್ನು ಧಾರೆಯರೆದ ಮಹಾನ್ ಕಲಾವಿದೆಯರಲ್ಲಿ ಗಂಗೂಬಾಯಿ ಗುಳ್ಳೇದಗುಡ್ಡ ಅಗ್ರಗಣ್ಯರು. ರಂಗಭೂಮಿಯ ಜೊತೆಗೆ ಚಲನಚಿತ್ರರಂಗವನ್ನೂ ಬೆಳಗಿದ ಹಿರಿಮೆ ಈ ಕಲಾವಿದೆಯದು. ಸಾಕುತಾಯಿ ಎಲ್ಲೂಬಾಯಿ, ಸಾಕುತಂದೆ ಗುರುಲಿಂಗಪ್ಪ ರಂಗಕಲಾವಿದರು. ಇವರ ಆರೈಕೆಯಲ್ಲಿ ಈಕೆ ನಾಟಕ ಕಂಪನಿಯ ತೊಟ್ಟಿಲಲ್ಲಿಯೇ ಆಡಿ ಬೆಳೆದಳು. ಆರನೆಯ ವಯಸ್ಸಿನಲ್ಲಿಯೇ ರಂಗವನ್ನು ಪ್ರವೇಶಿಸಿದಳು. ಕೊಣ್ಣೂರ ಕಂಪನಿಯ ರಾಜಾ ಹರಿಶ್ಚಂದ್ರ ನಾಟಕದಲ್ಲಿ ಲೋಹಿತಾಶ್ವನಾಗಿ ಗಂಗೂಬಾಯಿ ಅಭಿನಯಿಸಿದ್ದನ್ನು ನೋಡಿ ಪ್ರೇಕ್ಷಕರು ಮಂತ್ರಮುಗ್ಧರಾಗಿ ಹೋದರಂತೆ. ಹುಟ್ಟಿನಿಂದಲೇ ಮಧುರಕಂಠ ಪಡೆದುಕೊಂಡು ಬಂದ ಬಾಲಕಿಗೆ ಸಂಗೀತ ಶಿಕ್ಷಣ ದೊರೆತರೆ ಅವಳೊಬ್ಬ ಶ್ರೇಷ್ಠ ಕಲಾವಿದೆಯಾಗಿ ಬೆಳೆಗಬಹುದೆಂದು ತಾಯಿ ತಂದೆ ಲೆಕ್ಕ ಹಾಕಿದರು. ಆಗ ಅವರಿಗೆ ನೆರವಿಗೆ ಬಂದದ್ದು ವಿಶ್ವಗುಣಾದರ್ಶ ನಾಟಕ ಮಂಡಳಿ. ಆಗ ಗಂಗೂಬಾಯಿಗೆ ಹದಿಮೂರು ವರ್ಷ ವಾಮನರಾಯರು ಅವಳನ್ನು ಮಗಳಂತೆ ನೋಡಿಕೊಳ್ಳುತ್ತಿದ್ದರು. ಸಂಗೀತದ ಪ್ರಾಥಮಿಕ ಪಾಠಗಳನ್ನು ವಾಮನರಾಯರು ಹೇಳಿಕೊಟ್ಟರು. ಮುಂದೆ ಬಾಳಕೃಷ್ಣಾನಂದ ಕಪಿಲೇಶ್ವರ ಬಳಿ ಸಂಗೀತದ ಪ್ರಾಥಮಿಕ ಅಭ್ಯಾಸ ಮುಗಿಸಿ ಅಬ್ದುಲ್ ಕರೀಂಖಾನ್ ಸಾಹೇಬರಲ್ಲಿ ಹಿಂದೂಸ್ತಾನಿ ಸಂಗೀತ ಕಲಿತು ಮಹಾರಾಷ್ಟ್ರದ ಕೋಗಿಲೆಯೆನಿಸಿದ್ದ ಶಂಕರರಾವ್ ಸರನಾಯಕ ಅವರ 'ಯಶವಂತ ನಾಟಕ ಸಂಘ'ದಲ್ಲಿ ಎರಡು ವರ್ಷ ಉಳಿದು ಸಂಗೀತದಲ್ಲಿ ಸಾಧನೆ ಮುಂದುವರೆಸಿದಳು.

ಮುಂದೆ ಅವಳಿಗೆ 'ಗಾಯನರತ್ನ' ಎಂಬ ಬಿರುದು ಬಂತು[೪೭]. ಇಷ್ಟೆಲ್ಲ ಸಾಧನೆಯ ನಂತರ ಗಂಗೂಬಾಯಿ ವಿಶ್ವಗುಣಾದರ್ಶ ಕಂಪನಿಗೆ ಬಂದಳು. ಆಗ ಅದು ಹೊಸಪೇಟೆಯಲ್ಲಿತ್ತು. ಅವಳಿಗೆ ಸಂಬಳ ತಿಂಗಳಿಗೆ ೫೦ ರೂ ಎಂದು ನಿರ್ಧಾರವಾಯಿತು. ಅದು ಆ ಕಾಲದಲ್ಲಿ ದೊಡ್ಡ ಸಂಬಳ.

ಬಸವರಾಜ ಮನಸೂರ ಅವರು ಸ್ಮರಿಸುವಂತೆ: 'ತುಂಬಿದ ತಾರುಣ್ಯ, ಮೇಲಾಗಿ ಲಾವಣ್ಯವತಿ, ಸಾತ್ವಿಕ ಮನೋವೃತ್ತಿ, ಸಾಕಷ್ಟು ಸಂಗೀತಜ್ಞಾನ, ಕೋಕಿಲೆಯ ಕಂಠ ಇವು ಅವಳ ಆಸ್ತಿ. ಸಂಗೀತ ಕಲಿತ ಮಾತ್ರಕ್ಕೆ ಅಭಿನಯ ಬರುತ್ತದೆಯೆಂದು ಹೇಳಲು ಸಾಧ್ಯವಿಲ್ಲ. ಶಾಸ್ತ್ರೀಯ ಸಂಗೀತ ಹಾಡುವವರಿಗೆ ನಾಟ್ಯ ಸಂಗೀತದಿಂದ ತೃಪ್ತಿಯಾಗದು. ಶಾಸ್ತ್ರೀಯ ಹಾಗೂ ನಾಟ್ಯ ಸಂಗೀತಗಳು ಹೊರನೋಟಕ್ಕೆ ಒಂದೇ ಮಾಧ್ಯಮವಾಗಿ ಕಂಡರೂ ಅವುಗಳಿಗೆ ಭಿನ್ನಭಿನ್ನ ಮಜಲುಗಳಿವೆ. ವಾಮನರಾಯರು ಗಂಗೂಬಾಯಿಗೆ ಅಭಿನಯ ಕಲಿಸಿದರು. ಸಂಭಾಷಣೆಯನ್ನು ಸಾಹಿತ್ಯಶುದ್ಧವಾಗಿ ಒಪ್ಪಿಸುವ ಬಗೆಯನ್ನು, ಧ್ವನಿಯ ಏರಿಳಿತಗಳನ್ನು ಹೇಳಿಕೊಟ್ಟರು. ನಾಟ್ಯಸಂಗೀತದ ಗುಣಧರ್ಮ ವಿವರಿಸಿದರು. ಕರುಣ ಶೃಂಗಾರ ರಸಗಳಲ್ಲಿ ಪರಿಣಿತಗೊಳಿಸಿದರು[೪೮]. 'ಪದ್ಮಾವತಿ ಪರಿಣಯ'ದಲ್ಲಿ ಪದ್ಮಾವತಿ, 'ಕಾಳಿದಾಸ'ದಲ್ಲಿ ಕಲಾವತಿ ಪಾತ್ರಗಳು ಅವಳ ಪಾಲಿಗೆ ಬಂದವು. ಧಾರವಾಡದ ಕ್ಯಾಂಪಿನಲ್ಲಿ ನಾವು 'ಮಹಾನಂದಾ' ಅರ್ಥಾತ್ 'ಪಾರ್ವತಿ ಸತ್ವಪರೀಕ್ಷೆ' ಎಂಬ ನಾಟಕ ಕೂಡಿಸಿದಾಗ ಅವಳಿಗೆ ಯೋಗ್ಯವಾದ ಪಾತ್ರ ಸಿಕ್ಕಿತು. ಗಂಗೂಬಾಯಿಯ ಪ್ರತಿಭೆ ಅಲ್ಲಿ ಬೆಳಗಿತು. ಅವಳ ಅಭಿನಯಕ್ಕೆ ಸಂಗೀತವೆಂದರೆ ಬಂಗಾರಕ್ಕೆ ಸುಗಂಧ ಬೆರೆತಂತಾಯಿತು. ಮುಂದೆ 'ಭಕ್ತ ಸಖೂಬಾಯಿ'ಯಲ್ಲಿ ಸಖೂಬಾಯಿ, 'ಸಂದೇಹ ಸಾಮ್ರಾಜ್ಯ'ದಲ್ಲಿ ಶತತಾರ, 'ಭಾಮಿನಿ'ಯಲ್ಲಿ ಭಾಮಿನಿ ಪಾತ್ರಗಳಲ್ಲಿ ಅಭಿನಯಿಸಿ ಕರ್ನಾಟಕ-ಮಹಾರಾಷ್ಟ್ರಗಳಲ್ಲಿ ಹೆಸರು ಪಡೆದಳು. ಅವಳು ನಿರ್ವಹಿಸುತ್ತಿದ್ದ 'ಸಖೂಬಾಯಿ'ಯ ಕರುಣಾಮಯ ಪಾತ್ರ ನೋಡಿಯೇ ಅನುಭವಿಸಬೇಕು. ಗುರುಹಿರಿಯರಲ್ಲಿ ಭಯಭಕ್ತಿ, ದೇವರಲ್ಲಿ ಅನನ್ಯಶ್ರದ್ಧೆ ಗಂಗೂಬಾಯಿಯ ಉನ್ನತಿಯ ಉಗಮಸ್ಥಾನವಾಗಿತ್ತು.

ನಾಟಕದಲ್ಲಿ ವಾಮನರಾಯರು ಮತ್ತು ಗಂಗೂಬಾಯಿ ಮುಖ್ಯಪಾತ್ರದಲ್ಲಿ ಕಾಣಿಸಿಕೊಳ್ಳುವರೆಂದು ಪ್ರಚಾರವಾದರೆ ಸಾಕು ವಿಶ್ವಗುಣಾದರ್ಶ ಕಂಪನಿಯ ಥೇಟರ್ ಹೌಸಫುಲ್! ಟಿಕೇಟು ಸಿಗದೇ ಅನೇಕ ಜನ ಮನೆಗೆ ಮರಳುತ್ತಿದ್ದರು. 'ಮಹಾನಂದಾ' ನಾಟಕದಲ್ಲಿ ಗಂಗೂಬಾಯಿ ಮಹಾನಂದಿಯ ಪಾತ್ರದಲ್ಲಿ 'ಇವನೇ ಗಿರಿಜಾರಮಣನೇ, ಇವನೇ ಫಾಲಾಕ್ಷ ಶಿವನೇ' ಮತ್ತು 'ನಾ ಹೋಗಿ ಬರ್ಪೆ ನಾರಿಯರೇ ಬೇಡುವೆನಾಜ್ಞೆಯಾ' ಎಂಬ ಭೈರವಿರಾಗದ ಹಾಡನ್ನು ಹಾಡಿದರೆ ಜನರು ಒನ್ಸಮೋರ್ ಕೂಗಿ ಮತ್ತೇ ಕೇಳುವ ಅಭಿಲಾಷೆಯನ್ನು ವ್ಯಕ್ತಪಡಿಸುತ್ತಿದ್ದರು. 'ಕವಿರತ್ನಕಾಳಿದಾಸ'ದಲ್ಲಿ ರಾಜಪುತ್ರಿಯ ಪಾತ್ರ, 'ಸಂದೇಹ ಸಾಮ್ರಾಜ್ಯ'ದಲ್ಲಿ ಶತತಾರಾ ಪಾತ್ರ ಗಂಗೂಬಾಯಿಯ ಗಾನಾಭಿನಯ ಕೌಶಲ್ಯದಲ್ಲಿ ಅಪಾರ ಜನಪ್ರಿಯತೆ ಪಡೆದವು. 'ಸಾಧ್ವಿಸಖೂಬಾಯಿ' ನಾಟಕದಲ್ಲಿ "ಸಖೂಬಾಯಿ ಪಾತ್ರದಲ್ಲಿ ಬಾಲಗಂಧರ್ವರ ಗೀತ 'ಸೃಜನ

ಕಸಯ ಮನಜೋ' ಎಂಬ ಹಾಡಿನ ಚಾಲಿಯಂತೇ 'ಯದುತನಯ ಗೋಪಾಲ' ಎಂಬ ಭೂಪರಾಗದ ಭಕ್ತಿಗೀತೆಯನ್ನು ಹಾಡುತ್ತ ಪ್ರವೇಶಿಸಿದರೆ ಪ್ರೇಕ್ಷಕರು ಭಕ್ತಿಭಾವದಿಂದ ತನ್ಮಯರಾಗುತ್ತಿದ್ದರಂತೆ[೪೯]. ವಾಮನರಾಯರು ಮತ್ತು ಗಂಗೂಬಾಯಿ ಇವರ ಅದ್ಭುತ ಅಭಿನಯ ಹಾಗೂ ಹಾಡುಗಾರಿಕೆಯಿಂದ ವಿಶ್ವಗುಣಾದರ್ಶ ಕಂಪನಿಯ ನಾಟಕಗಳು ಕೀರ್ತಿಸಂಪನ್ನವಾದವು. ಗಂಗೂಬಾಯಿಯ ತಾಯಿ ತಂದೆಯರು, ತಮ್ಮ ಮಗಳಿಂದಲೇ ಕಂಪನಿಗೆ ಧನಲಕ್ಷ್ಮಿ ಪ್ರಸನ್ನಳಾಗಿರುವಳೆಂದು ಅಭಿಮಾನದಿಂದ ಬೀಗಿದರು. ಸಂಬಳ ಹೆಚ್ಚಿಸುವಂತೆ ಕೇಳಿದರು. ಸಂಬಳದ ಹೆಚ್ಚಳಕ್ಕೆ ವಾಮನರಾಯರ ತಕರಾರು ಇದ್ದಿರಲಿಲ್ಲ ಆದರೆ 'ನಮ್ಮಿಂದಲೇ ನಿಮ್ಮ ಕಂಪನಿ ನಡೆಯುತ್ತಿದೆ'. ಎಂಬ ಅಹಂಕಾರದ ಮಾತು ಅವರ ಸ್ವಾಭಿಮಾನವನ್ನು ಕೆರಳಿಸಿತು. ಕೂಡಲೇ ಅವರ ಬಾಕಿ ಹಣವನ್ನು ಚುಕ್ತಾ ಮಾಡಿ ಅವರನ್ನು ಬೀಳ್ಕೊಟ್ಟರು. ಗಂಗೂಬಾಯಿ-ಗುರುಲಿಂಗಪ್ಪ, ಎಲ್ಲೂಬಾಯಿ ವಿಶ್ವಗುಣಾದರ್ಶದಿಂದ ಹೊರ ಬಂದು ೧೯೨೬ರಲ್ಲಿ 'ಶ್ರೀ ಕೃಷ್ಣ ನಾಟಕ ಮಂಡಳಿ' ಕಟ್ಟಿದರು ವಾಮನರಾಯರ ಕಂಪನಿಯ ನಾಟಕಗಳನ್ನೇ ಆಡುತ್ತ ಸಂಚರಿಸಿದರು. ನಾಯಕನ ಪಾತ್ರಕ್ಕಾಗಿ ಗುರುರಾವ ದೇಶಪಾಂಡೆ ಬಂದರು. ಅವರ ನಂತರ, ಬಸವರಾಜ ಮನಸೂರ ಅವರನ್ನು ಕರೆಸಿದರು. ಗಂಗೂಬಾಯಿ ಒಡೆತನದಲ್ಲಿ 'ಶ್ರೀಕೃಷ್ಣ ನಾಟಕ ಮಂಡಳಿ' ಯಶಸ್ಸಿನ ಹಾದಿಯಲ್ಲಿ ನಡೆಯಿತು. ವಿಜಾಪುರ ಕ್ಯಾಂಪಿನಲ್ಲಿ ಕೌಜಲಗಿ ಶ್ರೀನಿವಾಸರಾಯರು ಗಂಗೂಬಾಯಿ ಅವರಿಗೆ 'ಗಾನರತ್ನ' ಬಿರುದನ್ನಿತ್ತು. ಸಾರ್ವಜನಿಕವಾಗಿ ಸನ್ಮಾನಿಸಿದರು. ಹೀರಾಬಾಯಿ ಬಡೋದೆಕರ ಮರಾಠಿಯ ಶ್ರೇಷ್ಠ ನಟಿ, ನಾಟಕ ಕಂಪನಿಯ ಒಡತಿ. ಇವರ ಕಂಪನಿ ಆಗ ವಿಜಾಪುರದಲ್ಲಿಯೇ ಕ್ಯಾಂಪ್ ಮಾಡಿತ್ತು. ಈ ಮರಾಠಿ ಕಂಪನಿಯ ಕಲಾವಿದರೆಲ್ಲ ಗಂಗೂಬಾಯಿ ಅವರ ಸತ್ಕಾರ ಸಮಾರಂಭಕ್ಕೆ ಸಾಕ್ಷಿ ಆದರಂತೆ.

ಗಂಗೂಬಾಯಿ ಅವರ ಸಂಗೀತ, ಅಭಿನಯ ಮೆಚ್ಚಿಕೊಂಡಿದ್ದ ದೇಶಪಾಂಡೆ ಮುದ್ದುರಾಯರು ಗಂಗೂಬಾಯಿಯ ಕೈ ಹಿಡಿದರು. ಮುದ್ದರಾಯರು 'ಶ್ರೀಕೃಷ್ಣ ನಾಟಕ ಮಂಡಳಿ'ಯ ಹಿತಚಿಂತಕರಾಗಿ ಅದರ ಏಳಿಗೆಗೆ ಶ್ರಮಿಸಿದರು ಮರಾಠಿಯ ಸುಪ್ರಸಿದ್ಧ ಸಂಗೀತಗಾರ ಗೋವಿಂದರಾವ ಟೇಂಬೆ ಅವರು ಗಂಗೂಬಾಯಿಯವರ ಆಮಂತ್ರಣದ ಮೇರೆಗೆ ಕಂಪನಿಗೆ ಬಂದರು. ಕೆ.ಪಿ ಖಾಡಿಲ್ಕರ್ ಅವರ 'ಮಾನಾಪಮಾನ' ನಾಟಕದ ಕನ್ನಡ ಆವೃತ್ತಿ 'ಭಾಮಿನಿ'ಗೆ ಸಂಗೀತವನ್ನು ಸಂಯೋಜಿಸಿದರು. ಎರಡು ತಿಂಗಳು ಸಿದ್ಧತೆಯ ತರುವಾಯ ನಾಟಕ ಪ್ರಯೋಗಕ್ಕೆ ಸಿದ್ಧವಾಯಿತು. ಭಾಮಿನಿ ಪಾತ್ರದಲ್ಲಿ ಗಂಗೂಬಾಯಿ ಮನೋಜ್ಞವಾಗಿ ಅಭಿನಯಿಸಿದರು. ಈ ನಾಟಕ ನೋಡಿ ಬಳ್ಳಾರಿಯ ರಾಘವಾಚಾರ್ಯರು ಮತ್ತು ಪಂಡಿತ ತಾರಾನಾಥರು ಮನಸಾರೆ ಮೆಚ್ಚಿಕೊಂಡರು. ಮುಂದೆ ಮೈಸೂರು ಅರಮನೆಯಿಂದಲೂ ಈ ನಾಟಕಕ್ಕೆ ಕರೆ ಬಂದಿತು.

ಗಂಗೂಬಾಯಿ ಎಂಥ ಶೃಂಗಾರದ ಸನ್ನಿವೇಶದಲ್ಲಿಯೂ ತಮ್ಮ ಗಾಂಭಿರ್ಯ ಕಳೆದುಕೊಳ್ಳದೆ ಅಭಿನಯಿಸುತ್ತಿದ್ದರು. ಸಂಗೀತದ ರಸಗಂಗೆಯನ್ನು ಹರಿಸುತ್ತಿದ್ದರು. ಗಂಗೂಬಾಯಿ ಉಡುಪಿ ಶ್ರೀಕೃಷ್ಣನ

ಭಕ್ತೆಯಾಗಿದ್ದರು ಅದರ ಪ್ರತೀಕವಾಗಿಯೇ ನಾಟಕ ಕಂಪನಿಗೆ ಶ್ರೀಕೃಷ್ಣನ ಹೆಸರನ್ನಿಟ್ಟಿದ್ದರು. ಮಂಗಳೂರು ಕ್ಯಾಂಪಿನಲ್ಲಿ ಉಡುಪಿಯ ಮಠದ ಶ್ರೀಗಳು ಗಂಗೂಬಾಯಿ ಹಾಗೂ ದೇಶಪಾಂಡೆ ಮುದ್ದುರಾಯರನ್ನು ಸನ್ಮಾನಿಸಿದರು. ಬೆಳ್ಳಿಯ ಕರಂಡಕದಲ್ಲಿ ಹವಳದ ಜಪಮಾಲೆಯನ್ನಿತ್ತು ಕಾಣಿಕೆಯಾಗಿ ನೀಡಿದರು. ಗಂಗೂಬಾಯಿ ಅವರ ಸಂಗೀತ ಅಭಿನಯಗಳ ಕೀರ್ತಿ ನಾಡಿನ ತುಂಬ ಹರಡಿತು. ಸವಾಯಿ ಗಂಧರ್ವರ ಶಿಷ್ಯರಾದ ವೆಂಕಟರಾವ ರಾಮದುರ್ಗ ಅವರೂ ಕಂಪನಿಗೆ ಸೇರಿದರು. ವೆಂಕಟರಾವರ ಸಂಗೀತದಿಂದ ಕೆಲವು ಕಾಲ ಕಂಪನಿ ಸಂಭ್ರಮಿಸುವಂತಾಯಿತು. ಬರುಬರುತ್ತ ಗಂಗೂಬಾಯಿಯ ಅನಾರೋಗ್ಯ, ಪ್ರೇಕ್ಷಕರ ಅಭಿರುಚಿಯಲ್ಲಿಯ ಬದಲಾವಣೆಯಿಂದ ಕಂಪನಿಯ ಆದಾಯದಲ್ಲಿ ಕುಸಿತ ಕಂಡು ಬರತೊಡಗಿತು. ೧೯೩೫ರ ವೇಳೆಗೆ ಗಂಗೂಬಾಯಿ ಕಂಪನಿ ನಿಲ್ಲಿಸುವ ನಿರ್ಧಾರ ಕೈಕೊಂಡರು[೫೦].

ಕಂಪನಿ ನಿಂತ ಮರು ವರುಷವೇ ಗುಬ್ಬಿ ವೀರಣ್ಣನವರು 'ಸುಭದ್ರಾ' ಚಲನಚಿತ್ರಕ್ಕಾಗಿ ಗಂಗೂಬಾಯಿ ಅವರನ್ನು ಆಹ್ವಾನಿಸಿದರು. ಅದರಲ್ಲಿ ರುಕ್ಮಿಣಿಯ ಪಾತ್ರ ಕೊಟ್ಟರು. ಗಂಗೂಬಾಯಿ ಅಲ್ಲಿಯೂ ಪಾತ್ರವನ್ನು ಚೆನ್ನಾಗಿಯೇ ನಿಭಾಯಿಸಿ ರಸಿಕರ ಮೆಚ್ಚುಗೆ ಗಳಿಸಿದರು. ಆಗ ಅವರಿಗೆ ೬೦೦ ರೂ ಸಂಭಾವನೆ ಕೊಟ್ಟರು. ಪುಣೆಯಲ್ಲಿ ಚಿತ್ರೀಕರಣ ಮುಗಿಸಿಕೊಂಡು ಗುಳ್ಳೇದಗುಡ್ಡಕ್ಕೆ ಮರಳಿದ ಗಂಗೂಬಾಯಿ ಕ್ಷಯರೋಗದಿಂದ ಬಳಲಿದರು. ಹುಬ್ಬಳ್ಳಿಯ ಖಾಸಗಿ ಆಸ್ಪತ್ರೆಯಲ್ಲಿ ಶುಶ್ರೂಷೆ ಪಡೆಯುತ್ತಿರುವಾಗಲೇ ನಿಧನರಾದರು.

ಗಂಗೂಬಾಯಿ ರಂಗಭೂಮಿಯ ಸಂಗೀತ ತಾರೆಯಾಗಿ ಎರಡು ದಶಕ ವಿಜೃಂಭಿಸಿದರು ಗುರುಗಳ ವಿಶ್ವಗುಣಾದರ್ಶ ಕಂಪನಿ ಮತ್ತು ಸ್ವಂತ ಕಟ್ಟಿದ ಕಂಪನಿ ಮೂಲಕ ರಂಗಭೂಮಿಯ ರಸಿಕರನ್ನು ರಂಜಿಸಿದ್ದು ಸ್ಮರಣೀಯ ಅಧ್ಯಾಯವೆನಿಸಿದೆ.

**೩) ಡಿ. ಸಂಜೀವಮ್ಮ:**

ಬಳ್ಳಾರಿ ಜಿಲ್ಲೆ ನಾರಾಯಣದೇವರಕೆರೆ ಎಂಬ ಊರಿನ ದಾದಮ್ಮನವರ ಮನೆತನದವಳಾದ ಸಂಜೀವಮ್ಮ, ಗುಳ್ಳೇದಗುಡ್ಡ ಗಂಗೂಬಾಯಿಗೆ ಸರಿಗಟ್ಟುವ ಕಲಾವಿದೆ. ದಾದಮ್ಮನವರ ಮನೆತನದ ಹುಲಿಗೆಪ್ಪ ಹನುಮವ್ವ ದಂಪತಿಗಳಿಗೆ ಹನ್ನೆರಡು ಮಕ್ಕಳು ಅವರಲ್ಲಿ ಸಂಜೀವಮ್ಮ, ಅಂಜಿನಮ್ಮ (ಹನುಮಂತೆವ್ವ), ಹನುಮಂತಪ್ಪ, ದುರ್ಗಾದಾಸ-ಈ ನಾಲ್ವರು ರಂಗಕಲಾವಿದರಾಗಿ ಪ್ರಸಿದ್ಧರಾದರು. ಇವರು ಮೊದಲು ಗರುಡ ಸದಾಶಿವರಾಯರ ಕಂಪನಿ ಸೇರಿದರು ಅದು ೧೯೨೮ ರ ಸಮಯ ಗರುಡರು 'ಎಚ್ಚಮ ನಾಯಕ' ನಾಟಕದ ಸಿದ್ಧತೆಯಲ್ಲಿ ತೊಡಗಿದ್ದರು. ಈ ನಾಟಕದಲ್ಲಿ ಹನುಮಂತಪ್ಪನಿಗೆ ಸೇವಕ ಹನುಮನ ಪಾತ್ರವನ್ನು, ಸಂಜೀವಮ್ಮನಿಗೆ 'ಸಂಜೀವಿ' ಎಂಬ ಸೇವಕಿಯ ಪಾತ್ರವನ್ನು ಕೊಟ್ಟರು. ಗರುಡರ ನಿರ್ದೇಶನದಲ್ಲಿ ಈ ಕಲಾವಿದರು ಆಂಗಿಕ, ಸಾತ್ವಿಕ ಆಭಿನಯಗಳನ್ನು ಮೈಗೂಡಿಸಿಕೊಂಡರು. ಸಹಜವಾಗಿ ದೇಹದ ಚಲನವಲನ, ಧ್ವನಿಯ ಏರಿಳಿತಗಳನ್ನು ಸಾಧಿಸಿದರು. ಅಭಿನಯ ಕಲೆಯ ಸೂಕ್ಷ್ಮಗಳನ್ನು

ಅರಿತುಕೊಂಡರು. ಶಾಲೆಯಲ್ಲಿ ಶ್ರದ್ಧೆ, ಆಸಕ್ತಿಯಿಂದ ರೂಢಿಸಿಕೊಂಡರು. 'ಎಚ್ಚಮ್ಮ ನಾಯಕ' ಯಶಸ್ವಿಯಾಯಿತು. ಇದರಲ್ಲಿ ಸೊಗಸಾಗಿ ಅಭಿನಯಿಸಿದ್ದಕ್ಕಾಗಿ ಸಂಜೀವಮ್ಮನಿಗೆ ಸೇವಕಿ ಪಾತ್ರದಿಂದ ನಾಯಕಿ ಪಾತ್ರಕ್ಕೆ ಬಡತಿಯಾಯಿತು. ಅಭಿನಯ ಕೌಶಲ್ಯದಿಂದ ನಾಯಕಿ ಪಾತ್ರಕ್ಕೆ ಸಂಜೀವಮ್ಮ ಸಿದ್ಧಳಾದಳು.

'ಅಜ್ಞಾತವಾಸ' ನಾಟಕದಲ್ಲಿ ಗರುಡರು ಕೀಚಕನ ಪಾತ್ರ ಸಂಜೀವಮ್ಮನವರದು ದ್ರೌಪದಿ ಪಾತ್ರ ಅಭಿನಯದಲ್ಲಿ ಪರಿಣತಿ ಸಾಧಿಸಿದ್ದರಿಂದ, ಗರುಡರೆದುರು ಸಂಜೀವಮ್ಮನ ದಕ್ಷ ನಿರ್ವಹಣೆಯಿಂದ ದ್ರೌಪದಿ ಪಾತ್ರ ಯಶಸ್ವಿ ಆಯಿತು. 'ಮಾಯಾಬಜಾರದಲ್ಲಿ ಸಂಜೀವಮ್ಮ ಸುಭದ್ರೆಯ ಪಾತ್ರ ಮಾಡುತ್ತಿದ್ದರು. ಈ ಪಾತ್ರದಲ್ಲಿ ಸಂಜೀವಮ್ಮ ತೋರಿದ ಅಭಿನಯ ಚಾತುರ್ಯ ಹಾಗೂ ಮಾತುಗಾರಿಕೆ ಅಮೋಘವಾದುದು. ಈ ಪಾತ್ರದಲ್ಲಿ ಸಂಜೀವಮ್ಮನನ್ನು ಸ್ವತಃ ಕೃಷ್ಣನ ಪಾತ್ರದ ಗರುಡರೂ ಮೆಚ್ಚಿ 'ಭೇಶ್' ಅಂದರು. ಕೆಲಕಾಲದ ನಂತರ ವಾಮನ್‌ರಾವ್ ಅವರ ವಿಶ್ವಗುಣಾದರ್ಶ ಕಂಪನಿ ಸೇರುವ ಸಂದರ್ಭ ಬಂದಿತು. ಹೇಗೆಂದರೆ ವಾಮನರಾಯರ ಕಂಪನಿಯಲ್ಲಿ ಗಾನಾಭಿನಯಗಳಿಂದ ಪ್ರಖ್ಯಾತಿ ಪಡೆದಿದ್ದ ಗುಳೇದಗುಡ್ಡ ಗಂಗೂಬಾಯಿ ಕಂಪನಿ ಬಿಟ್ಟು ಸ್ವಂತ ಕಂಪನಿ ಕಟ್ಟಿದ್ದರು. ಇದರಿಂದ ರಾಯರ ಕಂಪನಿಗೆ ದೊಡ್ಡ ಹೊಡೆತ ಬಿದ್ದಿತು. ಆಗ ಗಂಗೂಬಾಯಿ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸುವವರು ಬೇಕಾಗಿತ್ತು. ಸಂಜೀವಮ್ಮ ಆ ಕೊರತೆ ತುಂಬುವಷ್ಟು ಬೆಳೆದಿದ್ದರು. ಆಗ ವಾಮನರಾಯರು ಸಂಜೀವಮ್ಮನನ್ನು ಕಳಿಸಿಕೊಡುವಂತೆ ಕೇಳಿಕೊಂಡರು. ಗರುಡರು ಅವಳನ್ನು ಹರಸಿ ಬೀಳ್ಕೊಟ್ಟರು. ಆಗ ವಾಮನರಾಯ ಮಂಡಳಿ ಸಂತ ಸಖೂಬಾಯಿ, ಭಕ್ತ ಪುಂಡಲೀಕ, ಮಹಾನಂದಾ, ಕಾಳಿದಾಸ, ಶ್ರೀನಿವಾಸ ಕಲ್ಯಾಣ, ವೀರ ಅಭಿಮನ್ಯು ಹೀಗೆ ಬೇರೆ ಬೇರೆ ನಾಟಕ ಆಡುತ್ತಿತ್ತು. ಗಂಗೂಬಾಯಿ ಮಾಡುತ್ತಿದ್ದ ಸಖೂಬಾಯಿ, ಸುಭದ್ರಾ, ಮಹಾನಂದಾ ಮೊದಲಾದ ಪ್ರಧಾನ ಭೂಮಿಕೆಗಳು ಸಂಜೀವಮ್ಮನ ಪಾಲಿಗೆ ಬಂದವು[illegible]. ಆಗ ಮಂಡಳಿಯಲ್ಲಿದ್ದವರೆಲ್ಲ ರಂಗಭೂಮಿಯ ಘಟಾನುಘಟಿಗಳು. ಅವರ ಜೊತೆಯಲ್ಲಿ ಸಂಜೀವಮ್ಮ ಪ್ರತಿಭಾವಂತ ನಟಿಯಾಗಿ ಮಿಂಚಿದರು.

ಸಂಜೀವಮ್ಮನು ಸೋದರ, ಸೋದರಿಯರ ಬೆಂಬಲದಿಂದ ೧೯೩೪ರಲ್ಲಿ 'ವಿಶ್ವಕಲಾದರ್ಶ ನಾಟಕ ಮಂಡಳಿ' ಹುಟ್ಟುಹಾಕಿದರು. ವಾಮನರಾಯರ ಕಂಪನಿ ಆಡುತ್ತಿದ್ದ ನಾಟಕಗಳನ್ನೇ ಆಡಿದರು. ಸಂತ ಸಖೂಬಾಯಿ, ಮಹಾನಂದಾ, ಭಕ್ತ ಪುಂಡಲೀಕ, ಬಸವೇಶ್ವರ, ಲಂಕಾದಹನ ನಾಟಕಗಳಲ್ಲಿ ಸಂಜೀವಮ್ಮ ನಾಯಕಿ ಪಾತ್ರಗಳಲ್ಲಿ ಅಭಿನಯಿಸುತ್ತಿದ್ದರು. ಆರ್ಥಿಕ ಅಡಚಣೆ ಮತ್ತು ಸಂಜೀವಮ್ಮನ ಅನಾರೋಗ್ಯದಿಂದಾಗಿ ಈ ಕಂಪನಿ ಬಹಳ ದಿನ ನಡೆಯಲಿಲ್ಲ. ೧೯೩೫ ರಲ್ಲಿ ಸಂಜೀವಮ್ಮ ಇಹಲೋಕ ತ್ಯಜಿಸಿದರು.

**೪) ವಜೀರಾಬಾಯಿ ಲಕ್ಷ್ಮೇಶ್ವರ (ವಜಿರಾಸಾನಿ):**

೧೯೨೨ ರ ಅಂತ್ಯದಲ್ಲಿ ವಾಮನರಾವ ಮಾಸ್ತರರ 'ವಿಶ್ವಗುಣಾದರ್ಶ' ಕಂಪನಿ ಧಾರವಾಡದಲ್ಲಿ 'ಸಂತ ಸಖೂಬಾಯಿ' ನಾಟಕವಾಡಿತು. ಸಖೂಬಾಯಿಯಾಗಿ – ಗಂಗೂಬಾಯಿ, ಮಾಧವನಾಗಿ, ವಾಮನರಾಯರ ಶೃಂಗಾರ ಜೋಡಿ ಪ್ರೇಕ್ಷಕರ ಮನಸೆಳೆಯಿತು. ಅದೇ ವೇಳೆಯಲ್ಲಿ ಗಂಗೂಬಾಯಿ ಕಂಪನಿ ಬಿಟ್ಟು ಹೋದರು. ಕಂಪನಿ ಮುಗ್ಗರಿಸುತ್ತಾ ಸಾಗತೊಡಗಿತು. ರಾಯರು ಕಂಪನಿ ಮುಚ್ಚಿ ಧಾರವಾಡದಲ್ಲಿಯೇ ನೆಲೆಸಿ ವಿಶ್ರಾಂತ ಜೀವನ ನಡೆಸಲು ಯೋಚಿಸಿದರು. ಆ ಸಮಯದಲ್ಲಿ ಲಕ್ಷ್ಮೇಶ್ವರದ ಸುಪ್ರಸಿದ್ಧ ಟಪ್ಪಾ ಪದ್ಧತಿ ಗಾಯಕಿ ವೃದ್ಧೆ ಬಚ್ಚಾಸಾನಿ ಅವರು ತಮ್ಮ ಮೊಮ್ಮಗಳು ವಜೀರಾಸಾನಿಯನ್ನು ಮಾಸ್ತರರಲ್ಲಿಗೆ ಕರೆದುಕೊಂಡು ಬಂದು ಆಕೆಗೆ ಸಂಗೀತ, ನಾಟಕ ಕಲೆ ಕಲಿಸಬೇಕೆಂದು ಕೇಳಿಕೊಂಡಳು.

ವಜೀರಾಗೆ ಆಗ ಹದಿನಾರರ ಪ್ರಾಯ. ಸೌಂದರ್ಯದ ಖಣಿಯಾಗಿದ್ದಳು. ಈ ಹುಡುಗಿ ತಮ್ಮ ಮಂಡಳಿಗೆ ಪ್ರವೇಶಮಾಡಿದ್ದು ದೈವಪ್ರೇರಣೆ ಇರಬೇಕೆಂದು ರಾಯರು ಭಾವಿಸಿದರು. "ಕೃಷ್ಣಲೀಲಾ" ನಾಟಕದಲ್ಲಿ 'ವಜೀರಾ' ರಾಧೆಯಾಗಿ ರಂಗಮಂಟಪದಲ್ಲಿ ಪಾದಾರ್ಪಣೆ ಮಾಡಿದಳು. 'ಭಕ್ತ ಪ್ರಹ್ಲಾದ'ದಲ್ಲಿ ಬಾಲನಟ ಮಲ್ಲಿಕಾರ್ಜುನ ಮನಸೂರ ಅವರ ಪ್ರಹ್ಲಾದನ ಪಾತ್ರ ವಜೀರಾಬಾಯಿಯ ಭೂದೇವಿಯ ಪಾತ್ರ ಸಮ್ಮೋಹಕವಾಗಿದ್ದವು. ಈಕೆಯ ಉತ್ತಮ ಅಭಿನಯ ಕಂಪನಿಯ ಯಶಸ್ಸು ಮತ್ತು ನಾಟಕಗಳ ಜಯಭೇರಿಗೆ ಕಾರಣವಾಯಿತು.

ವಜೀರಾಸಾನಿಯ ಪ್ರವೇಶದಿಂದ ನಾಟಕಕ್ಕೆ ಹೊಸದೊಂದು ರಂಗು ಬಂತು. ಮಾಸ್ತರರ ಹಿಂದಿನ ನಿರಾಶಾಭಾವ ಹೋಗಿ ಆಶಾವಾದಿತ್ವದಲ್ಲಿ ಕಂಪನಿ ಮುನ್ನಡೆಯಿತು. ಹೀಗೆ ವಿಶ್ವಗುಣಾದರ್ಶದಲ್ಲಿ ವಜೀರಾಸಾನಿ ಉತ್ತಮ ನಟಿಯಾಗಿ, ರಂಗಕಲಾ ಸೇವೆಯನ್ನು ಸಲ್ಲಿಸಿದ್ದು ಗೊತ್ತಾಗುತ್ತದೆ.

**ಇ: ಮಂಡಳಿಯ ವ್ಯವಸ್ಥೆ:**

ವಿಶ್ವಗುಣಾದರ್ಶ ನಾಟಕ ಮಂಡಳಿಯ ದಿನಚರಿ ನೋಡಿದವರು ವೃತ್ತಿರಂಗಭೂಮಿಯ ಬಗೆಗೆ ಗೌರವ ತಾಳುವಂತಾಯಿತು. ವಾಮನರಾಯರಿಗೆ 'ರಂಗಭೂಮಿಯು ಪವಿತ್ರ ದೇವಾಲಯ' ವಾಗಿತ್ತು. ಕಂಪನಿಯ ಕಲಾವಿದರು ಹಾಗೆಯೇ ನಂಬಿ ನಡೆಯಬೇಕೆಂಬ ನಿಯಮ ವಾಮನರಾಯರದು. ಪ್ರತಿದಿನ ಮುಂಜಾನೆ ಮತ್ತೆ ಸಂಜೆಯ ಹೊತ್ತಿನಲ್ಲಿ ರಂಗಮಂದಿರದ ತಾಲೀಮು ಸ್ಥಳದಲ್ಲಿ ಸಂಗೀತ ಸಾಧನೆ ತಪ್ಪದೆ ನಡೆಯುತ್ತಿತ್ತು. ಎಲ್ಲ ಕಲಾವಿದರು ಅದರಲ್ಲಿ ಪಾಲ್ಗೊಳ್ಳುತ್ತಿದ್ದರು. ಸಂಗೀತ ಮತ್ತು ಅಭಿನಯ ತರಬೇತಿಗೆ ವಾಮನರಾಯರೇ ಮಾಸ್ತರರು. ಕಲಾವಿದರಿಗೆ ತುಂಬ ಶ್ರದ್ಧೆಯಿಂದ ಕಲಿಸುತ್ತಿದ್ದರು. ವಿಶ್ವಗುಣಾದರ್ಶದಲ್ಲಿ ಬಾಲನಟರಾಗಿದ್ದು ಕಲಿತು ಮುಂದೆ ಪ್ರಖ್ಯಾತ ನಟರಾಗಿ ಬೆಳಗಿದ ಬಸವರಾಜ ಮನಸೂರ ಅವರು ಹೇಳುವ ಹಾಗೆ:

"ಗುರು ವಾಮನರಾಯರ ಕಂಪನಿಯಲ್ಲಿ ಎಲ್ಲವೂ ಅಚ್ಚುಕಟ್ಟು. ನಾಟಕದ ಪ್ರತಿಯೊಂದು ಪಾತ್ರವನ್ನು ಬಿಡಿ ಬಿಡಿಯಾಗಿ ತಿದ್ದುತ್ತಿದ್ದರು. ಹಾವ-ಭಾವ ಧ್ವನಿಯ ಏರಿಳಿತ, ಚಲನೆ, ಠೀವಿ ಎಲ್ಲವೂ ಅವರು ಕಲಿಸಿದಂತೆಯೇ ಬರಬೇಕು ಅವರ ದಿಗ್ದರ್ಶನದಲ್ಲಿ ಸಂಗೀತಕ್ಕೆ ಹೆಚ್ಚಿನ ಒತ್ತು ಬೀಳುತ್ತಿತ್ತು. ತಪ್ಪಿದರೆ ಹಿತಮಿತವಾಗಿ ಹೇಳಿಕೊಡುತ್ತಿದ್ದರು. ಮೃದುಭಾಷಿ ಸಂಗೀತದಲ್ಲಿಯೂ ಅಷ್ಟೇ. ಅದು ನಾಟ್ಯ ಸಂಗೀತವೆಂಬುದು ಅವರಿಗೆ ಗೊತ್ತಿತ್ತು. ಅವರವರ ಪಾತ್ರ ಸನ್ನಿವೇಶಗಳಿಗೆ ಒಪ್ಪುವ ಹಾಡು, ಉಚ್ಚಾರ ಸ್ಪಷ್ಟ, ಸ್ಫುಟವಾಗಿರಬೇಕು, ರಸಾಭಾಸವಾಗಿರಬಾರದು.

"ನಾಟಕ ಕಲೆ ಹೊಟ್ಟೆ ತುಂಬುವ ಸಾಧನವಲ್ಲ ಅದು ಜೀವಿತದ ಪರಮ ಶ್ರಮದಿಂದ ಉಳಿಯುತ್ತದೆ, ಅದು ಬೆಳೆಯುತ್ತದೆ. ಹೆಣ್ಣು, ಹೆಂಡದಂತಹ ದುಶ್ಚಟಗಳಿಗೆ ಬಲಿಯಾದರೆ ಕಲೆ ಒಲಿಯುವುದಿಲ್ಲ"[೫೨] ಎಂದು ವಾಮನರಾಯರು ದೃಢವಾಗಿ ನಂಬಿದ್ದರು. ಕಲಾವಿದರಿಗೆ ಅದನ್ನು ಮೇಲಿಂದ ಮೇಲೆ ಹೇಳಿ ಅವರಲ್ಲಿಯೂ ಆ ಭಾವ ಬೇರೂರುವಂತೆ ಮಾಡುತ್ತಿದ್ದರು. "ವಾಮನರಾಯರು ಧಾರ್ಮಿಕ ಮನೋವೃತ್ತಿಯವರಾಗಿದ್ದರು. ಬೆಳಗಿನ ನಿತ್ಯ ವಿಧಿಗಳನ್ನು ಮುಗಿಸಿ ಸ್ನಾನ ಸಂಧ್ಯಾವಂದನೆ ಮಾಡಿ, ದೇವರ ಪೂಜೆಗೆ ಕುಳಿತರೆ ಗಂಟೆಗಟ್ಟಲೆ ಸಮಯ ಬೇಕಾಗುತ್ತಿತ್ತು. ಶುಚಿರ್ಭೂತರಾಗಿ ರಂಗಭೂಮಿಗೆ ಬರುತ್ತಿದ್ದರು. ಎಲ್ಲ ನಟರಿಗೂ ಅದೇ ಆದೇಶ. ರಂಗದೇವತೆಯ ಪಾವಿತ್ರ್ಯ ಕಾಪಾಡುವುದು ಕಂಪನಿಯ ಜನರ ಜವಾಬ್ದಾರಿಯಾದುದರಿಂದ. ಪ್ರತಿಯೊಬ್ಬ ನಟರ ಮೇಲೂ ಸೂಕ್ಷ್ಮ ದೃಷ್ಟಿ ಇಡುತ್ತಿದ್ದರು. ಸ್ವಲ್ಪ ಹಾದಿ ತಪ್ಪಿದಂತೆನಿಸಿದರೂ ಸಾಕು ಕರೆದು ತಿಳಿ ಹೇಳುತ್ತಿದ್ದರು. ಮತ್ತೆ ಅವನ ಮೇಲೆ ನಿಗಾ ಇಡುತ್ತಿದ್ದರು. ಬಾರಿ ಬಾರಿ ಹೇಳಿದರೂ ತನ್ನ ಸ್ವಭಾವ ತಿದ್ದಿಕೊಳ್ಳದಿದ್ದರೆ ತಕ್ಷಣ ಅವನನ್ನು ಕರೆದು ಲೆಕ್ಕಾಚುಕ್ತಾ ಮಾಡಿ, ಗೇಟ ಪಾಸ್ ಕೊಡುತ್ತಿದ್ದರು ಕೆಲವು ವೇಳೆ ಅವರು ಕಠೋರವಾಗಿ ಕಾಣುತ್ತಿದ್ದರು. ಆದರೆ ಕಂಪನಿಯ ಶಿಸ್ತು, ಪರಿಶುದ್ಧತೆಗೆ ಅದು ಅನಿವಾರ್ಯವಾಗಿತ್ತು. ವ್ಯವಹಾರಕ್ಕೆ ಅದು

ಬೇಕೇ ಬೇಕು. ಅದರಿಂದಲೇ 'ವಿಶ್ವಗುಣಾದರ್ಶ' ದ ಮೇಲೆ ಯಾರೂ ಬೆರಳು ತೋರಿಸುತ್ತಿರಲಿಲ್ಲ"[೫೩]. ರಂಗಭೂಮಿ ಎಂಬುದು ನೀತಿಗೆಟ್ಟವರ ಕಲೆ ಎಂಬುದು ಕೆಟ್ಟ ಹೆಸರನ್ನು ಅಳಿಸಿ ಹಾಕಬೇಕಾದುದು ಅಂದಿನ ರಂಗಧುರೀಣರ ಆದ್ಯ ಕರ್ತವ್ಯವಾಗಿತ್ತು. ವಾಮನರಾಯರು ಅದನ್ನು ತ್ರಿಕರ್ಣ ಪೂರ್ವಕವಾಗಿ ಮಾಡಿದರು.

ಮಲ್ಲಿಕಾರ್ಜುನ ಮನಸೂರರು ಹೀಗೆ ಹೇಳುತ್ತಾರೆ ' ವಿಶ್ವಗುಣಾದರ್ಶ ಮಂಡಳಿಯು ಹೆಸರಿಗೆ ತಕ್ಕಂತೆ ಒಂದು ಆದರ್ಶ ಸಂಸ್ಥೆಯಗಿತ್ತು ಮಂಡಳಿಯ ಪ್ರತಿಯೊಬ್ಬ ಶಿಸ್ತು ಕಾಪಾಡಿಕೊಳ್ಳಬೇಕು. ಸುವ್ಯವಸ್ಥಿತವಾಗಿ ಹಾಗೂ ನಿಯಮಬದ್ಧವಾಗಿ ನಡೆದುಕೊಳ್ಳಬೇಕೆಂದು ವಾಮನರಾಯರು ಆಗ್ರಹದಿಂದ ಹೇಳುತ್ತಿದ್ದರು ಯಾರಾದರೂ ಸ್ವಲ್ಪ ಶಿಸ್ತು ಮೀರಿ ವರ್ತಿಸಿದರೆ ಸಿಡಿದೇಳುತ್ತಿದ್ದರು. ನಿತ್ಯವೂ ನಿಯಮಿತ ಸಮಯಕ್ಕೆ ಏಳಬೇಕು. ಸ್ನಾನಪೂಜೆ ಮುಗಿಸಿ ರಿಹರ್ಸಲ್ ಮಾಡಬೇಕು. ಊಟ ವಿಶ್ರಾಂತಿಯಾದ ನಂತರ ಸಂಜೆಗೆ ಗೊತ್ತುಪಡಿಸಿದ ಹೊತ್ತಿಗೆ ಸರಿಯಾಗಿ ನಾಟಕದ ಪರದೆ ಏಳಬೇಕು. ಇತ್ಯಾದಿ ಅವರು ಹಾಕಿಕೊಟ್ಟ ನಿಯಮಗಳು. ಈ ನಿತ್ಯಕ್ರಮದಲ್ಲಿ ವಿನಾಃಕಾರಣ ವ್ಯತ್ಯಾಸವಾದರೆ ಅವರ ಜೀವ ಚಡಪಡಿಸುತ್ತಿತ್ತು. ಅಭಿನಯವನ್ನೂ ಪರಿಣಾಮಕಾರಿಯಾದ ಸಂಭಾಷಣೆಗಳನ್ನೂ ಕಲೆಯುವುದರಲ್ಲಿ ಅವರು ತುಂಬ ಕುಶಲರು. ಅವರು ಹೇಳಿಕೊಟ್ಟಂತೆ ಕಲಿಯುವ ಕಲಾವಿದರ ಬಗ್ಗೆ ಅಭಿಮಾನ ಪಡುವವರು. ಕಂಪನಿಯಲ್ಲಿ ಪಾಂಢೋಬಾ ಮಾಸ್ತರ ಮತ್ತು ಸಂಗನಬಸಪ್ಪನೆಂಬುವರು ನನಗೆ ಪದಗಳನ್ನು ಕಲಿಸುತ್ತಿದ್ದರು. ನಾಟಕ ಕಂಪನಿಯಲ್ಲಿ ನಾನು ಅನಾಯಾಸವಾಗಿ ಅದೆಷ್ಟೋ ಮಹತ್ವದ ಪಾಠಗಳನ್ನು ಕಲಿತೆ. ಯಾರೋ ಬರೆದ ಸಂಭಾಷಣೆಗಳು ನನ್ನವೆಂದೇ ಭಾವಿಸಿ ನನ್ನ ಅಂತರಾಳದಿಂದ ಉತ್ಸ್ಫೂರ್ತವಾಗಿ ಮಾತಾಡಿ ನನಗೆ ಕೊಟ್ಟ ಪಾತ್ರಕ್ಕೆ ಸ್ವಾಭಾವಿಕ ಜೀವಕಳೆ ತುಂಬಬೇಕೆನ್ನುವ ಕಲೆಯನ್ನು ಆ ಕಂಪನಿಯಲ್ಲಯೇ ಅರಿತುಕೊಂಡೆ. ಹಾಗೆಯೇ ಬಾಯಿಪಾಠ ಮಾಡಿದ ಹಾಡುಗಳ ಮೂಲಕ ಸ್ತೋತ್ರುಗಳ ಹೃದಯವನ್ನು ಸ್ಪರ್ಶಿಸುವ ಹದವನ್ನೂ ಅರಿತುಕೊಂಡೆ"[೫೪].

ವಾಮನರಾಯರು ನಾಟಕ ಕಂಪನಿಯನ್ನು ವ್ಯವಹಾರದ ಮಾನದಂಡದಿಂದ ಮಾತ್ರ ನೋಡಲಿಲ್ಲ. ಅದೊಂದು ಅವಿಭಕ್ತ ಕುಟುಂಬದಂತೆ. ಕಂಪನಿಯಲ್ಲಿರುವ ಕಲಾವಿದರು ಕುಟುಂಬದ ಸದಸ್ಯರಂತೆ ನಡೆದುಕೊಳ್ಳಬೇಕು. ಪ್ರತಿಯೊಬ್ಬರ ಕಷ್ಟ-ಸುಖದಲ್ಲಿ ಪಾಲ್ಗೊಳ್ಳಬೇಕು ಇಲ್ಲಿ ಯಾರೂ ಮೇಲಲ್ಲ, ಯಾರೂ ಕೀಳಲ್ಲ ಪರಸ್ಪರ ಗೌರವ ಕಂಪನಿಯ ನಿಯಮವಾಗಿತ್ತು. ಕಲಾವಿದರು ದಿನಾಲು ಬೆಳಿಗ್ಗೆ ಎದ್ದು ರಂಗಮಂದಿರವನ್ನು ಸ್ವಚ್ಛಗೊಳಿಸಬೇಕು. ಸ್ನಾನ-ಪೂಜೆ ಮಾಡಿಕೊಳ್ಳಬೇಕು. ಆಮೇಲೆ ರಾಯರು ಹೇಳಿದ ಕಂಪನಿಗೆ ಸಂಬಂಧಿಸಿದ ಕೆಲಸಗಳನ್ನು ನಿಷ್ಠೆಯಿಂದ ಮಾಡಬೇಕು. ಸಂಗೀತ ಸಾಧನೆ ಮತ್ತು ನಾಟಕದ ರಿಹರ್ಸಲ್‌ಗಳಿಗೆ ಸರಿಯಾದ ಸಮಯಕ್ಕೆ ಹಾಜರಾಬೇಕು. ಈ ತರಹದ ಕಟ್ಟುನಿಟ್ಟಿನ ನಿಯಮಗಳಿಂದಾಗಿ ಕಲಾವಿದರೆಲ್ಲ ಇಡೀ ದಿನ ಕಂಪನಿ ಚಟುವಟಿಕೆಗಳಲ್ಲಿ ತೊಡಗುತ್ತಿದ್ದರು. ಒಂದು ಊರಿಗೆ ಕ್ಯಾಂಪ್

ಮಾಡುವಾಗ ಆಗಲಿ, ಕ್ಯಾಂಪ್ ಕೀಳುವಾಗ ಆಗಲಿ ರಂಗಪರಿಕರಗಳನ್ನೆಲ್ಲ ತೆಗೆಯುವ, ಜೋಡಿಸಿಡುವ, ಪ್ಯಾಕ್ ಮಾಡುವ ಎಲ್ಲ ಚಟುವಟಿಕೆಗಳಲ್ಲಿ ಕಲಾವಿದರು ಪಾಲ್ಗೊಳ್ಳಬೇಕೆಂಬುದು ರಾಯರ ಅಘೋಷಿತ ನಿಯಮವಾಗಿತ್ತು. ಸ್ವತಃ ತಾವೇ ಮುಂದಾಗಿ ಕೆಲಸ ಮಾಡುವಾಗ ಉಳಿದ ಕಲಾವಿದರಿಗೆ ನೋಡುತ್ತ ನಿಲ್ಲಲು ಸಾಧ್ಯವೇ? ಆಗಿನ ಕಾಲದ ಕಂಪನಿಗಳಲ್ಲಿ 'ವಿಶ್ವಗುಣಾದರ್ಶ'ವು ಸ್ವಾವಲಂಬಿ ಕಂಪನಿಯಂದೇ ಹೆಸರಾಗಿತ್ತು.

ಕಂಪನಿಯ ಬೋರ್ಡಿಂಗ್‌ದಲ್ಲಿ ಎಲ್ಲರಿಗೂ ಸಹಪಂಕ್ತಿ ಭೋಜನ. ಬೆಳಿಗ್ಗೆ ೯ ಗಂಟೆಗೆ ಉಪಹಾರ, ಮಧ್ಯಾಹ್ನ ೧ ಗಂಟೆಗೆ ಊಟ, ರಾತ್ರಿ ಕಲಾವಿದರಿಗೆ ಅನುಕೂಲವಾಗುವಂತೆ, ನಾಟಕಕ್ಕಿಂತ ಮೊದಲು, ಇಲ್ಲವೆ ನಾಟಕದ ನಂತರ ಊಟ ಮಾಡಬಹುದಿತ್ತು. ಕಲೆಕ್ಷನ್ ಚೆನ್ನಾಗಿ ಇದ್ದಾಗ ಎಲ್ಲರಿಗೂ ಸುಗ್ರಾಸ ಭೋಜನ. ಹಬ್ಬ ಹರಿದಿನಗಳಲ್ಲಿ ಹೋಳಿಗೆ ತುಪ್ಪದ ಸರಬರಾಜು ಆಗುತ್ತಿತ್ತು. ಪ್ರತಿ ತಿಂಗಳು ಕಂಪನಿಯಲ್ಲಿ ಸತ್ಯನಾರಾಯಣ ಪೂಜೆ ತಪ್ಪದೆ ನಡೆಯುತ್ತಿತ್ತು. ಕಲಾವಿದರೆಲ್ಲ ಪಾಲ್ಗೊಂಡು ಪ್ರಸಾದ ಸ್ವೀಕರಿಸಬೇಕೆಂಬ ಆಗ್ರಹದ ಆಮಂತ್ರಣವಿರುತ್ತಿತ್ತು. ವಾಮನರಾಯರ ಮನೆಯಲ್ಲಿಯ ಸದಸ್ಯರ ಹುಟ್ಟುಹಬ್ಬ, ಮದುವೆ ಮುಂಜಿವೆಯಂತಹ ಸಂದರ್ಭಗಳಿದ್ದರೆ ಅವುಗಳ ವಾರ್ಷಿಕೋತ್ಸವಗಳಿದ್ದರೆ ಕಂಪನಿಯ ಸದಸ್ಯರೊಂದಿಗೆ ಆಚರಿಸುತ್ತಿದ್ದರು. ಇದರಿಂದ ಕಂಪನಿಯಲ್ಲಿ ಸೌಹಾರ್ದ ವಾತಾವರಣ ನೆಲೆಸಿರಲು ಸಾಧ್ಯವಾಗುತ್ತಿತ್ತು.

ವಿಶ್ವಗುಣಾದರ್ಶ ಕಂಪನಿಯ ಮಾಲೀಕರಿಗೂ-ಕಲಾವಿದರಿಗೂ ಇದ್ದ ಅನೋನ್ಯ ಸಂಬಂಧದ ಒಂದು ಪ್ರಸಂಗವನ್ನು ಇಲ್ಲಿ ಪ್ರಸ್ತಾಪಿಸಬೇಕು: "ಒಂದು ದಿನ ಚನ್ನಪಟ್ಟಣ ಕ್ಯಾಂಪಿನಲ್ಲಿ ವಾಮನರಾಯರು ಎಲ್ಲ ನಟರನ್ನು ಸಭೆ ಕರೆದು "ನೀವು ಕಳೆದ ತಿಂಗಳಿನಿಂದ ಸಂಬಳ ಕಂಡಿಲ್ಲ. ನೀವು ನೀಡಿದ ಸಹಕಾರ ಎಂದಿಗೂ ಮರೆಯಲಾರೆ. ಇದೇ ರೀತಿ ಕಂಡ ಕಂಡಲ್ಲಿ ಸಾಲ ಮಾಡಿ ಕಂಪನಿ ನಡೆಸುವುದು ಸಾಧ್ಯವಿಲ್ಲ. ಹೆಂಡತಿಯ ಮೈಮೇಲೆ ಕೆಲವು ಬಂಗಾರ ಇದೆ ಅದನ್ನು ಮಾರಿ ನಿಮಗೆ ಕೊಡಬೇಕಾದ ಬಾಕಿ ಹಣ ತೀರಿಸುತ್ತೇನೆ. ನೀವು ಬೇಸರಿಸದೆ ನಿಮ್ಮ ನಿಮ್ಮ ಮನೆಗೆ ಹೋಗಿಬಿಡಿ, ಕಂಪನಿ ಮುಚ್ಚಿ ಬಿಡೋಣ" ಎಂದಾಗ ರಾಯರ ಕಂಠ ಗದ್ಗದವಾಯಿತು. ಆಗ ಎಲ್ಲರೂ ಏಕಕಂಠದಿಂದ "ಕಂಪನಿ ಮುಚ್ಚುವುದು ಬೇಡ, ನೀವು ಸಂಬಳ ಕೊಡದಿದ್ದರೂ ಸರಿ, ಕಂಪನಿ ನಡೆಸೋಣ" ಎಂದು ಧೈರ್ಯ ತುಂಬಿದರು[೫೫]. ಕಲಾವಿದರೆಲ್ಲ ಸೇರಿ ಕಂಪನಿ ಮಾಲೀಕರಿಗೆ ಹೀಗೆ ಹೇಳಿದ್ದು ವೃತ್ತಿರಂಗಭೂಮಿ ಚರಿತ್ರೆಯಲ್ಲಿಯೇ ಇದು ಮೊದಲಿನದಿರಬೇಕು. ವಾಮನರಾಯರು ಕಲಾವಿದರನ್ನು ಹೇಗೆ ನೋಡಿಕೊಳ್ಳುತ್ತಿದ್ದರು? ಅವರ ಕಷ್ಟಸುಖಗಳಲ್ಲಿ ಹೇಗೆ ಪಾಲ್ಗೊಳ್ಳುತ್ತಿದ್ದರೆಂಬುದಕ್ಕೆ ಮೇಲಿನ ಘಟನೆಯೇ ಒಂದು ನಿದರ್ಶನ.

ಕಲಾವಿದರ ಸಂಬಳ, ಬಡತಿ, ಹಿಂಬಡತಿ ಎಲ್ಲವೂ ನಾಟಕದ ಪ್ರಯೋಗವೇ ನಿರ್ಧರಿಸುತ್ತದೆಂಬುದು 'ವಿಶ್ವಗುಣಾದರ್ಶ' ಕಂಪನಿಯ ನಿಯಮವಾಗಿತ್ತು. ಸಂಗೀತದಲ್ಲಿ, ಅಭಿನಯದಲ್ಲಿ ಕೌಶಲ್ಯ ತೋರಿದವರಿಗೆ ಸಂಬಳದಲ್ಲಿ ಏರಿಕೆಯಾಗುತ್ತಿತ್ತು. ಕಲೆಯಲ್ಲಿ ಕೌಶಲ್ಯ ತೋರದವರಿಗೆ ಸಂಬಳದಲ್ಲಿ

ಇಳಿಕೆ ಆಗುತ್ತಿತ್ತು. ಪ್ರೇಕ್ಷಕರ ಪ್ರತಿಕ್ರಿಯೆ ಮತ್ತು ಸ್ವತಃ ವಾಮನರಾಯರ ನಿರೀಕ್ಷಣೆಯಿಂದ ಈ ರೀತಿಯ ಮೌಲ್ಯಮಾಪನ ನಡೆಯುತ್ತಿತ್ತು. ವಾಮನರಾಯರದು ಗುಣಕ್ಕೆ ಗೌರವ ಕೊಡುವ ವ್ಯಕ್ತಿತ್ವ. ಅವರು ಕಂಪನಿಗಿಟ್ಟ ಹೆಸರೇ 'ವಿಶ್ವಗುಣಾದರ್ಶ'. ಈ ಹೆಸರನ್ನು ಅವರು ಭೂಷಣಕ್ಕೆ ಇಟ್ಟಿರಲಿಲ್ಲ. ಅವರ ಸ್ವಭಾವವೇ ಹಾಗಿತ್ತು. ಸದಾ ಕಾಲ ಆದರ್ಶದ ಕನಸು ಕಾಣುತ್ತ, ಗುಣಕ್ಕೆ ಬೆಲೆ ಕೊಡುತ್ತಿದ್ದರು. ವಾಮನರಾಯರ ಕಾಲದ ಬಹುದೊಡ್ಡ ನಟ ಕೊಟ್ಟೂರು ಬಸಪ್ಪನವರು ತಮ್ಮ ಆತ್ಮಕಥೆಯಲ್ಲಿ ನೆನಪಿಸಿಕೊಂಡಿದ್ದು ಹೀಗೆ 'ಹ್ಞಾಂ........ ನೆನಪಾಯಿತು ನೋಡಿ ಗುಣಾದರ್ಶ......... ಅಲ್ಲಲ್ಲ....... ವಿಶ್ವ........ ಹ್ಞೂ..... "ವಿಶ್ವಗುಣಾದರ್ಶ ನಾಟಕ ಮಂಡಳಿ" ಅಂತ ಅದರ ಹೆಸರು ಮಾಸ್ತರರ ಸ್ವಭಾವಕ್ಕೆ ತಕ್ಕ ಹೆಸರು ಸ್ವಾಮೀ ಅವರ ಗುಣ, ಆದರ್ಶ ಎರಡೂ ಮೆಚ್ಚುವ ಹಾಗೇ ಇದ್ದವು. ಕಂಪನಿ ಸುರುವಾದ ವರ್ಷವೇ ಯುರೋಪಿನಲ್ಲಿ, ಜರ್ಮನಿ ಯುದ್ಧ ಹೂಡಿತು. ಭಾರಿ ಯುದ್ಧ. ಜಗತ್ತಿನ ಮೊದಲ ಮಹಾಯುದ್ಧ ಎಂದು ಈಗ ಕರೆಯುತ್ತಾರಲ್ಲ ಆ ಯುದ್ಧ'[೫೭]. ವಾಮನರಾಯರ ಚಾರಿತ್ರ್ಯದ ವ್ಯಕ್ತಿತ್ವ ಅವರ ರಂಗಬದ್ಧತೆಯು ಆಗಿನ ಕಾಲದ ರಂಗಾಸಕ್ತದಲ್ಲಿ ಹೇಗೆ ಅಚ್ಚೊತ್ತಿದ್ದವು ಎಂಬುದು ತಿಳಿದು ಬರುತ್ತದೆ.

ಕಂಪನಿಯ ಸಂವಿಧಾನವು ವಾಮನಯರಾಯರಿಂದಲೇ ರಚಿಸಲ್ಪಟ್ಟಿತ್ತು. ಅದು ಕಲಾವಿದರೆಲ್ಲರ ಹಿತಚಿಂತನೆ, ಕಂಪನಿಯ ಅಭಿವೃದ್ಧಿಯ ಆಶೆ ಹೊತ್ತು ರೂಪಗೊಂಡಿತ್ತು. ಅದರ ಆಡಳಿತವನ್ನು ನೋಡಿಕೊಳ್ಳಲು ಮ್ಯಾನೇಜರ್ ಇರುತ್ತಿದ್ದರು. ನರಸಪ್ಪ ದೇಸಾಯಿ ಬಹಳ ದಿನ ವಿಶ್ವಗುಣಾದರ್ಶದಲ್ಲಿ ಮ್ಯಾನೇಜರ್ ಆಗಿದ್ದರು. ಇವರು ವಾಮನರಾಯರಿಗೆ ಸಹಾಯಕರಾಗಿ, ಅವರ ಆದರ್ಶವನ್ನು ಅನುಸರಿಸುತ್ತಿದ್ದರು. ಬೇರೆ ಬೇರೆ ಸ್ಥಳಗಳಿಗೆ ಹೋದಾಗ ಅಲ್ಲಿಯ ಭಾಷೆ, ಅಧಿಕಾರಿ ವರ್ಗ, ಸ್ಥಳೀಯ ಸಮಸ್ಯೆಗಳನ್ನು ತಿಳಿದವರನ್ನು ಮ್ಯಾನೇಜರ್ ಎಂದು ತಾತ್ಕಾಲಿಕವಾಗಿ ನೇಮಿಸಿಕೊಳ್ಳುತ್ತಿದ್ದರು. ಪ್ರೇಕ್ಷಕರ ವಿಷಯದಲ್ಲಿ ವಾಮನರಾಯರು ತುಂಬ ಮೃದುಧೋರಣೆ. ಕೆಲವು ಗುಂಡಾಗಿರಿ ಹುಡುಗರು ಕಂಪನಿಗೆ ತೊಂದರೆ ಕೊಡಬೇಕೆಂಬ ಉದ್ದೇಶದಿಂದ ಏನೇನೋ ಕಿತಾಪತಿ ಮಾಡುತ್ತಿದ್ದರು. ವಾಮನರಾಯರಿಗೆ ಫಜೀತಿಯ ಪ್ರಸಂಗಗಳನ್ನು ನಿರ್ಮಿಸುತ್ತಿದ್ದರು ಅಂತಹ ಪ್ರಸಂಗಗಳನ್ನು ರಾಯರು ಅತ್ಯಂತ ಸಮತೋಲನ ಚಿತ್ತದಿಂದ, ತಾಳ್ಮೆಯಿಂದ ನಗುನಗುತ್ತಲೇ ಬಗೆಹರಿಸುತ್ತಿದ್ದರು. ಕಂಪನಿಯ ಸಾಮಾನು ಕಳುವು ಮಾಡಿದ ಗುಂಡಾಗಳೇ ರಾಯರ ಗುಣಕ್ಕೆ ಮಾರುಹೋಗಿ ಮತ್ತೆ ಮರಳಿಸಿದ ಘಟನೆಯೊಂದು ಬಳ್ಳಾರಿಯಲ್ಲಿ ನಡೆಯಿತು. ವಾಮನರಾಯರು ಅಜಾತಶತ್ರುವಿನಂತಿದ್ದರು. ಅವರನ್ನು ತಿಳಿಯದೆ ಕೆಲವರಿಂದ ಅಚಾತುರ್ಯ ಘಟನೆಗಳು ಜರುಗುತ್ತಿದ್ದವು. ರಾಯರ ಮನಸ್ಸು ಸ್ವಭಾವ ತಿಳಿದ ಮೇಲೆ ಮತ್ತೆ ಅವರೇ ಪಶ್ಚಾತ್ತಾಪಪಡುತ್ತಿದ್ದರು.

'ವಿಶ್ವಗುಣಾದರ್ಶ'ಕ್ಕಿಂತ ಮೊದಲು ರಂಗಭೂಮಿಯಲ್ಲಿ ಕೊಣ್ಣೂರು ಕಂಪನಿ ಇತ್ತು, ಶಿರಹಟ್ಟಿ ಕಂಪನಿ ಇತ್ತು, ಹಲಗೇರಿ ಕಂಪನಿ ಇತ್ತು. ಆಯಾ ಕಂಪನಿಗಳಿಗೆ ವೈಭವ, ವರ್ಚಸ್ಸು ಇತ್ತು ಕೊಣ್ಣೂರು ಕಂಪನಿ, ಶಿರಹಟ್ಟಿ ಕಂಪನಿಗಳು ಸಂಸ್ಥಾನಗಳ ಗತ್ತಿನಲ್ಲಿ ಸಂಚರಿಸುತ್ತಿದ್ದವು. ಅಷ್ಟೊಂದು ರಂಗಪರಿಕರ, ಕಲಾವಿದರ ಸಂಖ್ಯೆ ಹೆಚ್ಚಿತ್ತು. ಶಿರಹಟ್ಟಿ ಕಂಪನಿಯಂತೂ ರಂಗವೈಭವಕ್ಕೇ ಹೆಸರಾಗಿತ್ತು. ಆದರೆ ಈ ಕಂಪನಿಗಳ ಜೊತೆಯಲ್ಲಿಯೇ ನಾಟಕಗಳನ್ನಾಡುತ್ತ 'ವಿಶ್ವಗುಣಾದರ್ಶ'ವು ಬಂಡವಾಳದಿಂದಾಗಲಿ, ರಂಗಪರಿಕರಗಳ ವೈಭವದಿಂದಾಗಲಿ ಜನರನ್ನು ಆಕರ್ಷಿಸುತ್ತಿರಲಿಲ್ಲ. ಈ ಕಂಪನಿಯು, ಸಂಗೀತದಿಂದ, ಅಭಿನಯದಿಂದ ಮಿಗಿಲಾಗಿ ಕಲಾವಿದರ ಚಾರಿತ್ರ್ಯದಿಂದ ಪ್ರೇಕ್ಷಕರನ್ನು ಆಕರ್ಷಿಸುತ್ತಿತ್ತು. ಈ ಕಂಪನಿಯ ಸಂಸ್ಕಾರದಿಂದ ಅನೇಕ ಜನ ಕಲಾವಿದರು ತಮ್ಮ ರಂಗಭೂಮಿಯ ವ್ಯಕ್ತಿತ್ವವನ್ನು ರೂಪಿಸಿಕೊಂಡರು. ಬಾಲನಟರಾಗಿ ಈ ಕಂಪನಿಯನ್ನು ಪ್ರವೇಶಿಸಿದ ಬಸವರಾಜ ಮನಸೂರ ನಟಶೇಖರನಾಗಿ ಬೆಳೆದರು. ಮಲ್ಲಿಕಾರ್ಜುನ ಮನಸೂರ 'ಸ್ವರಸಾಮ್ರಾಟ'ರಾಗಿ ಬೆಳೆದರು. ಗಂಗೂಬಾಯಿ ಗುಳ್ಳೇದಗುಡ್ಡ 'ಗಾನರತ್ನ'ವಾಗಿ ಖ್ಯಾತರಾದರು. ಹೀಗೆ ಕನ್ನಡ ರಂಗಭೂಮಿಗೆ 'ವಿಶ್ವಗುಣಾದರ್ಶ ಕಂಪನಿ'ಯಿಂದ ಅನೇಕ ಅನರ್ಘ್ಯರತ್ನಗಳು ಸಂದವು. ಇದಕ್ಕೆಲ್ಲ ಕಾರಣರು ಕಂಪನಿ ಮಾಲೀಕರಾದ ವಾಮನರಾಯರು; ಅವರ ನಟನೆ, ಸಂಗೀತ, ನಾಟಕ ರಚನೆ, ಆಡಳಿತ–ಇವೆಲ್ಲವು ಅಂದಿನ ರಂಗಭೂಮಿಗೆ ಮಾದರಿಯಾಗಿದ್ದವು, ಅನುಕರಣೀಯವಾಗಿದ್ದವು. ಇಂಥ ಕಂಪನಿಯಿಂದಾಗಿ ರಂಗಭೂಮಿಯ ಬಗೆಗಿನ ಜನರ ದೃಷ್ಟಿಕೋನ ಬದಲಾಯಿತು ನಾಟಕವೆಂದರೆ ಗೌರವದಿಂದ ಕಾಣುವ ಕಣ್ಣು ಬಂದಿತು.

## ಅಡಿ ಟಿಪ್ಪಣಿಗಳು:

೧. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೧೪
೨. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೧೬
೩. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೧೬
೪. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೧೬
೫. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೧೭
೬. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೧೮
೭. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೨೨
೮. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೧೯
೯. ವಾಮನರಾವ ಮಾಸ್ತರ–ನಾಡಿಗೇರ ಕೃಷ್ಣರಾವ–ಎನ್ಕೆ – ಪು ೨೩
೧೦. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೨೦
೧೧. ನಟ ನಾಟಕಕಾರ ವಾಮನರಾಯ ಮಾಸ್ತರ–ಎನ್ಕೆ – ಪು ೨೩
೧೨. ವಾಮನರಾವ ಮಾಸ್ತರ–ನಾಡಿಗೇರ ಕೃಷ್ಣರಾವ–ಎನ್ಕೆ – ಪು ೨೪
೧೩. ವಾಮನರಾವ ಮಾಸ್ತರ–ನಾಡಿಗೇರ ಕೃಷ್ಣರಾವ–ಎನ್ಕೆ – ಪು ೨೫
೧೪. ವಾಮನರಾವ ಮಾಸ್ತರ–ನಾಡಿಗೇರ ಕೃಷ್ಣರಾವ–ಎನ್ಕೆ – ಪು ೩೫
೧೫. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೩೭
೧೬. ಸಂದರ್ಶನ: ಏಣಗಿ ಬಾಳಪ್ಪ– ಸ್ಥಳ: ಧಾರವಾಡ–೧೦–೫–೨೦೦೯
೧೭. ಸಂದರ್ಶನ: ಏಣಗಿ ಬಾಳಪ್ಪ– ಸ್ಥಳ: ಧಾರವಾಡ–೧೧–೫–೨೦೦೯
೧೮. ನಟ ನಾಟಕಕಾರ ವಾಮನರಾಯ ಮಾಸ್ತರ–ಎನ್ಕೆ – ಪು ೨೫
೧೯. ನಟ ನಾಟಕಕಾರ ವಾಮನರಾಯ ಮಾಸ್ತರ–ಎನ್ಕೆ – ಪು ೪೨
೨೦. ಚಿಗುರು ನೆನಪು–ನಟಶೇಖರ ಬಸವರಾಜ ಮನಸೂರ. ಆತ್ಮಕಥೆ. ನಿ: ಶಾ. ಮಂ ಕೃಷ್ಣರಾಯ. – ಪು ೨೩
೨೧. ಸಂದರ್ಶನ: ಏಣಗಿ ಬಾಳಪ್ಪ–ಸ್ಥಳ: ಧಾರವಾಡ– ೧೦–೫–೨೦೦೯
೨೨. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೪೮
೨೩. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೫೨
೨೪. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೫೨
೨೫. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೬೧
೨೬. ನಾಟಕ ಸಾರ್ವಭೌಮ–ಶಿರಹಟ್ಟಿ ವೆಂಕೋಬರಾಯರು. ಸದಾನಂದ ಕನವಳ್ಳಿ, ಪು
೨೭. ಚಿಗುರು ನೆನಪು–ನಟಶೇಖರ ಬಸವರಾಜ ಮನಸೂರ. ಆತ್ಮಕಥೆ. ನಿ: ಶಾ. ಮಂ ಕೃಷ್ಣರಾಯ. ಪು ೧೯
೨೮. ರಂಗ ಅಂತರಂಗ– ಕೊಟ್ಟೂರಪ್ಪನವರ ಆತ್ಮಕಥೆ. ಕಥನ ಕೆ. ಬಿ. ಪ್ರಭುಪ್ರಸಾದ–ಪು ೩೭
೨೯. ಅದೇ ಅದೇ ಪು ೧೦
೩೦. ಸಂದರ್ಶನ–ಡಾ॥ ರಾಮಕೃಷ್ಣ ಮರಾಠೆ –೨೪–೭–೨೦೧೦
೩೧. ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ಡಾ॥ ರಾಮಕೃಷ್ಣ ಮರಾಠೆ–ಪು ೨೫೮
೩೨. ನಟ ನಾಟಕಕಾರ ವಾಮನರಾವ ಮಾಸ್ತರ–ಎನ್ಕೆ – ಪು ೨೧
೩೧. ಅ) ಚಿಗುರು ನೆನಪು–ನಟಶೇಖರ ಬಸವರಾಜ ಮನಸೂರ. ಆತ್ಮಕಥೆ. ನಿ: ಶಾ. ಮಂ ಕೃಷ್ಣರಾಯ. ಪು ೧೬
೩೨. ಅ) ಸಂದರ್ಶನ ಏಣಗಿ ಬಾಳಪ್ಪ– ಸ್ಥಳ: ಧಾರವಾಡ ೧೧–೫–೨೦೦೯
೩೩. ಬಣ್ಣದ ಬದುಕಿನ ಚಿನ್ನದ ದಿನಗಳು– ಏಣಗಿ ಬಾಳಪ್ಪನವರ ಆತ್ಮಕಥೆ. ನಿ ಗಣೇಶ ಅಮೀನಗಡ. ಪು ೧೨೩
೩೪. ಉದ್ಧರಣೆ– ಎಸ್. ಎಸ್. ಬಸು ಪಟ್ಟೇದ– ಬೇಪೂರ ಬಾದಶಹ– ಪು ೧೬
೩೫. ಬಣ್ಣದ ಬದುಕಿನ ಚಿನ್ನದ ದಿನಗಳು– ಏಣಗಿ ಬಾಳಪ್ಪನವರ ಆತ್ಮಕಥೆ– ನಿ ಗಣೇಶ ಅಮೀನಗಡ–ಪು ೧೨೦

೩೬. ಬೇವೂರ ಬಾದಶಹಾ- ಎಸ್. ಎಸ್. ಬಸು ಪಟ್ಟೇದ- ಬೇವೂರ ಬಾದಶಹ-ಪು ೯

೩೭. ಅದೇ ಅದೇ ಪು ೨೭

೩೮. ನಟ ನಾಟಕಕಾರ ವಾಮನರಾವ ಮಾಸ್ತರ-ಎನ್ಕೆ ಪು ೨೭

೩೯. ನಟ ನಾಟಕಕಾರ ವಾಮನರಾವ ಮಾಸ್ತರರು-ಪು ೨೮

೪೦. ಚಿಗುರು ನೆನಪು-ನಟಶೇಖರ ಬಸವರಾಜ ಮನಸೂರ, ಆತ್ಮಕಥೆ-ನಿ: ಶಾ. ಮಂ ಕೃಷ್ಣರಾಯ, ಪು ೧೨

೪೧. ಏಣಗಿ ಬಾಳಪ್ಪ-ಸಂದರ್ಶನ-ಸ್ಥಳ: ಧಾರವಾಡ- ೧೦-೫-೨೦೦೯

೪೨. ಚಿಗುರು ನೆನಪು-ನಟಶೇಖರ ಬಸವರಾಜ ಮನಸೂರ, ಆತ್ಮಕಥೆ-ನಿ: ಶಾ. ಮಂ ಕೃಷ್ಣರಾಯ, ಪು ೨೧

೪೩. ನನ್ನ ರಸಯಾತ್ರೆ-ಮಲ್ಲಿಕಾರ್ಜುನ ಮನಸೂರ-ಪು ೧೯

೪೪. ಉತ್ತರ ಕರ್ನಾಟಕದ ರಂಗಸಂಗೀತ ವೈಭವ- ಪ್ರಧಾನ ಸಂ. ಏಣಗಿ ಬಾಳಪ್ಪ-ಪು ೫

೪೫. ಕೊಣ್ಣೂರು ನಾಟಕ ಕಂಪನಿ-ಡಾ॥ ರಾಮಕೃಷ್ಣ ಮರಾಠೆ - ಪು ೪೬

೪೬. ಉತ್ತರ ಕರ್ನಾಟಕದ ರಂಗಸಂಗೀತ ವೈಭವ - ಎನ್ಕೆ- ಪ್ರಧಾನ ಸಂ. ಏಣಗಿ ಬಾಳಪ್ಪ, ಪು ೧೦೧

೪೭. ಚಿಗುರು ನೆನಪು-ನಟಶೇಖರ ಬಸವರಾಜ ಮನಸೂರ, ಆತ್ಮಕಥೆ.-ನಿ: ಶಾ. ಮಂ ಕೃಷ್ಣರಾಯ, ಪು ೧೭

೪೮. ಚಿಗುರು ನೆನಪು-ನಟಶೇಖರ ಬಸವರಾಜ ಮನಸೂರ, ಆತ್ಮಕಥೆ, ನಿ: ಶಾ. ಮಂ ಕೃಷ್ಣರಾಯ, ಪು ೧೮

೪೯. ಉತ್ತರ ಕರ್ನಾಟಕದ ರಂಗಸಂಗೀತ ವೈಭವ - ಎನ್ಕೆ- ಪ್ರಧಾನ ಸಂ. ಏಣಗಿ ಬಾಳಪ್ಪ-ಪು ೯೯

೫೦. ಅದೇ ಅದೇ - ಪು ೯೯

೫೧. ಬಣ್ಣದ ಬದುಕಿನ ಚಿನ್ನದ ದಿನಗಳು- ಏಣಗಿ ಬಾಳಪ್ಪನವರ ಆತ್ಮಕಥನ - ಪು ೧೩೧

೫೨. ಚಿಗುರು ನೆನಪು-ನಟಶೇಖರ ಬಸವರಾಜ ಮನಸೂರ, ಆತ್ಮಕಥೆ, ನಿ: ಶಾ. ಮಂ ಕೃಷ್ಣರಾಯ.- ಪು ೧೩

೫೩. ಚಿಗುರು ನೆನಪು-ನಟಶೇಖರ ಬಸವರಾಜ ಮನಸೂರ, ಆತ್ಮಕಥೆ-ಶಾ. ಮಂ ಕೃಷ್ಣರಾಯ, ಪು ೧೯

೫೪. ನನ್ನ ರಸಯಾತ್ರೆ-ಮಲ್ಲಿಕಾರ್ಜುನ ಮನಸೂರ, ಪು ೨೨,

೫೫. ಚಿಗುರು ನೆನಪು-ನಟಶೇಖರ ಬಸವರಾಜ ಮನಸೂರರ, ಆತ್ಮಕಥೆ, ಪು ೩೧

೫೬. ರಂಗ ಅಂತರಂಗ-ಕೊಟ್ಟೂರಪ್ಪನವರ ಆತ್ಮಕಥೆ,ಕಥನ ಕೆ. ಬಿ. ಪ್ರಭುಪ್ರಸಾದ, ಪು ೪೮

# ಅಧ್ಯಾಯ - ಐದು

# ವಾಮನರಾವ ಮಾಸ್ತರ ಅವರ ನಾಟಕಗಳು

ಅ) ನಾಟಕಗಳು

ಆ) ಮೂಲ ಮರಾಠಿ ಮತ್ತು ಅನುವಾದ

ಇ) ನಾಟಕದ ಭಾಷೆ ಮತ್ತು ಶೈಲಿ

ಈ) ನಾಟಕಗಳು ಮತ್ತು ಸಂಗೀತ

## ಅಧ್ಯಾಯ- ಐದು

## ವಾಮನರಾವ ಮಾಸ್ತರ ಅವರ ನಾಟಕಗಳು

**ಪೀಠಿಕೆ:**

'ನಾಟಕ' ಎಂದರೆ ಸಾಹಿತ್ಯ ಕೃತಿಯೋ? ರಂಗಕೃತಿಯೋ? ಎಂಬುದರ ಬಗೆಗೆ ನಮ್ಮಲ್ಲಿ ಸಾಕಷ್ಟು ದೀರ್ಘವಾದ ಚರ್ಚೆ ಇದೆ. 'ನಾಟಕ' ಎಂಬ ಪದ ಎರಡೂ ಅರ್ಥದಲ್ಲಿ ಬಳಕೆಯಾಗುತ್ತಿರುವುದು ಇದಕ್ಕೆ ಕಾರಣ. ಮೂಲದಲ್ಲಿ ಅದು ರಂಗಕೃತಿಯಾಗಿಯೇ ಆಗಿತ್ತೆಂದೂ ಅನಂತರದಲ್ಲಿ ನಾಟಕದ ಸಾಹಿತ್ಯ ಕೃತಿಗೂ ಅದೇ ಹೆಸರು ಅನ್ವಯವಾಗಿ ಗೊಂದಲ ನಿರ್ಮಾಣವಾಯಿತೆಂದು ಗೊತ್ತಾಗುವುದು. ಆಧುನಿಕ ಸಂದರ್ಭದಲ್ಲಿ ಕಾವ್ಯ, ಕತೆ, ಕಾದಂಬರಿಗಳ ಹಾಗೆ ನಾಟಕವನ್ನು ಶುದ್ಧ ಸಾಹಿತ್ಯ ಪ್ರಕಾರವನ್ನಾಗಿ ಪರಿಗಣಿಸಿರುವದರಿಂದ ಈ ಗೊಂದಲ ಇನ್ನಷ್ಟು ಹೆಚ್ಚಾಯಿತು. ಇತ್ತೀಚೆಗೆ ಓದುವುದಕ್ಕಾಗಿಯೇ ನಾಟಕಗಳು ರಚನೆಯಾಗುತ್ತಿವೆ, ಆದರೆ ನಾಟಕದ ಈ ಉದ್ದೇಶ ಈಡೇರುವುದು ರಂಗಪ್ರಯೋಗದಲ್ಲಿ ಮಾತ್ರ ಎಂಬ ಮಾತು ಸುಳ್ಳಲ್ಲ. ಕಾವ್ಯ, ಕತೆ, ಕಾದಂಬರಿಗಳ ರಸಾನುಭವವು ಓದುವ, ಕೇಳಿ ಅಸ್ವಾದಿಸುವ ಕೆಲವೇ ಜನರಿಗೆ ಸೀಮಿತವಾದರೆ ನಾಟಕವು ಪ್ರದರ್ಶನದ ಮೂಲಕ ಜನಸಾಮಾನ್ಯರನ್ನೆಲ್ಲ ಸ್ಪಂದಿಸುವ ವಿಶಿಷ್ಟ ಗುಣವನ್ನು ಹೊಂದಿರುವುದು. ನಟರ ಅಭಿನಯ, ಭಾಷೆ, ರಂಗಪರಿಕರಗಳು, ಬಣ್ಣ-ಬೆಳಕು ಇತ್ಯಾದಿ ಅನೇಕ ಘಟಕಗಳನ್ನು ಒಂದುಗೂಡಿಸಿ ರಸಪಾಕವನ್ನು ಸಿದ್ಧಪಡಿಸುವ ಮತ್ತು ಪ್ರೇಕ್ಷಕರಿಗೆ ರಸಾನುಭವ ನೀಡುವ ರಂಗಭೂಮಿಯಲ್ಲಿ ಸಾಹಿತ್ಯವೇ ಮೂಲವೆಂದೂ ಅದಕ್ಕೆ ತಕ್ಕಂತೆ ಉಳಿದೆಲ್ಲ ಘಟಕಗಳು ನೆರವಾಗುತ್ತವೆಯೆಂದು ಹೇಳುವುದುಂಟು. ಒಟ್ಟಿನಲ್ಲಿ ರಂಗಭೂಮಿ ಒಂದು ಸಂಕೀರ್ಣ ಕಲೆಯಾಗಿರುವುದರಿಂದ ಇದರಲ್ಲಿ ಪಾಲ್ಗೊಳ್ಳುವ ಲಲಿತಕಲೆಗಳು ಯಾವ ರೀತಿಯಲ್ಲಿ, ಎಷ್ಟು ಪ್ರಮಾಣದಲ್ಲಿ ಭಾಗವಹಿಸುತ್ತವೆಯೆಂದು ನಿಖರವಾಗಿ ಹೇಳಲು ಬರುವುದಿಲ್ಲ. ಒಮ್ಮೆ ಆಂಗಿಕ, ಒಮ್ಮೆ ವಾಚಿಕ, ಒಮ್ಮೆ ಆಹಾರ್ಯ ಹೀಗೆ ಅಭಿನಯಚತುರ್ಥಗಳಲ್ಲಿ ಒಂದೊಂದು ಅಂಗಗಳು ಒಂದೊಂದು ಸಲ ಮೇಲುಗೈ ಸಾಧಿಸುತ್ತ ಬಂದಿರುವುದನ್ನು ರಂಗಭೂಮಿಯ ಪರಂಪರೆಯಲ್ಲಿ ಗಮನಿಸುತ್ತೇವೆ.

**ನಾಟಕ – ರಂಗಕೃತಿ**

ಅಭಿನಯಚತುರ್ಥ ಸಿದ್ಧಾಂತ ಅಸ್ತಿತ್ವಕ್ಕೆ ಬಂದುದರ ಹಿನ್ನಲೆಯನ್ನು ಡಾ. ಎಂ. ಎಂ. ಕಲಬುರ್ಗಿ ಅವರು ಹೀಗೆ ಗುರುತಿಸಿದ್ದಾರೆ. "ಕಲೆಯನ್ನು ಗ್ರಹಿಸುವ ಇಂದ್ರಿಯಗಳು ಎರಡು. ಕಿವಿ ಮತ್ತು ಕಣ್ಣು ಇವುಗಳಲ್ಲಿ ಮೂಲತಃ ಕಾವ್ಯವೆನ್ನುವುದು ಕಿವಿಯ ವಸ್ತುವಾದರೆ, ನಾಟಕವೆನ್ನುವುದು ಕಣ್ಣಿನ ವಸ್ತು. ಇದು ನಾಟಕದ ಇತಿಹಾಸದಲ್ಲಿ ಮೊದಲ ಘಟ್ಟ, ಸಾತ್ವಿಕ (ಭಾವಾಭಿನಯ), ಆಂಗಿಕ (ಅಂಗಾಂಗಗಳ ಚಲನವಲನ), ಆಹಾರ್ಯ (ವೇಷಭೂಷಣ, ರಂಗಸಜ್ಜಿಕೆ)ಗಳು ಮಾತ್ರ ನಾಟಕದ ಅಂಗಗಳಾಗಿದ್ದ ಕಾಲವಿದು.

ಹೀಗೆ ಕೇವಲ ಕಣ್ಣಿನ ವಸ್ತುವಾಗಿದ್ದ ನಾಟಕವು ಕಾಲಕ್ರಮದಲ್ಲಿ ಭಾಷೆಯೆಂಬ ಹೊಸ ಅಂಗವನ್ನು ಸೇರಿಸಿಕೊಂಡು, ಕಿವಿಯ ವಸ್ತುವೂ ಆಗಿ ವಿಸ್ತಾರ ಪಡೆಯಿತು. ಅಂದರೆ ಕಣ್ಣಿನ ವಸ್ತುವಾಗಿದ್ದ ನಾಟಕ ಈಗ ಏಕಕಾಲಕ್ಕೆ ಎರಡು ಇಂದ್ರಿಯಗಳಲ್ಲಿ – ಕಣ್ಣು ಮತ್ತು ಕಿವಿಗಳಲ್ಲಿ ಹಂಚಿಹೋಯಿತು. ಇದರಿಂದಾಗಿ ಪ್ರೇಕ್ಷಕನು (Spector) ಈಗ ಶ್ರೋತೃವೂ (Audience) ಆಗಬೇಕಾಯಿತು. ಇನ್ನೂ ನಿಖರವಾಗಿ ಹೇಳುವುದಾದರೆ ನಾಟಕ ಪ್ರದರ್ಶನದ ಸಂದರ್ಭದಲ್ಲಿ ಕಿವಿಯೂ ಮಹತ್ವ ಪಡೆದು ಕಣ್ಣಿನ ಮಹತ್ವ ಅಷ್ಟರಮಟ್ಟಿಗೆ ಕಡಿಮೆಯಾಯಿತು. ಈಗ ಸಾತ್ವಿಕ, ಆಂಗಿಕ, ಆಹಾರ್ಯಗಳ ಜೊತೆ ವಾಚಿಕವೂ (ಮಾತು–ಗೀತ) ಸೇರಿ "ಅಭಿನಯ ಚತುರ್ಥ ಸಿದ್ಧಾಂತ" ಅಸ್ತಿತ್ವಕ್ಕೆ ಬಂದಿತು. ಈ ಸಂದರ್ಭದಲ್ಲಿ ಉದ್ಭವಿಸಿದ ಒಂದು ವಿಶೇಷ ಅಂಶವೆಂದರೆ 'ಅಭಿನಯ'ದ ಸೂತ್ರದಾರ (ನಿರ್ದೇಶಕ) ನು 'ಭಾಷೆ'ಯ ಕವಿಯನ್ನು ಅವಲಂಬಿಸುವುದು ಅನಿವಾರ್ಯವಾಯಿತು. ಇದು ನಾಟಕದ ಇತಿಹಾಸದಲ್ಲಿ ಎರಡನೆಯ ಘಟ್ಟ.

ಈ ರೀತಿ "ಭಾಷಾಪಥ್ಯ" ಅಸ್ತಿತ್ವಕ್ಕೆ ಬಂದಾಗ ಯಕ್ಷಗಾನ ಪ್ರಸಂಗ (ತಾಳಮದ್ದಲೆ) ದಂತೆ ನಾಟಕ ಕೆಲವೊಮ್ಮೆ ಕೇವಲ ಕಿವಿಯ ವಸ್ತುವಾಗಿ ವ್ಯವಹರಿಸಿಕೊಂಡು. ಈಗ ಮೂಲದ ತನ್ನ ದೃಶ್ಯಪಾತಳಿಯನ್ನು ಬಿಟ್ಟುಕೊಟ್ಟು ಶ್ರವ್ಯಪಾತಳಿಗೆ ಇಳಿದುದು ನಾಟಕತ್ವದಲ್ಲಾದ ಬಹು ದೊಡ್ಡ ಪಲ್ಲಟವೇ ಸರಿ ಸಹಜವಾಗಿಯೆ ಈ ಅಭಿನಯದ ಮೇಲಿನ ಒತ್ತು ಇಡಿಯಾಗಿ ಭಾಷೆ – ಸಾಹಿತ್ಯಗಳ ಮೇಲೆ ಸರಿಯಿತು. ಇದನ್ನು ನಾಟಕದ ಬೆಳವಣಿಗೆಯಲ್ಲಿ ಮೂರನೆ ಘಟ್ಟವೆಂದು ಇಟ್ಟುಕೊಳ್ಳಬಹುದು.

ಕಾಲ ಗತಿಸಿದಂತೆ ಭಾಷೆ, ಅಕ್ಷರ ರೂಪಕ್ಕಿಳಿಯುವಲ್ಲಿ ಭಾಷಿಕವಾದ ನಾಟಕವು ಮಾತಿನ ಗುಣ ಕಳೆದುಕೊಂಡು ಓದುವ ಗುಣಕ್ಕೆ ತಿರುಗಿತು. ಈ ಮೊದಲು "ದೃಶ್ಯ"ದ ನೆಲೆಯಿಂದ "ಶ್ರವ್ಯ" ದ ನೆಲೆಗೆ ಸರಿದಿದ್ದ ಅದು, ಈಗ ಇವೆರಡರಿಂದಲೂ ಕಳಚಿಕೊಂಡು "ವಾಚನ" ನೆಲೆಗೆ ಬಂದು ನಿಂತಿತು. ಇದು ನಾಲ್ಕನೆಯ ಘಟ್ಟ.[೧]

ನಾಟಕವು ಪ್ರಯೋಗ ಪಾತಳಿಯಿಂದ ಕಾಲಾನುಕ್ರಮದಲ್ಲಿ ವಾಚನಪಾತಳಿಗೆ ಸರಿದು ಬಂದ ಸಂಗತಿಯನ್ನು ಮೇಲಿನ ವಿವರಣೆಯಿಂದ ಗೊತ್ತಾಗುತ್ತದೆ.

### ವೃತ್ತಿ ರಂಗನಾಟಕ

ವೃತ್ತಿ ರಂಗಭೂಮಿಯ ನಾಟಕಗಳು ಪ್ರಯೋಗವನ್ನೇ ಮುಖ್ಯ ಧ್ಯೇಯವಾಗಿಟ್ಟುಕೊಂಡು ರಚನೆಯಾದ ಕೃತಿಗಳು "ಯಾವುದೇ ವೃತ್ತಿರಂಗಭೂಮಿಯ ನಾಟಕಕ್ಕಂತೂ ತನ್ನ ಹಿತಾಸಕ್ತಿಗಿಂತ ತನ್ನ ರಂಗಭೂಮಿಯ ಹಿತಾಸಕ್ತಿಯೇ ಮುಖ್ಯ ಗುರಿಯಾಗಿರುತ್ತದೆ. ಹೀಗಾಗಿ ಆ ರಂಗಭೂಮಿಯ ಎಲ್ಲ ಅಂಗಗಳೊಂದಿಗೆ ಮತ್ತು ಅದರ ಒಟ್ಟು ಧೋರಣೆಗೆ ಹೊಂದಿಕೊಂಡು ದುಡಿಯುವ ಸಿದ್ಧತೆಯಲ್ಲಿಯೇ ಇಂಥ ನಾಟಕಗಳು ಹುಟ್ಟಿಕೊಳ್ಳುತ್ತವೆ. ರಂಗಭೂಮಿಯ ಒಂದು ಅಂಗವಾದ ಭಿನ್ನ ಭಿನ್ನ ವಯೋಮಟ್ಟದ, ಬುದ್ಧಿಮಟ್ಟದ ಪ್ರೇಕ್ಷಕ ಸಮುದಾಯವನ್ನು ಎದುರಿಸುವ, ತೃಪ್ತಿಪಡಿಸುವ ಜವಾಬ್ದಾರಿಯನ್ನು

ವೃತ್ತಿರಂಗಭೂಮಿಯ ನಾಟಕ ವಿಸ್ತರಿಸಿಕೊಳ್ಳಬೇಕಾಗುತ್ತದೆ ಹೀಗಾಗಿ ಸಾಹಿತ್ಯದ ಒಂದು ಪ್ರತ್ಯೇಕ ರೂಪವಾಗಿ ಕಾಣಿಸಿಕೊಳ್ಳುವ ನಾಟಕಕ್ಕಿಂತ ಕಷ್ಟದ ಜವಾಬ್ದಾರಿ ಇದರದು" ವೃತ್ತಿರಂಗಭೂಮಿಗಾಗಿ ನಾಟಕಗಳನ್ನು ಬರೆಯುವವರು ಆ ರಂಗಭೂಮಿಯ ಒಳಹೊರಗನ್ನು ತಿಳಿದಿರಬೇಕಾಗುತ್ತದೆ. ಅದರಲ್ಲಿಯೂ ಒಂದು ಕಂಪನಿಗಾಗಿ ನಾಟಕಗಳನ್ನು ರಚಿಸುವಾಗ ಅಲ್ಲಿದ್ದ ನಟವರ್ಗ, ಅಭಿನಯ ಸಾಮರ್ಥ್ಯ, ರಂಗಪರಿಕರಗಳ ಸೌಕರ್ಯ, ನಾಟಕ ನೋಡುವ ಪ್ರೇಕ್ಷಕರ ವರ್ಗದ ಅಭಿರುಚಿ ಇವನ್ನೆಲ್ಲ ಗಮನಿಸಿ ನಾಟಕವನ್ನು ಕಟ್ಟಿಕೊಡಬೇಕಾಗುತ್ತದೆ. ಒಂದು ಸಾಹಿತ್ಯ ಕೃತಿಯ ರಚನೆಗಿಂತಲೂ ಇದು ಬಹಳ ದೊಡ್ಡ ಜವಾಬ್ದಾರಿಯ ಕೆಲಸವೇ. ಇದನ್ನು ನಿಭಾಯಿಸಬೇಕಾದಾಗ ಸಾಹಿತ್ಯಾಂಶಗಳು ಒಂದಿಷ್ಟು ಕುಗ್ಗಲೂಬಹುದು. ಒಂದು ವೇಳೆ ಸಾಹಿತ್ಯಿಕವಾಗಿ ಶ್ರೇಷ್ಠ ಕೃತಿಯಾದರೂ ಪ್ರಯೋಗದ ಹಂತದಲ್ಲಿ, ರಂಗಬದ್ಧತೆಯಿಂದಾಗಿ ಇತರ ಕಲೆಗಳೊಂದಿಗೆ ಸಹಕರಿಸಬೇಕಾದಾಗ ಅದರ ಸಾಹಿತ್ಯವು ದುರ್ಬಲಗೊಳ್ಳುವುದು ಸಹಜ. ಇಂಥ ಸಂದರ್ಭದಲ್ಲಿ ರಂಗಕೃತಿಯನ್ನು ಮುಖ್ಯವಾಗಿಟ್ಟುಕೊಂಡು ಅದನ್ನು ವಿಮರ್ಶಿಸಬೇಕಾಗುವುದು, ಸಾಹಿತ್ಯಿಕ ಮಾನದಂಡಗಳಿಂದಲ್ಲ. ಸಾಹಿತ್ಯವನ್ನೇ ಮುಖ್ಯವಾಗಿರಿಸಿಕೊಂಡು ವಿಮರ್ಶಿಸುವ ಪದ್ಧತಿ ನಮ್ಮಲ್ಲಿ ಹೆಚ್ಚು. ಇದರಿಂದ ವೃತ್ತಿರಂಗಭೂಮಿಯ ನಾಟಕಗಳು ನಮ್ಮ ವಿಮರ್ಶಕರ ದೃಷ್ಟಿಯಲ್ಲಿ ಗಮನಾರ್ಹವೆನ್ನಿಸಲೇ ಇಲ್ಲ. ರಂಗಭೂಮಿಯಲ್ಲಿ ಮೆರೆದ ಸಾವಿರಾರು ಪ್ರಯೋಗಗಳನ್ನು ಕಂಡ ರಂಗಭೂಮಿಯ ನಾಟಕಗಳನ್ನು ಅಂದಂದಿನ ಸಾಂಸ್ಕೃತಿಕ, ಸಾಮಾಜಿಕ ಪರಿಸರದಲ್ಲಿಟ್ಟು ನೋಡಿದಾಗ ಅವುಗಳ ಮಹತ್ವ ಮನವರಿಕೆಯಾಗುವುದು. ಮುಖ್ಯವಾಗಿ ವೃತ್ತಿರಂಗದ ನಾಟಕಗಳನ್ನು ಪ್ರಯೋಗ, ಪರಿಣಾಮದ ನೆಲೆಯಿಂದ ನೋಡಿ ವಿಮರ್ಶಿಸಬೇಕು ಇಂಗ್ಲೆಂಡಿನಲ್ಲಿ ಶೇಕ್ಸಪಿಯರ್ ನಾಟಕಗಳನ್ನು ಸಾಹಿತ್ಯಿಕವಾಗಿ ವಿಮರ್ಶಿಸುವಂಥ ಒಂದು ಮಾರ್ಗವಿದ್ದರೆ, ರಂಗಪ್ರಯೋಗಕೃತಿಯಾಗಿ ವಿಮರ್ಶಿಸುವ ಮತ್ತೊಂದು ಮಾರ್ಗವಿದೆ. ಅವೆರಡೂ ಮಾರ್ಗಗಳು ನಾಟಕಗಳನ್ನು ಪ್ರತ್ಯೇಕವಾಗಿ ಮೌಲ್ಯಮಾಪನ ಮಾಡುತ್ತವೆ. ಅಂಥ ಒಂದು ರಂಗವಿಮರ್ಶೆ ಪದ್ಧತಿ ನಮ್ಮಲ್ಲಿ ಬೆಳೆಯದಿರುವುದರಿಂದ ವೃತ್ತಿರಂಗಭೂಮಿಯ ನಾಟಕಗಳಿಗೆ ಸಿಗಬೇಕಾದ ವಿಮರ್ಶೆಯ ಮಾನ, ಸನ್ಮಾನ ಸಿಗಲಿಲ್ಲವೆನ್ನಬೇಕು.

ವೃತ್ತಿರಂಗಭೂಮಿ ಒಂದು ಉದ್ಯಮವಾಗಿರುವುದರಿಂದ ಹಣ ಕೊಟ್ಟು ನೋಡುವ ಪ್ರೇಕ್ಷಕನಿಗೆ ಹೆಚ್ಚು ಪ್ರಾಧಾನ್ಯ (ವೃತ್ತಿರಂಗಭೂಮಿ ಮಾಲೀಕರು ಪ್ರೇಕ್ಷಕರನ್ನು 'ಅನ್ನದಾತರು' ಎಂದು ಕರೆಯುತ್ತಾರೆ. ನಾಟಕ ಮುಗಿಯುವುದಕ್ಕಿಂತ ಮೊದಲು, ಒಂದು ಸನ್ನಿವೇಶ ಉಳಿದಿರುವಾಗ. ಪ್ರೇಕ್ಷಕರನ್ನು ಉದ್ದೇಶಿಸಿ, ಅವರ ಸಹಾಯ ಸಹಕಾರ ಪ್ರೋತ್ಸಾಹವನ್ನು ಕೇಳಿಕೊಳ್ಳುವ ಒಂದು ಚಿಕ್ಕ ಮನವಿಸ್ವರೂಪದ ಭಾಷಣವಾಗುತ್ತದೆ. ಅದರುದ್ದಕ್ಕೂ ಪ್ರೇಕ್ಷಕನ ಗುಣಗಾನ, ಅವನ ಔದಾರ್ಯದ ಬಣ್ಣನೆ ಇರುತ್ತದೆ). ವೃತ್ತಿರಂಗದ ಪ್ರೇಕ್ಷಕ ಸರ್ವ ಸಾಮಾನ್ಯನಾಗಿರುವನು. ಅವನಿಗೆ ನಾಟಕ ರುಚಿಸಬೇಕು. ಸರಳವಾಗಿ ಅರ್ಥವಾಗಬೇಕು. ರಂಜನೆಯ ಜೊತೆಗೆ ನೀತಿಯೂ ಬೇಕು. ಸಮಕಾಲೀನ ಸನ್ನಿವೇಶದ ಚಿತ್ರವೂ ಇರಬೇಕು. ಈ ರೀತಿಯ ರಚನೆಯನ್ನು ವೃತ್ತಿರಂಗಭೂಮಿಯ ನಾಟಕಕಾರ ನಿರ್ವಹಿಸಬೇಕಾಗುವುದು.

ಪರಂಪರೆಯ ಧಾರ್ಮಿಕ ರಂಗಭೂಮಿಯ ಉದ್ದೇಶವನ್ನೇ ವೃತ್ತಿರಂಗಭೂಮಿಯು ಮುಂದುವರೆಸಿತು. ನಾಟಕಗಳಲ್ಲಿ ಧರ್ಮವನ್ನು ಹೇಳುವುದು, ನೀತಿಯನ್ನು ಬೋಧಿಸುವುದು, ಭಕ್ತಿಯನ್ನು ಪ್ರತಿಪಾದಿಸುವುದು ಮುಖ್ಯವಾಯಿತು. "ದುಷ್ಟರಿಗೆ ಶಿಕ್ಷೆ, ಶಿಷ್ಟರಿಗೆ ರಕ್ಷಣೆ" ಎಂಬ ಮೌಲ್ಯದ ಸರಳ ಪ್ರತಿಪಾದನೆ ವೃತ್ತಿರಂಗನಾಟಕಗಳ ಸ್ವರೂಪ. ಪೌರಾಣಿಕ ನಾಟಕಗಳು ಮಾತ್ರವಲ್ಲ ಸಾಮಾಜಿಕ ನಾಟಕಗಳೂ ಕ್ರಮೇಣ ಒಂದರ ಪಡಿಯಚ್ಚು ಮತ್ತೊಂದು ಎಂಬಂತೆ ಕಾಣಿಸತೊಡಗಿದವು. ಸಿದ್ಧ ಮಾದರಿಯ ಈ ದೋಷವನ್ನು ತಿದ್ದುವ ಬದಲು ನಮ್ಮ ಶುದ್ಧ ಸಾಹಿತ್ಯದ ಹಿನ್ನಲೆಯಿಂದ ಬಂದ ಕೆಲವು ನಾಟಕಕಾರರು ಕಂಪನಿ ನಾಟಕಗಳನ್ನು ಕಟುವಾಗಿ ಟೀಕಿಸತೊಡಗಿದರು. ಬಂಗಾಳದಲ್ಲಿ ಮತ್ತು ಮಹಾರಾಷ್ಟ್ರದಲ್ಲಿ ವಿದ್ಯಾವಂತರ ರಂಗಭೂಮಿ, ಅವಿದ್ಯಾವಂತರ ರಂಗಭೂಮಿ ಎಂದು ರಂಗಭೂಮಿಯನ್ನು ಭಾಗ ಮಾಡಲಿಲ್ಲ ಆದರೆ ನಮ್ಮಲ್ಲಿ 'ವಿದ್ವಾಂಸರು' 'ಶ್ರೇಷ್ಠರು' ಎನಿಸಿಕೊಂಡವರು ವೃತ್ತಿರಂಗಭೂಮಿಯನ್ನು ದೂರವಿರಿಸಿ ತಮ್ಮ ಹವ್ಯಾಸಕ್ಕಾಗಿ ಬೇರೆಯದೇ ಒಂದು ರಂಗಭೂಮಿಯನ್ನು ಹುಟ್ಟು ಹಾಕಲು ಮುಂದಾದರು. ಅದರಿಂದಾಗಿ ವೃತ್ತಿರಂಗಭೂಮಿಯ ಮಗ್ಗುಲಲ್ಲಿ ಹವ್ಯಾಸಿ ರಂಗಭೂಮಿ ಎಂಬುದು ವಿದ್ಯಾವಂತರ ಪ್ರತಿಷ್ಠೆಯ, ಕಸರತ್ತಿನ ಕಲೆಯಾಗಿ ವಿಜೃಂಭಿಸತೊಡಗಿತು. ಇವತ್ತಿಗೂ ವೃತ್ತಿರಂಗಭೂಮಿ-ಹವ್ಯಾಸಿ ರಂಗಭೂಮಿಗಳು ಎರಡು ಸರಳ ರೇಖೆಗಳಂತೆಯೇ ನಡೆದು ಬಂದಿರುವುದನ್ನು ಕಾಣುತ್ತೇವೆ, ಒಂದು ಕಾಲದಲ್ಲಿ ರೂಪಗೊಂಡಿದ್ದ ಕಲೆಯ ಶಿಸ್ತನ್ನು ಕಾಲ ಬದಲಾದಂತೆ ಬದಲಿಸಿಕೊಳ್ಳಬೇಕಾಗುತ್ತದೆ. ತಿಳಿದವರಾದರೂ ಅದನ್ನು ಉದ್ದೇಶಪೂರ್ವಕವಾಗಿ ನೆರವೇರಿಸಬೇಕಾಗುತ್ತದೆ. ಕರ್ನಾಟಕ ವೃತ್ತಿರಂಗಭೂಮಿಯನ್ನೇ ನಂಬಿ ನಿಂತಿದ್ದ ಹಳಬರು ಕಾಲಕ್ಕೆ ತಕ್ಕಂತೆ ವೃತ್ತಿರಂಗಭೂಮಿಗೆ ಹೊಸತನದ ದೀಕ್ಷೆ ಕೊಡಲಿಲ್ಲ. ಐವತ್ತು ವರುಷಗಳ ಹಿಂದೆ ಆಡಿದ್ದ ನಾಟಕಗಳನ್ನು ಆಡುತ್ತ, ಹಳೆಯ ಪ್ರೇಕ್ಷಕರಿಗೆ ಹೊಸ ಹೆಸರು ಹೇಳಿ ಅದೇ ನಾಟಕಗಳನ್ನು ತೋರಿಸುತ್ತ ಬಂದದ್ದು ವೃತ್ತಿರಂಗಭೂಮಿಯ ಹಿನ್ನಡೆಗೆ ಕಾರಣವಾಯಿತು. ಆದರೆ ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ವೃತ್ತಿರಂಗಭೂಮಿಯು ಸಾಧಿಸಿದ ಎತ್ತರ, ತೋರಿಸಿದ ಕಲೆಗಾರಿಕೆ ಮರೆಯಲಾಗದಂಥ ಕಥನ.

ಕನ್ನಡ ನಾಟಕ ಸಾಹಿತ್ಯದ ಚರಿತ್ರೆ ರೂಪಾಂತರ ಮತ್ತು ಭಾಷಾಂತರ ಕೃತಿಗಳಿಂದ ಪ್ರಾರಂಭವಾಗುತ್ತದೆ. ಆದರೆ ವೃತ್ತಿರಂಗಭೂಮಿ ಸಾಹಿತ್ಯದ ಚರಿತ್ರೆಯು ಸ್ವತಂತ್ರ ರಚನೆಗಳಿಂದ ಆರಂಭವಾಗುವುದು. ಹತ್ತೊಂಭತ್ತನೆಯ ಶತಮಾನದ ಕೊನೆಯಲ್ಲಿ ಪಾರಸಿ ಮತ್ತು ಮರಾಠಿ ನಾಟಕ ಕಂಪನಿಗಳು ಉತ್ತರ ಕರ್ನಾಟಕದಲ್ಲಿ ನಾಟಕಗಳನ್ನು ಪ್ರದರ್ಶಿಸಿದವು ಅವುಗಳ ಹೊಸತನಕ್ಕೆ ಮರುಳಾಗಿ ಇಲ್ಲಿಯ ಪ್ರೇಕ್ಷಕರು ಮರಾಠಿ ನಾಟಕಗಳನ್ನು ನೋಡುವ ಮತ್ತು ಮರಾಠಿ ರಂಗಗೀತೆಗಳನ್ನು ಕೇಳುವ ಹವ್ಯಾಸ ಬೆಳೆಸಿಕೊಂಡರು. ಇಲ್ಲಿ ಜನರಿಗೆ ಮರಾಠಿ ನಾಟಕಗಳ ಮೋಹ ವಿಪರೀತವಾಗಿ ಪರಿಣಮಿಸಿತು ಗದುಗಿನಲ್ಲಿ ಶಾಲಾ ಶಿಕ್ಷಕರಾಗಿದ್ದ ಸಕ್ಕರಿ ಬಾಳಾಚಾರ್ಯರು ಅಂದರೆ ಶಾಂತಕವಿಗಳು ಮರಾಠಿ ನಾಟಕಗಳ ಹೊಸತನ ಯಾವ ಸ್ವರೂಪದ್ದು ಎಂದು ಪರಿಶೀಲಿಸಿದರು.

**ನೆರೆ ಮಹಾರಾಷ್ಟ್ರದವರೀ ಭಾಗವತರ ಮಾ**

**ದರಿಗಳಂ ಕೊಂಡು ಅವುಗಳಲಿ ನಸು ತಿದ್ದುಪಡಿ**

**ವೆರಸಿ ತಬಲಾ ಝೂಂಜ, ಸೀನು ಪಡದಾ ವಿದೂಷಕ ಸೂತ್ರಧಾರ ಮೇಣು**

**ಕರಿವದನ ಶಾರದಾಗಮನ ಮಧ್ಯಮಗಾನ**

**ಕರವಾಲಗಳ ತಿರುಪು ನಯದ ಪೆಣ್ ಸೋಗು ಹಂ**

**ದರ ಥಿಯೇಟರುಗಳೊಡನಾಡಿ ನಾಟಕವೆಂದು ಗಳಿಸಿದರು ದ್ರವ್ಯವನ್ನು**

ಕನ್ನಡ ಬಯಲಾಟಗಳಿಂದ ಪ್ರೇರಣೆ ಪಡೆದು ಹುಟ್ಟಿಕೊಂಡ ಮರಾಠಿ ವೃತ್ತಿರಂಗಭೂಮಿಯು ಬಯಲಾಟಗಳಲ್ಲಿ ಸ್ವಲ್ಪ ಬದಲಾವಣೆ ಮಾಡಿಕೊಂಡು ಅವುಗಳನ್ನು ನಾಟಕಗಳೆಂದು ಪ್ರಯೋಗಿಸಿತು. ಮರಾಠಿ ವೃತ್ತಿರಂಗಭೂಮಿಯ ಪಿತಾಮಹ ಎಂದು ಹೆಸರಾದ ವಿಷ್ಣುದಾಸ ಭಾವೆ ಅವರ ಮೊದಲ ನಾಟಕ 'ಸೀತಾ ಸ್ವಯಂವರ' ಆಗಲಿ ಮರಾಠಿ ಸಂಗೀತ ನಾಟಕಗಳ ನೇತಾರನೆಂದು ಕರೆಯಿಸಿಕೊಳ್ಳುವ ಅಣ್ಣಾಸಾಹೇಬ ಕಿರ್ಲೋಸ್ಕರ ಅವರ 'ಶಾಕುಂತಲ', 'ಸಂಗೀತ ಸೌಭದ್ರ' ನಾಟಕಗಳಾಗಲೀ ಕರ್ನಾಟಕದ ಯಕ್ಷಗಾನ, ಶ್ರೀಕೃಷ್ಣ ಪಾರಿಜಾತ ಕೃತಿಗಳಿಂದ ಪ್ರಭಾವಿತವಾಗಿದ್ದವು. ಇವುಗಳಲ್ಲಿಯೇ ಅನೇಕ ಅಂಶಗಳನ್ನು ಅವರ ಕೃತಿಗಳು ಸ್ವೀಕರಿಸಿದ್ದವು. ಈ ಕುರಿತು ನಡೆದ ಅಧ್ಯಯನವು ಗಮನಾರ್ಹವಾಗಿದೆ.[೨]

ಮರಾಠಿ ನಾಟಕಗಳ ಈ ಹೊಸತನದ ಹೂರಣ ಶಾಂತಕವಿಗಳಿಗೆ ಚೆನ್ನಾಗಿ ಗೊತ್ತಿತ್ತು. ಅವರು ನಾಟಕ ಸಾಹಿತ್ಯಕ್ಕಾಗಿ ಅತ್ತ ಇತ್ತ ನೋಡದೆ ಇಲ್ಲಿರುವ ಬಯಲಾಟಗಳಿಗೆ ನಾಟಕದ ದೀಕ್ಷೆ ಕೊಟ್ಟರು. ಅವರ ಮೊದಲ ನಾಟಕ 'ಉಷಾಹರಣ' ಆಮೇಲೆ ಬರೆದ ವತ್ಸಲಾಹರಣ, ಸೀತಾರಣ್ಯ ಪ್ರವೇಶ, ಕೀಚಕವಧೆ, ಚಂದ್ರಾವಳಿ, ಸುಂದೋಪಸುಂದ ವಧೆ ಇತ್ಯಾದಿ ಪೌರಾಣಿಕ ನಾಟಕಗಳು ಬಯಲಾಟದ ಆಧುನಿಕ ರೂಪಗಳಾಗಿವೆ. ನಾಟಕದ ಆರಂಭ, ಪ್ರಸ್ತುತಿ, ಪಾತ್ರಚಿತ್ರಣ, ಸಂಭಾಷಣೆ, ಸಂಗೀತ ಇವೆಲ್ಲವೂ ಬಯಲಾಟ ಸ್ವರೂಪಕ್ಕೆ 'ಹಲಸಿಕಂಪನಿ'ಗಾಗಿ ಶ್ರೀನಿವಾಸ ಕವಿಗಳು ಬರೆದ ಶ್ರೀಮತಿ ಪರಿಣಯ, ಮದಾಲಸಾ ಪರಿಣಯ, ಭೌಮಾಸುರವಧೆ ನಾಟಕಗಳು ಕೂಡ ಇದೇ ಮಾದರಿಯಲ್ಲಿದ್ದವು. ಕ್ರಿ.ಶ. ಸುಮಾರು ೧೯೦೦ ವೇಳೆಗೆ 'ಕೊಣ್ಣೂರ ನಾಟಕ ಕಂಪನಿ' ಅಸ್ತಿತ್ವಕ್ಕೆ ಬರಲು ಮರಾಠಿಯ ಪ್ರಸಿದ್ಧ ಹಾಗೂ ಜನಪ್ರಿಯ ನಾಟಕಗಳ ಅನುವಾದಕಾರ್ಯ ಪ್ರಾರಂಭವಾಯಿತು. ಮೈಸೂರಿನಲ್ಲಿರುವ 'ಅರಮನೆ ಕಂಪನಿ'ಗಾಗಿ ಅರಮನೆಯ ವಿದ್ವಾಂಸರು ಸಂಸ್ಕೃತ ನಾಟಕಗಳನ್ನು ಅನುವಾದಿಸಿದರು. ಇಪ್ಪತ್ತನೆಯ ಶತಮಾನದ ಮೊದಲ ಎರಡು ದಶಕಗಳ ಅವಧಿಯಲ್ಲಿ ಪೌರಾಣಿಕ ನಾಟಕಗಳು ಸಂಭ್ರಮಿಸಿದವು.

ಶಾಂತಕವಿಗಳ ಪ್ರಯತ್ನದಿಂದ ಉತ್ತರ ಕರ್ನಾಟಕದಲ್ಲಿ ಕನ್ನಡ ನಾಟಕ ಕಂಪನಿಗಳು ತಲೆಯೆತ್ತಿದವು. ಅವು ಮರಾಠಿ ನಾಟಕ ಕಂಪನಿಗಳ ಎದುರು ತಮ್ಮ ಜನಾನುರಾಗವನ್ನು ಸಾಬೀತು ಮಾಡಬೇಕಾಗಿತ್ತು. ಅದಕ್ಕಾಗಿ ಮರಾಠೀ ನಾಟಕಗಳನ್ನೇ ಭಾಷಾಂತರಿಸಿ ಅದ್ದೂರಿಯಾಗಿ ಪ್ರದರ್ಶಿಸುವ

ಪ್ರಯತ್ನಗಳು ನಡೆದವು. ಕೊಣ್ಣೂರು ನಾಟಕ ಕಂಪನಿಯು ಇಂಥ ಪ್ರಯತ್ನವನ್ನು ಅತ್ಯಂತ ಉತ್ಸಾಹದಿಂದಲೇ ಕೈಗೊಂಡಿತು. ಮಹಾರಾಷ್ಟ್ರದ 'ಕಿರ್ಲೋಸ್ಕರ್ ಕಂಪನಿ'ಯ ಜನಪ್ರಿಯ ನಾಟಕಗಳನ್ನು ಅನುವಾದಿಸಿ, ಪ್ರಯೋಗಿಸುವ ಚಟುವಟಿಕೆಗಳು ಈ ಕಂಪನಿಯಲ್ಲಿ ನಡೆದವು. ಸಂಗೀತ ಸೌಭದ್ರ, ಮೃಚ್ಛಕಟಿಕ, ಶಾಪಸಂಭ್ರಮ ನಾಟಕಗಳನ್ನು ಗರುಡ ಸದಾಶಿವರಾಯರಿಂದ ಅನುವಾದಿಸಿ ಆಡಿದ್ದು ಈ ಕಂಪನಿಯ ಹಿರಿಮೆ. ಇದಾದ ಮೇಲೆ ಅನೇಕ ಮರಾಠಿ ನಾಟಕಗಳನ್ನು ಅನುವಾದಿಸಿ 'ವಿಶ್ವಗುಣಾದರ್ಶ ಕಂಪನಿ'ಯ ಮೂಲಕ ಪ್ರಯೋಗಿಸಿದ ಶ್ರೇಯಸ್ಸು ವಾಮನರಾವ ಮಾಸ್ತರ ಅವರದು. ೧೯೧೭ ರಿಂದ ೧೯೩೦ ರವರೆಗೆ ಒಂಭತ್ತು ಮರಾಠಿ ನಾಟಕಗಳನ್ನು ಅನುವಾದಿಸಿದ್ದು, ಅವರ ಪ್ರಕಟಿತ ನಾಟಕಗಳ ಪಟ್ಟಿಯಿಂದ ತಿಳಿದುಬರುತ್ತದೆ. ಅವರು ಅನುವಾದಿಸಿದ ನಾಟಕಗಳೆಲ್ಲ ಮರಾಠಿಯ ಸುಪ್ರಸಿದ್ಧ ಸಂಗೀತ ನಾಟಕಗಳು. ಪೌರಾಣಿಕ, ಭಕ್ತಿಪ್ರಧಾನ, ಐತಿಹಾಸಿಕ ಮತ್ತು ಸಾಮಾಜಿಕ ವಸ್ತುವಿನ ನಾಟಕಗಳನ್ನು ಕನ್ನಡ ಜಾಯಮಾನಕ್ಕೆ ತಕ್ಕಂತೆ ಭಾವಪೂರ್ಣವಾಗಿ ಅನುವಾದಿಸಿ, ಅಭಿನಯಿಸಿ ಕನ್ನಡ ವೃತ್ತಿರಂಗಭೂಮಿಯಲ್ಲಿ ಸಂಗೀತದ ರಸಧಾರೆಯನ್ನು ಹರಿಸಿದರು. ಅವರು ಅನುವಾದಿಸಿ ಪ್ರಯೋಗಿಸಿದ ನಾಟಕಗಳನ್ನು ಅವರ ನಿಧನದ ನಂತರ ಅವರ ಪುತ್ರ ವೆಂಕಟರಾವ್ ವಾಮನರಾವ್ ಸವಣೂರ ಅವರು 'ವಿಶ್ವಗುಣಾದರ್ಶ ಪ್ರಕಾಶನ ಸಮಿತಿ, ಧಾರವಾಡ' ದಿಂದ ಪ್ರಕಟಿಸಿದರು. ಇತ್ತೀಚೆಗೆ ಧಾರವಾಡದ ಪ್ರಸಿದ್ಧ ಪ್ರಕಾಶನ ಸಂಸ್ಥೆಯಾದ ಮನೋಹರ ಗ್ರಂಥಮಾಲಾ, 'ಸವಣೂರ ವಾಮನರಾವ ಸಮಗ್ರ ನಾಟಕ ಸಂಪುಟ' ೨೦೧೧. ಪ್ರಕಟಿಸಿದೆ ಇದರಲ್ಲಿ ವಾಮನರಾವ ಮಾಸ್ತರರು ಮರಾಠಿಯಿಂದ ಕನ್ನಡಕ್ಕೆ ಅನುವಾದಿಸಿದ ಏಳು ನಾಟಕಗಳು ಮತ್ತು 'ಭಕ್ತ ಪ್ರಹ್ಲಾದ' ಎಂಬ ಸ್ವತಂತ್ರ ನಾಟಕ ಸೇರಿದೆ. ಒಟ್ಟು ಎಂಟು ನಾಟಕಗಳಿವೆ. ೭೬೬ ಪುಟಗಳ ಈ ಹೆಬ್ಬೊತ್ತಿಗೆಯು ನಾಟಕ ಸಾಹಿತ್ಯದ ಅಭ್ಯಾಸಿಗಳಿಗೆ ಆಕರ ಗ್ರಂಥವಾಗಿದೆ. ಇದನ್ನು ಡಾ॥ ರಮಾಕಾಂತ ಜೋಶಿ ಅವರು ಸಂಪಾದಿಸಿದ್ದಾರೆ. ಉತ್ತಮ ಗುಣಮಟ್ಟದ ಕಾಗದ, ಸುಂದರ ಮುದ್ರಣ, ಆಕರ್ಷಕ ಮುಖಪುಟ ಹೊತ್ತು ಹೊರಬಂದ ಈ ಸಂಪುಟವು ವಾಮನರಾವ ಮಾಸ್ತರರ ರಂಗಸೇವೆಗೆ ಸಲ್ಲಿಸಿದ ಗೌರವವೆನ್ನಬೇಕು.

ವಾಮನರಾವ ಮಾಸ್ತರರ ನಾಟಕಗಳು ಹಲವಾರು ಕಾರಣಗಳಿಂದ ಅಧ್ಯಯನಯೋಗ್ಯವಾಗಿವೆ. ನಾಟಕಗಳ ಸಾಹಿತ್ಯಗುಣ, ಪ್ರಯೋಗಗುಣ, ಅನುವಾದ ಮತ್ತು ಸಂಗೀತಗುಣಗಳಿಂದ ಅವು ಅಭ್ಯಾಸಯೋಗ್ಯವಾಗಿವೆ. ನಾನು ಮಹಾಪ್ರಬಂಧದ ಬರವಣಿಗೆ ಮುಗಿಸುತ್ತಿರುವ ಸಂದರ್ಭದಲ್ಲಿ ಈ ನಾಟಕ ಸಂಪುಟ ಪ್ರಕಟವಾಯಿತು. ಕಾರಣ ವಿಶ್ವಗುಣಾದರ್ಶ ಪ್ರಕಾಶನ ಸಂಸ್ಥೆಯಿಂದ ಈ ಹಿಂದೆಯೇ ಪ್ರಕಟವಾಗಿದ್ದ ನಾಟಕ ಕೃತಿಗಳನ್ನು ಅಧ್ಯಯನಕ್ಕೆ ಬಳಸಿಕೊಂಡಿರುವೆ. ವಾಮನರಾವ ಮಾಸ್ತರರ ನಾಟಕಗಳ ಕಥೆಯನ್ನು ಪರಿಚಯಿಸುವ ಪ್ರಯತ್ನ ಮುಂದಿನ ಬರಹದಲ್ಲಿದೆ.

## ಅ: ನಾಟಕಗಳು

### ೧: ಪಾರ್ವತೀ ಸತ್ವಪರೀಕ್ಷೆ

'ಮಹಾನಂದಾ' ಹೆಸರಿನ ಮರಾಠಿ ಸಂಗೀತ ನಾಟಕದ ಕನ್ನಡ ಅನುವಾದವಿದು. ವಾಸುದೇವ ನೀಲಕಂಠ ಆಗಟೆಯವರು ಬರೆದ ಮತ್ತು ಅವರೇ ಸಂಗೀತ ಸಂಯೋಜಿಸಿದ ಈ ನಾಟಕವು ೧೯೧೫ ರಲ್ಲಿ ಮರಾಠಿ ರಂಗದ ಮೇಲೆ ಬಂದಿತು. ಜನಪ್ರಿಯವೂ ಆಯಿತು. ಇದೊಂದು ಶಿವಲೀಲಾಮೃತದಿಂದ ಆಯ್ದುಕೊಂಡ ಕಥಾನಕ. ಸವತಿಮತ್ಸರದಿಂದ ಜಗಳಾಡುತ್ತಿದ್ದ ಗಿರಿಜೆ ಮತ್ತು ಗಂಗೆ ಶಿವನ ಶಾಪಕ್ಕೆ ಗುರಿಯಾಗುವರು. ಪರಿಣಾಮವಾಗಿ ಭೂಲೋಕದಲ್ಲಿ ಮಹಾನಂದಾ, ಸದಾನಂದಾ ಹೆಸರಿನಿಂದ ವೇಶ್ಯೆಯರಾಗಿ ಜನಿಸುವರು. ದೇವೇಂದ್ರನು ಮಹಾನಂದೆಯ ರೂಪಕ್ಕೆ ಮರುಳಾಗುವನು. ಅವಳನ್ನು ಬಯಸಿ ಭೂಲೋಕಕ್ಕೆ ಬಂದು ಅನೇಕ ಕಷ್ಟಗಳನ್ನು ಎದುರಿಸುವನು. ಕೊನೆಗೆ ಶಿವನು ಪಾರ್ವತಿಯ ಸತ್ವಪರೀಕ್ಷೆ ಮಾಡಿ ಉದ್ಧರಿಸುವನು. ಕನ್ನಡದಲ್ಲಿ 'ಪಾರ್ವತೀ ಸತ್ವಪರೀಕ್ಷೆ' ಹೆಸರಿನಿಂದ ವಾಮನರಾಯರು ಅನುವಾದಿಸಿರುವರು ವಿಶ್ವಗುಣಾದರ್ಶ ಕಂಪನಿಯಿಂದ ಈ ನಾಟಕ ಜನಪ್ರಿಯವಾಯಿತು.

ನಂದಿಗ್ರಾಮದ ಶಿವದೇವಾಲಯದಲ್ಲಿ ಮಹಾನಂದೆ ಪೂಜಾನಿರತಳಾಗಿರುತ್ತಾಳೆ. ಅಲ್ಲಿಗೆ ಬಂದ ರಂಭೆಯು ಮಹಾನಂದೆಗೆ 'ನಾವು ರಾಜವಿಲಾಸಿ ಭಕ್ತರು. ನಮ್ಮಂತಹವರು ಭೋಳೇಶಂಕರನಿಗೆ ಪೂಜಿಸುವುದು ತರವಲ್ಲ.' ಎನ್ನುತ್ತಾಳೆ ಮಹಾನಂದೆಯು 'ವಿಷ್ಣುವಿಗಿಂತಲೂ ಶಂಕರನ ಜ್ಞಾನ ಅಗಾಧವಾಗಿದೆ. ಸರ್ವದೇವತೆಗಳ ಐಶ್ವರ್ಯವು ನಶ್ವರವಾದುದು ಆದರೆ ಶಂಕರನ ಸಂಪತ್ತು ಶಾಶ್ವತವಾದುದು; ಅದುವೇ ನನ್ನ ಸರ್ವಸ್ವ' ಎಂದು ತನ್ನ ದೃಢ ಭಕ್ತಿಯನ್ನು ವ್ಯಕ್ತಪಡಿಸುವಳು. ಅಲ್ಲಿಗೆ ಬ್ರಹ್ಮಾನಂದನ ಪ್ರವೇಶವಾಗುತ್ತದೆ. ಗಾಂಧರ್ವ ವಿವಾಹದ ಮಾತುಕತೆ ನಡೆಯುತ್ತದೆ. ಸದಾನಂದೆಯು 'ನಾವು ಯೋಗ್ಯತೆಯಲ್ಲಿ ಹರಿಶ್ಚಂದ್ರನಿಗೆ ಸಮ. ಅವನು ಒಂದು ಸಲ ದೇಹವಿಕ್ರಯ ಮಾಡಿಕೊಂಡರೆ ನಾವು ನಮ್ಮ ದೇಹವನ್ನು ದಿನಾಲೂ ವಿಕ್ರಯ ಮಾಡಿಕೊಳ್ಳುತ್ತೇವೆ' ಎಂದು ನುಡಿದಾಗ, ಮಹಾನಂದೆಯು 'ನಾವು ಅಂತಹವರಿಗೆ ಸಮಾನರಲ್ಲ, ಪರಂಪರಾಗತವಾಗಿ ನಡೆಯುತ್ತ ಬಂದ ಅಪವಿತ್ರ ಕುಲಕಸುಬನ್ನು ತ್ಯಜಿಸಬೇಕು ವಾರಾಂಗನೆಯರ ಜನ್ಮಕ್ಕೆ ಧಿಕ್ಕಾರವಿರಲಿ, ನಾವು ಕುಲಾಂಗನೆಯರಾಗಿ ಬದುಕೋಣ' ಎಂದು ಹೇಳುವಳು.

ಇಂದ್ರನ ಸಭೆಯಲ್ಲಿ ಮಹಾನಂದೆಯ ರೂಪ-ಲಾವಣ್ಯದ ಪ್ರಸ್ತಾಪವಾಗುವುದು. ಆಗ ಇಂದ್ರನಿಗೆ ಅವಳ ಮೇಲೆ ಮನಸ್ಸಾಗುವುದು. ನಾರದನು 'ಅವಳು ಸಾಮಾನ್ಯಳಲ್ಲ, ಅವಳ ಮೋಹಪಾಶದಲ್ಲಿ ಬಿದ್ದು ಕಷ್ಟಕ್ಕೆ ಗುರಿಯಾಗಬೇಡ' ಎಂದು ಎಚ್ಚರಿಸುವನು. ಆದರೂ ಇಂದ್ರ ಕೇಳುವದಿಲ್ಲ. 'ವಾರಾಂಗನೆಯರಿಗೆ ದ್ರವ್ಯದ ಆಸೆ ಬಹಳ, ಸರ್ವ ಸಂಪತ್ತನ್ನು ಸುರಿದು ಅವಳನ್ನು ವಶಮಾಡಿಕೊಳ್ಳುವೆನು' ಎಂದು ಆವೇಶದಿಂದ ಹೊರಡುವನು. ದೇವಲೋಕದ ದಿವ್ಯರೂಪವನ್ನು ತ್ಯಾಗಮಾಡಿ ಪಂಚಭೂತಾತ್ಮಕ ದೇಹ

ಧರಿಸಿ, ನಂದಿಗ್ರಾಮ ಪ್ರವೇಶಿಸುವನು. ಇದರ ಪರಿಣಾಮ ಒಳ್ಳೆಯದಾಗುವುದಿಲ್ಲವೆಂದು ನಾರದ ತುಂಬರರು ವೇಷ ಬದಲಿಸಿ ಭೂಲೋಕಕ್ಕೆ ಬರುವರು. ಇತ್ತ ಇಂದ್ರ ವರುಣರು ಆಪತ್ತಿಶೆಟ್ಟಿ ಪರಂದರಶೆಟ್ಟಿ ಎಂಬ ಹೆಸರಿನ ವ್ಯಾಪಾರಿಗಳಾಗಿ ಅಲ್ಲಿಗೆ ಬರುವರು ಮಹಾನಂದೆಯೆಂಬ ಗಣಿಕಾಸ್ತ್ರೀಯ ಗೆಳೆತನ ಮಾಡಬೇಕೆಂಬ ವಿಚಾರವನ್ನು ಬ್ರಹ್ಮಾನಂದರಿಗೆ ತಿಳಿಸುವನು ಅವನಿಗೆ 'ಮಹಾನಂದೇಯೋ, ಸದಾನಂದೆಯೋ' ಎಂದು ಕೇಳುವನು ಮತ್ತು 'ಸದಾನಂದೆಯಾದರೆ ಸ್ವಲ್ಪದರಲ್ಲಿ ಕೆಲಸವಾಗುವುದು. ಮಹಾನಂದೆಯಾದರೆ ಹೆಚ್ಚು ಶ್ರಮ ಖರ್ಚು ಮಾಡಬೇಡಕಾಗುವುದು' ಎನ್ನವನು ಅದಕ್ಕೆ ಅವರು ಮಹಾನಂದೆಯೇ ಬೇಕು ಕುಬೇರ ಭಂಢಾರ' ಬೇಕಾದರೆ ತಂದಿಡುತ್ತೇವೆ. ಅಲ್ಲದೆ ಮಹಾನಂದೆಯ ರೂಪವನ್ನು ನೋಡುವ ಆತುರ ವ್ಯಕ್ತಪಡಿಸುತ್ತಾರೆ. ಗಂಧರ್ವ ಗಾಯನ ಶಾಲೆಗೆ ಸಹಾಯ ಮಾಡುತ್ತೆನೆಂದು ವಚನ ಕೊಟ್ಟರೆ ನಿಮ್ಮ ಕಾರ್ಯ ಸಾಧಿಸಿ ಕೊಡುವೆ ಎಂದು ಅವರಿಂದ ಒಪ್ಪಿಗೆ ಪಡೆಯುತ್ತಾನೆ.

ಅದೇ ವೇಳೆಗೆ ಅಲ್ಲಿಗೆ ವೇಷ ಬದಲಿಸಿಕೊಂಡ ನಾರದ ನಾರ್‍ಯ್ಯಾ, ತುಂಬುರ ತುಂಬಾ ಬರುತ್ತಾರೆ. ದಾಸ ದಾಸಿಯರಾಗಿ ಸೇವೆ ಸಲ್ಲಿಸಲು ನಿಲ್ಲುತ್ತಾರೆ.

ವಿಶ್ವಮೋಹಿನಿಯ ನಾಯಕಸಾನಿಯರೆಲ್ಲ ಗಾಯನ ಸೇವೆಯಲ್ಲಿ ತೊಡಗಿರುತ್ತಾರೆ. ಆಗ ವೇಷಧಾರಿ ಇಂದ್ರ, ವರುಣ, ನಾರದ, ತುಂಬುರರು ಪ್ರವೇಶಿಸುವರು. ಬ್ರಹ್ಮಾನಂದನು ಇಂದ್ರನ ಅಭಿಲಾಷೆಯನ್ನು ವಿಶ್ವಮೋಹಿನಿಗೆ ತಿಳಿಸುವನು ಅವಳು ಮಹಾನಂದೆಗೆ ಹೇಳಿದರೆ ಮಹಾನಂದೆ ಒಪ್ಪುವುದಿಲ್ಲ ಕೊನೆಗೆ ಸದಾನಂದೆಯನ್ನೇ ಮಹಾನಂದೆಯಾಗಿ ತೋರಿಸಿ ಧಣಿಯಿಂದ ಹಣವನ್ನು ಪಡೆಯುವ ತಂತ್ರವನ್ನು ಬ್ರಹ್ಮಾನಂದ ರೂಪಿಸುತ್ತಾನೆ. ಆಪತ್ತಿಶೆಟ್ಟಿ ಸದಾನಂದೆಯನ್ನೇ ಮಹಾನಂದೆಯೆಂದು ತಿಳಿದು ತನ್ನಲ್ಲಿದ್ದ ಹಣವನ್ನು ಕೊಡುತ್ತಾನೆ. ಸದಾನಂದೆಯೊಂದಿಗೆ ಸಲ್ಲಾಪದ ಮಾತುಗಳನ್ನಾಡುತ್ತಾನೆ.

ಇತ್ತ ಮಹಾನಂದೆ ಬಂದ ವಿಟಪುರುಷರನ್ನು ನಿರಾಕರಿಸುತ್ತಾ, ನಿರಂತರ ತಂಬೂರಿ ಹಿಡಿದು ಹಾಡುತ್ತ, ಶಿವನ ಧ್ಯಾನ ಮಾಡುತ್ತ ಇರುತ್ತಾಳೆ, ಇದು ವಿಶ್ವಮೋಹಿನಿಗೆ ಬೇಸರ ತರುತ್ತದೆ. ಸ್ತ್ರೀ ರೂಪದ ತುಂಬರನು' ಕನಿಷ್ಠ ಕುಲದಲ್ಲಿ ಹುಟ್ಟಿದರೂ ಶ್ರೇಷ್ಠ ಸಾಧಕರಾಗಿ ಜೀವನ ಸಾರ್ಥಕ ಮಾಡಿಕೊಂಡ ಅನೇಕ ಸಂಗತಿಗಳು ಪುರಾಣದಲ್ಲಿವೆ. ವಾರಾಂಗನೆಯರಾದರೂ ಯಜಮಾನನ ಸೇವೆಯನ್ನು ನಿಷ್ಠೆಯಿಂದ ಮಾಡಬೇಕು. ಯಾವನು ಬೆಲೆಯುಳ್ಳ ಕಂಕಣ ತಂದು ಕೊಡುವನೋ ಅಂಥ ಯಜಮಾನನ ಜೊತೆಗಿರುವೆ ಎಂದು ಪ್ರತಿಜ್ಞೆ ಮಾಡು' ಎಂದು ಮನವೊಲಿಸುತ್ತಾನೆ. ಮಹಾನಂದೆಗೂ ಸರಿ ಎನಿಸಿ 'ಇಂದಿನಿಂದ ನಾನು ನಿನ್ನ ಉಪದೇಶದಂತೆಯೇ ನಡೆದುಕೊಳ್ಳುವೆ' ಎಂದು ಹೇಳುವಳು.

ಇತ್ತ ಇಂದ್ರನು ನಾರದನಿಗೆ 'ಮಹಾನಂದೆಯನ್ನು ಕರೆದುಕೊಂಡು ಬಾ ಸ್ವರ್ಗಲೋಕಕ್ಕೆ ಹೋಗೋಣ' ಎಂದು ತಿಳಿಸುತ್ತಾನೆ. ನಾರದನು ತಾವು ಯಾರನ್ನು ಮಹಾನಂದೆಯೆಂದು ತಿಳಿದಿರುವಿರೋ

ಅವಳನ್ನು ಒಂದು ಸಲ ಅಲ್ಲ ಹತ್ತು ಸಲ ಕರೆದುಕೊಂಡು ಬರುವೆ ಎಂದಾಗ ಇಂದ್ರನು ನಿನ್ನ ಮಾತಿನ ಅರ್ಥವೇನು ಎಂದು ಕೇಳುತ್ತಾನೆ. ನಿಜ ಸಂಗತಿ ತಿಳಿದಾಗ ಮೋಸವಾಯಿತು ಎಂದು ಪರಿತಪಿಸುತ್ತಾನೆ. ನಿಜವಾದ ಮಹಾನಂದೆಯನ್ನು ನೋಡಲು ಹಂಬಲಿಸುತ್ತಾನೆ. ಆಗ ನಾರದನು, 'ಧಣಿಯರೇ ಮಹಾನಂದಾದೇವಿ ಸಾಕ್ಷಾತ್‌ದೇವಿ ಇವಳ ರೂಪ ಸೂರ್ಯನಿಗಿಂತಲೂ ತೇಜಃಪುಂಜವಾದದ್ದು! ಅಗ್ನಿಗಿಂತಲೂ ಪ್ರಖರ, ಅಮೃತಕ್ಕಿಂತಲೂ ಮಧುರಳೂ! ಕಪಟತನದಿಂದ ಕೈವಶ ಮಾಡಿಕೊಳ್ಳಲು ಯತ್ನಿಸಿದರೆ ಸುಟ್ಟು ಬೂದಿಯಾಗುವಿರಿ' ಎಂದು ಹೇಳುತ್ತಾನೆ. ಅವಳ ರೂಪ ಯೌವನ ಕಂಡು ಇಂದ್ರ ಮೋಹ ಪರವಶನಾಗಿ ಬಲತ್ಕರಿಸಲು ಮುಂದಾಗುವನು. 'ಅಯ್ಯೋ ಅಯ್ಯೋ' ಎಂದು ಚೀರಾಡುವನು. ನಾರದ ಹೀಗೆ ಒಳಗಿನಿಂದ ಸುಡುತ್ತಿದ್ದ ಇಂದ್ರನನ್ನು ಹಿಡಿದುಕೊಂಡು ಬರುತ್ತಾನೆ. 'ಎಲೋ ನನ್ನ ಮೈಗೆ ಕೈ ಹಚ್ಚಬೇಡಾ ನನ್ನ ಕಣ್ಣುಗಳು ಸುಟ್ಟುಹೋದವು ಹಾಯ. ನನ್ನ ಮೈಯೆಲ್ಲಾ ಹುರುಪಳಿಸುತ್ತದೆ' ಎಂದು ಗೋಳಾಡುತ್ತಾನೆ. 'ಎಂತಹ ತಪ್ಪಾಯಿತು. ಮಹಾನಂದೆಯಲ್ಲಾ ಇವಳು ಮಾಯಾದೇವಿಯು' ಎಂದು ಉದ್ಗರಿಸುವನು.

ಮಹಲಿನಲ್ಲಿ ಮಹಾನಂದೆ ವಿಚಾರ ಮಾಡುತ್ತ ಕುಳಿತಿರುವಾಗ, ವಿಶ್ವಮೋಹಿನಿ ಜೀವನದ ಬಗೆಗೆ ಅನೇಕ ಸಂಗತಿಗಳನ್ನು ತಿಳಿಸುತ್ತಾಳೆ. ಅದಕ್ಕೆ ಮಹಾನಂದೆ 'ಮಹಾದೇವನ, ವರಪ್ರಸಾದದಿಂದ ಜನ್ಮ ತಾಳಿದ ಈ ಗಣಿಕೆಯು ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣವನ್ನು ಯಾವನು ತಂದು ಕೊಡುವನೋ ಅವನಿಗೋಸ್ಕರವಾಗಿಯೇ ನನ್ನ ತಾರುಣ್ಯವನ್ನು ಮೀಸಲಿಡುವೆ, ಬೀದಿಯ ಸೂಳೆಯಂತೆ ಕಾಮುಕರ ಬಲಿಗೆ ಬಿದ್ದು ಜೀವನ ನಡೆಸಲಾರೆ. ವೇಶ್ಯೆಯಾಗಿಯೂ ಪತಿವ್ರತೆಯಾಗಲಿಕ್ಕೆ ಬರುತ್ತದೆಂಬ ತತ್ವವನ್ನು ಜಗತ್ತಿಗೆ ಪ್ರತ್ಯಕ್ಷ ಕೃತಿಯಿಂದ ಮಾಡಿ ತೋರಿಸುವೆನೆಂಬ ಧೃಡನಿಲುವು ಪ್ರಕಟಿಸುತ್ತಾಳೆ. ಈ ಮಾತನ್ನು ಕೇಳಿ ವಿಶ್ವಮೋಹಿನಿ 'ಇನ್ನು ಮೇಲೆ ನಿನ್ನ ದೈವ. ಹೇಗಾದರೂ ಇರು' ಎಂದು ಹೊರಡುತ್ತಾಳೆ.

ಇಂದ್ರನು 'ನಾರ್ಯಾ ಬೇಗ ಕೊರಳಿಗೆ ಕಲ್ಲು ಕಟ್ಟಿ ನೀರಿಗೆ ತಳ್ಳು ಪಂಚಭೂತಾತ್ಮಕವಾದ ದೇಹವನ್ನು ತ್ಯಾಗ ಮಾಡಿ, ದಿವ್ಯ ದೇಹ ಧಾರಣೆ ಮಾಡುವುದಕ್ಕೆ, ಜಲಸಮಾಧಿಯ ಹೊರತು, ಉತ್ತಮ ಸಾಧನೆ ಬೇರೆ ಇಲ್ಲಾ. ಪ್ರತಿಯೊಬ್ಬ ಅವತಾರಿ ಪುರುಷ ಇದನ್ನೆ ಅವಲಂಬಿಸುತ್ತಾನೆ' ಎಂದಾಗ ನಾರದ ಆಶ್ಚರ್ಯಚಕಿತನಾಗಿ 'ಅಂದರೆ ತಾವು ಅವತಾರ ಪುರುಷರೋ? ಮಹಾಸ್ವಾಮಿ ಮೃತ್ಯುಲೋಕದಲ್ಲಿ ವೇಶ್ಯಾಜನರಿಗೆ ಮೋಸ ಮಾಡಿ ಜಗತ್ತಿಗೆ ಜ್ಞಾನೋಪದೇಶ ಮಾಡುವ ದೇವತೆಗಳು ನೀವಿಬ್ಬರು ಯಾರು ಅದನ್ನಾದರೂ ತಿಳಿಸಿರಿ ನನ್ನ ಪ್ರಕಾರ ಇಂತಹ ನೀಚಕೃತ್ಯಗಳನ್ನು ಮಾಡತಕ್ಕ ದೇವನು ಒಬ್ಬನೇ' ಎಂದಾಗ ಇಂದ್ರ 'ಅವನಾರು?' 'ಆ ಸ್ವರ್ಗಲೋಕದ ಸಹಸ್ರಾಕ್ಷನು', 'ಸ್ವರ್ಗಲೋಕದ ಆ ಮಹಾರಾಜಾ ನಾನೇ ಇಂದ್ರ', 'ನಿಮ್ಮ ಕಣ್ಣುಗಳೇನಾದವು', 'ಮಹಾನಂದೆಯ ಕ್ರೋಧಾಗ್ನಿಯಿಂದ ದಹನವಾದವುವೆಂದು ಹೇಳುತ್ತಾನೆ.

'ನೀವು ಸ್ವರ್ಗಲೋಕವನ್ನು ಬಿಟ್ಟು, ಮೃತ್ಯುಲೋಕಕ್ಕೆ ಬಂದ ಕಾರಣವೇನು? ಪಾರ್ವತಿಯ ಸಾತ್ವಿಕ ರೂಪಕ್ಕೆ ಮರುಳಾಗಿ, ಅಂಧನಾದರೂ ನಿನ್ನ ಗರ್ವ ಬಿಡಲಾರೆಯಾ? ಸ್ವಲ್ಪ ತಡೆ ದೇವಾನುದೇವನಾದ ಮಹಾದೇವನ ಸಮ್ಮುಖದಲ್ಲಿ ನಿಲ್ಲಿಸುತ್ತೇನೆ. ನಡೆ', ಎಂದ ಕೂಡಲೇ 'ಇಂತಹ ಧೈರ್ಯದ ಮಾತನಾಡುವ ನೀನ್ಯಾರು', 'ಯಾರು ಮಹಾನಂದೆಯನ್ನು ತೋರಿಸಿದನೋ ಅವನೇ ನಾನು. ಮಹಾನಂದೆಯ ಯಜಮಾನ ಯಾರೆಂದು ತೋರಿಸುವೆ, ಕಿವಿಗೊಟ್ಟು ಕೇಳು. ಒಳಗೆ 'ಹರಹರ ಮಹಾದೇವ' ಎಂದು ಶಬ್ದವಾಗುತ್ತದೆ. 'ದೇವರ್ಷಿಗಳೇ ಕೈ ಮುಗಿದು ಕ್ಷಮಿಸಿರಿ ನಾನು ವಿಷಯವಾಸನೆಯ ಮದಾಂಧನಾಗಿ ಘೋರ ಅಪರಾಧ ಮಾಡಿದೆ, ನನ್ನ ತಪ್ಪನ್ನು ಮನ್ನಿಸಿ ಕಾಪಾಡಿರೆಂದು ಬೇಡಿಕೊಳ್ಳಬಯಸುತ್ತೇನೆ. ಶಂಕರನ ಮುಂದೆ ಮಾತ್ರ ನನ್ನ ನಿಲ್ಲಿಸಬೇಡ ಕಣ್ಣು ಕಾಣಿಸುವುದಿಲ್ಲ, ಕಿವಿ ಕೇಳಿಸುವುದಿಲ್ಲ. ಮಾತನಾಡಲು ಬರುವುದಿಲ್ಲ ಇಂತಹ ಅಸ್ತಿ ಮಾಂಸದ ಗೊಂಬೆ ಎಂದು ತಿಳಿದು ನೀನು ಸುಮ್ಮನಿರು. ನಿನ್ನ ಎಲ್ಲ ಕೆಲಸ ಮಾಡುತ್ತೇನೆ' ಎಂದು ಹೇಳುತ್ತಾ ಕೈಲಾಸಕ್ಕೆ ಹೋಗುತ್ತಾನೆ. ಈಶ್ವರನಿಗೆ ಇಂದ್ರನು ಮಾಡಿದ ಅಪರಾಧ ಕುರಿತು ಎಲ್ಲ ವಿಷಯವನ್ನು ಎಳೆ ಎಳೆಯಾಗಿ ನಾರದ ವಿವರಿಸುತ್ತಾನೆ.

ಎಲ್ಲವನ್ನು ಅರಿತುಕೊಂಡ ಶಂಕರನು, ಗಣಾಧಿಪತಿ ನಾರದರೊಂದಿಗೆ ಪಾರ್ವತಿ ಸತ್ವಹರಣ ಮಾಡಲು ವೃದ್ಧ ವೇಷಧಾರಿಯಾಗಿ ಹರಿದ ಬಟ್ಟೆಯಲ್ಲಿ ಭಿಕ್ಷುಕನಂತೆ ವಿಶ್ವಮೋಹಿನಿಯ ಮನೆಯ ಮುಂದೆ ಬಂದಾಗ 'ನಿನಗೆ ಏನು ಬೇಕು?' ಎಂದು ಕೇಳತ್ತಾರೆ. ನನಗೆ ಮಹಾಪತಿವ್ರತೆಯಾದ ವಾರಾಂಗನೆಯು ಬೇಕು. ನಿನ್ನಂತಹ ಹುಚ್ಚುತನದ ಹುಡುಗಿ ನಮ್ಮ ಮನೆಯಲ್ಲಿರುವಳು, ಅವಳಿಗೆ ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣ ಕೊಡುವ ಯಜಮಾನರು ಬೇಕಾಗಿರುವರು. 'ಅದರಲ್ಲಿ ಏನಿದೆ? ಬೇಡಿದಷ್ಟು ಕೊಡಲು ಸಿದ್ಧನಿರುವೆ'. ಎಂದಾಗ ಮಹಾನಂದೆಯನ್ನು ಕೇಳುತ್ತಾರೆ. ಕಂಕಣ ಕೊಟ್ಟರೆ ಇವರೇ ಪತಿದೇವರೆಂದು ತಿಳಿದು ಕೊನೆಯವರೆಗೂ ನನ್ನ ಪತಿವ್ರತೆ ಧರ್ಮದಿಂದ ನಡೆಯುವೆನು ಎನ್ನುವಳು'.

ದಿಟ ಪುರುಷರಿಗೆ, ಧನದಾಸೆಗೆ ನಾನು ಮೋಹಗೊಂಡವಳಲ್ಲ. ನಿಮ್ಮ ಧರ್ಮ ಪತ್ನಿಯಾಗಿ ಸ್ವೀಕರಿಸಿರಿ ಹೆಚ್ಚಿನದೇನು ಬೇಡ ಎನ್ನುವಾಗ ವಿಶ್ವಮೋಹಿನಿ, ಸದಾನಂದೆ, ಹುಚ್ಚಿ ಎಂತಹ ಕೆಲಸ ಮಾಡಿಕೊಳ್ಳುವೆ, ಅಗ್ನಿಯ ಕುಂಡಕ್ಕೆ ಆಹುತಿಯಾಗುವೆ ಎಂದು ಹೇಳಿದರೂ ಕೇಳದೆ, ಮನಸ್ಸು ಧೃಡ ಮಾಡುತ್ತಾಳೆ, ಅದರಂತೆ ಸದಾ ಅಂತಃಪುರದಲ್ಲಿ ವೃದ್ಧನ ಸೇವೆ ಮಾಡುತ್ತಾ ದಿನವೂ ನಿರತಳಾಗುತ್ತಾಳೆ. ಮಂಚದ ಮೇಲೆ ಮಲಗಿಸಿ ಉಪಚರಿಸುತ್ತಾ 'ಪ್ರಾಣನಾಥಾ ಸ್ವಲ್ಪವೂ ಬಾಧೆಯಾಗದಂತೆ ಹಿಡಿಯುವೆ' ಎಂದು ಕೂಡ್ರಿಸಿ ಆರೈಕೆಯಲ್ಲಿಯೇ ಸರ್ವಸ್ವನ್ನು ಕಾಣತೊಡಗುತ್ತಾಳೆ. ಈಶ್ವರನು ಇನ್ನೂ ಹೆಚ್ಚು ಕೆಮ್ಮುತ್ತಾ 'ನನ್ನ ಸೊಂಟ ಬಹಳ ನೋಯುತ್ತಿದೆ ಹಾಹಾ' ಎಂದು ನರಳಾಡುವಾಗ ಅವರ ಕೈ ಕಾಲುಗಳನ್ನು ಒತ್ತುತ್ತಾಳೆ. ಮತ್ತೆ 'ತಲೆನೋವು' ಎಂದಾಗ ತಲೆಗೆ ಶುಂಠಿ ತೇಯ್ದು ಹಚ್ಚುವಳು, 'ಹೊಟ್ಟೆನೋವು ಹೆಚ್ಚಾಗಿದೆ' ಎಂದ ಕೂಡಲೇ ಬೆಲ್ಲ ತುಪ್ಪ ಹಾಕಿ ಕುದಿಸಿ ಔಷಧಿಯನ್ನು ಕೊಡುತ್ತಾಳೆ. ಮತ್ತೆ 'ನನಗೆ

ತುಂಬಾ ಹಸಿವೆ ಏನನ್ನಾದರೂ ತರಬಾರದೇ; ಎಂದಾಗ ಪೃಥ್ವಿಗೆ ಸರಿಯಾದ ಬೆಲೆಯುಳ್ಳ ಕಂಕಣ ತಂದುಕೊಟ್ಟಿರುವನೆಂದು ಮತ್ತಷ್ಟು ಉಪಚರಿಸುತ್ತಾಳೆ. ವೀಣೆ ಇರುವುದನ್ನು ಕಂಡು ನಿನಗೆ ಒಳ್ಳೆಯ ಗಾಯನ ಬರುತ್ತೆ ಅಂತೆ ಸುಂದರ ಹಾಡಿನಿಂದ ಮನತೃಪ್ತಿಪಡಿಸು ಎಂದು ಕೇಳಿದಾಗ ಗಾಯನದಲ್ಲಿ ನಿರತಳಾಗುತ್ತಾಳೆ. ಅವರು ವ್ಯಂಗ್ಯವಾಗಿ 'ದೊಡ್ಡ ರಸಿಕನು ಬಂದಿದ್ದಾನೆ, ಗಾಯನ ಕೇಳುವುದಕ್ಕೆ! ಖೋಡಿ! ಅರಿಷ್ಟ! ಮುದಿಪಿಶಾಚಿ' ಎಂದಾಗ ಅಮ್ಮಾ ಇನ್ನು ಮೇಲೆ ಇಂತಹ ಕೆಟ್ಟ ಮಾತುಗಳನ್ನಾಡಬೇಡ' ಎಂದು ಬೇಡಿಕೊಳ್ಳುವಳು. ಆಗ ವಿಶ್ವಮೋಹಿನಿಯು ಸಿಪಾಯಿಗಳನ್ನು ಕರೆದು ಮಾತೃರೂಪಿಯ ರಾಕ್ಷಸಿಯನ್ನು ಕೈದು ಮಾಡಿರಿ, ಕಾಲಿಗೆ ಬೇಡಿ ಹಾಕಿ, ತುಚ್ಚಶಬ್ದ ಉಚ್ಚರಿಸಿದ ಇವಳ ನಾಲಿಗೆಯನ್ನು ಕತ್ತರಿಸಿರಿ ಅನ್ನ ನೀರು ಇಲ್ಲದೆ ನೆಲಮನೆಗೆ ತಳ್ಳಿರೆಂದು ಹೇಳುವಳು.

'ನನ್ನ ಮನೆಯಲ್ಲಿ ನನ್ನ ಮೇಲೆ ಅಧಿಕಾರ ನಡೆಸಲು ನೀನ್ಯಾರು? ಎಂದು ಪ್ರಶ್ನಿಸುತ್ತಾಳೆ. ಆಗ ಮಹಾನಂದೆ, 'ನ್ಯಾಯಶಾಸ್ತ್ರದಂತೆ ದತ್ತಕ ವಿಧಾನದಿಂದ ಈ ಮನೆಯ ಸಂಪತ್ತಿಗೂ, ಈ ನಂದಿಗ್ರಾಮಕ್ಕೆ, ಈ ವೇಶ್ಯೆಯರ ಸಮುದಾಯಕ್ಕೆ ಹಿರಿಯಳು, ಸ್ವಾಮಿಣಿಯು ನಾನು ಅಧಿಕಾರ ನಡೆಸಬೇಕಾಗುವುದು. ಬೇಲಿಯೇ ಎದ್ದು ಹೊಲ ಮೇಯ್ದಂತೆ ತಾಯಿಯಿಂದ ಮಕ್ಕಳಿಗೆ ದುರ್ಮಾರ್ಗವೇ ಸುಟ್ಟು ಬಿಡಬೇಕು, ಎಂದು ಸಿಡುಕಿದಾಗ, 'ಸೆರಗೊಡ್ಡಿ ಬೇಡಿಕೊಳ್ಳುವೆ ನಿನ್ನ ಸಹವಾಸ ಸಾಕು' ಎಂದು ಹೇಳಿ ಹೋಗುವಳು.

ಅವಳ ಗಾಯನವನ್ನು ಕೇಳಿ 'ಮನಸ್ಸು ತೃಪ್ತಗೊಂಡಿತು ವೇಶ್ಯರಿಗೆ ಬಹಳ ಕಾಟವನ್ನು ನೀಡಿದೆ. ಕ್ಷಮಿಸು ಇದರಲ್ಲಿ ನೀನು ಪಾರಾದಿ'ಯೆಂದರೆ, 'ನನ್ನ ಕೃಪೆಯಿಂದ ಕಷ್ಟ ತೊಲಗಿ, ಜಗತ್ತಿನಲ್ಲಿಯ ವಾರಾಂಗನೆಯರಿಗೆ ಸನ್ಮಾರ್ಗದರ್ಶಕಳಾಗುವೆ, ನಾನು ಮಾಡುವುದೆಲ್ಲಾ ಮತ್ಸರವೆಂದು ತಿಳಿಯಬೇಡಾ, ಕೇವಲ ಪ್ರೇಮಾಂತಃಕರಣದಿಂದ ಮಾಡುತ್ತೇನೆ. ಪಂಚಭೂತಾತ್ಮ ಸಾಕ್ಷಿಯಾಗಿ ಈ ಸುವರ್ಣ ಪತ್ರದಲ್ಲಿ ಬರೆದಿಡುವೆ ಎನ್ನುತ್ತಾ ಚುಂಬಿಸುತ್ತಾನೆ. ತಟ್ಟನೆ ಎಚ್ಚರಗೊಳ್ಳುವಳು. 'ಪ್ರಾಣನಾಥ ನಾನು ಸ್ವಪ್ನಮಯ ಸ್ಮೃತಿಯಲ್ಲಿದ್ದೆನು' ಎಂದಾಗ ಈಶ್ವರ 'ನನಗೂ ನಿದ್ದೆ ಬಂದಿದೆ ನಿನಗೂ ನಿದ್ದೆ ಬಂದಿದೆ ನನ್ನ ಕೊರಳಲ್ಲಿಯ ಪ್ರಭುಲಿಂಗವನ್ನು ಕೊಡುತ್ತೇನೆ. ಶಯನಗೃಹದಲ್ಲಿ ಇದನ್ನು ಹತ್ತಿರ ಇಟ್ಟುಕೊಳ್ಳಬಾರದು. ಯಾರೂ ಮುಟ್ಟದ, ಕಳ್ಳತನವಾಗದ, ಮೈಲಿಗೆ ಆಗದಂತೆ ಭದ್ರವಾಗಿಡಬೇಕು. ನೋಡು ಅದು ನಷ್ಟವಾದರೆ ನಾನು ನನ್ನ ಪ್ರಾಣವನ್ನೇ ಕಳೆದುಕೊಳ್ಳುವೆನು' ಎಂದು ಹೇಳಿದಾಗ 'ಹೀಗೆ ಅಭದ್ರ ಮಾತನಾಡಬೇಡಿ. ನನ್ನ ದೇವರಕ್ಕಿಂತಲೂ ಹೆಚ್ಚಾಗಿ ಜೋಪಾನ ಮಾಡುತ್ತೇನೆ' ಎಂದು ಪ್ರಾಣಲಿಂಗವನ್ನು ನರ್ತನ ಶಾಲೆಯಲ್ಲಿ ಇಟ್ಟು ಬಂದ ಕೂಡಲೇ ಶಿವನು ನಂದಿ, ಶೃಂಗಿ, ಭೈರವನಿಗೆ ಮತ್ತಷ್ಟು ಸತ್ವಪರೀಕ್ಷೆಗೊಳಪಡಿಸಲು ನೀವು ಅದೃಶ್ಯರೂಪವಾಗಿ ನರ್ತನ ಶಾಲೆಗೆ ಬೆಂಕಿ ಹಚ್ಚಬೇಕು ಎಂದು ಹೇಳಿ ಮಲಗುತ್ತಾನೆ.

'ನರ್ತನಶಾಲೆಯು ಬೆಂಕಿಯಲ್ಲಿ ಉರಿಯುತ್ತಿದೆ' ಎಂದು ವಿಶ್ವಮೋಹಿನಿ ಸದಾನಂದೆ ಕೂಗುತ್ತಾರೆ. ಮಹಾನಂದೆ 'ಎಂತಹ ಘಾತವಾಯಿತು. ಈಗ ತಾನೆ ಇವರು ನಿದ್ರೆಗೆ ಹೋದರು. ದೇವಾ ನಾನೇನು ತಪ್ಪು

ಮಾಡಿದೆ?. ಇಷ್ಟನಾಥನ ಪ್ರಾಣಲಿಂಗ ಸುಟ್ಟುಹೋದರೆ, ಅಯ್ಯೋ! ಎಂದು ರೋಧಿಸುವಾಗ ಎಚ್ಚರಾದ ಈಶ್ವರನು 'ಬೇಕೆಂತಲೇ ಪ್ರಾಣಲಿಂಗ ಅಲ್ಲಿ ಇಟ್ಟು ಬಂದು, ಬೆಂಕಿ ಹಚ್ಚಿಸುವಂತೆ ಕಪಟತನ ಮಾಡಿದೆಯಾ' ಎಂದು ಮತ್ತೆ ತೊಂದರೆ ಕೊಡುತ್ತಾನೆ. ಇಲ್ಲ ನಾನು ಹಾಗೆ ಮಾಡಲಾರೆ ಎಂದು ಬೇಡಿಕೊಂಡರೂ ಕೇಳದೆ ನಿನ್ನ ಸಹವಾಸದಿಂದ ಹೀಗಾತು. ನನ್ನ ಪ್ರಾಣಲಿಂಗ ಕೊಡು ನಾನು ಹೋಗುವೆ. ಇಲ್ಲವೆ ಉರಿವ ಜ್ವಾಲೆಯಲ್ಲಿ ಬಿದ್ದು ಪ್ರಾಣ ಬಿಡುತ್ತೇನೆ'. ಎಂದು ಅಗ್ನಿಗೆ ಹಾರಲು ವೃದ್ಧ ಈಶ್ವರ ಸಿದ್ಧನಾಗಿ ಬೀಳಲು ಹೋಗುತ್ತಾನೆ. ಮಹಾನಂದೆ ಅವನ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡು 'ನಾನು ನಿಮ್ಮ ಜೊತೆ ಚಿತೆಯೇರುವೆ. ಬೇಡವೆಂದರೂ ಕೇಳುವುದಿಲ್ಲ ನಾನು ಮಾತ್ರ ಸಹಗಮನ ಮಾಡತಕ್ಕವಳೇ ಯಾರೂ ತಡೆಯಬೇಡಿರೆಂದು ಕೇಳಿಕೊಂಡು ಹಾರಬೇಕೆನ್ನುವಷ್ಟರಲ್ಲಿಯೇ ನಾರದನು ಸದಾನಂದೆಗೆ ಪ್ರತ್ಯಕ್ಷವಾಗಿ ಮಹಾನಂದೆಯು ನಿಮ್ಮ ದರ್ಶನಕ್ಕಾಗಿ ಬರುತ್ತಿದ್ದಾರೆ ಎಂದಾಗ 'ಸ್ವಾಮಿ ನೀವು ನನ್ನ ಅಜ್ಞಾನ ಹೋಗಲಾಡಿಸಿದ ಋಷಿಗಳು' ಎಂದು ಹೇಳುತ್ತಾ ಸದಾನಂದೆಯು 'ಅಕ್ಕಾ ನಾನು ನಿನ್ನ ಜೊತೆ ಅಗ್ನಿಪ್ರವೇಶ ಮಾಡುವೆ,' ವಿಶ್ವಮೋಹಿನಿ 'ಹುಚ್ಚಿ ನೀನೇಕೆ ಮಾಡಿಕೊಳ್ಳುವೆ' ಎನ್ನುವಳು. ನಾರದ 'ಮಹಾನಂದೆಯ ಜೊತೆ ಕೆಲಕಾಲ ಇದ್ದು ಬರುವಳು ಬಿಡು' ಎಂದು ಹೇಳುವರು. ಮಹಾನಂದೆಯು 'ಎಲ್ಲರಿಗೂ ನಾನು ಇನ್ನು ಬರುತ್ತೇನೆ. ತಿಳಿಯದೇ ಏನೇ ತಪ್ಪು ಮಾಡಿದ್ದರೆ ಕ್ಷಮಿಸಿರಿ' ಎಂದು ಹೇಳುತ್ತಾ ಮಹಾನಂದಾ, ಸದಾನಂದಾ ಇಬ್ಬರು ಅಗ್ನಿಪ್ರವೇಶ ಮಾಡುತ್ತಾರೆ.

ಆಕಾಶದಲ್ಲಿ ದುಂದುಭಿ ಧ್ವನಿಯಾಗುವುದು. ವಿಮಾನದಲ್ಲಿ ಶಂಕರ ಪಾರ್ವತಿ, ಗಂಗಾ ಕಾಣಿಸುವರು. ದೇವಗಣಗಳು ಪುಷ್ಪವೃಷ್ಟಿ ಮಾಡುವರು. ಬಹಳ ಸಂತುಷ್ಟನಾದ ಈಶ್ವರನು 'ಮಗನೇ ನಾರದಾ! ಮಗನೆ ತುಂಬರ! ನನ್ನ ಶಾಪದಿಂದ ವಾರಾಂಗನೆಯರಾದ ಈ ಗಿರಿಜೆಯೂ ಗಂಗೆಯೂ ನಿಮ್ಮಿಬ್ಬರ ಪ್ರಯತ್ನದಿಂದ, ನನ್ನ ಸ್ವರೂಪಕ್ಕೆ ಬಂದು ಸೇರಿದರು; ನಿಮಗೇನು ಬೇಕೊ ಕೇಳಿರೆಂದು ಹೇಳಿದಾಗ ನಾರದ 'ತಾತಾ! ಉಭಯ ಮಾತೋಶ್ರೀಯವರು ತಮ್ಮ ಚರಣಧೂಳಿಯಿಂದಾ ಈ ನಂದಿಗ್ರಾಮ ಪವಿತ್ರ ಮಾಡಿದರು. ಮತ್ತು ಕಲಿಯುಗದಲ್ಲಿ ಯಾವ ವೇಶ್ಯೆಯರು ಹೀಗೆ ವರ್ತಿಸುವರೋ ಅವರನ್ನಾದರೂ ಇದೇ ರೀತಿಯಿಂದ ಉದ್ದರಿಸಬೇಕು'. ಎಂದ ಕೂಡಲೇ 'ತಥಾಸ್ತು ತಥಾಸ್ತು' ಎಂದಾಗ ಎಲ್ಲರೂ ಹರ್ಷೋದ್ಗಾರದಲ್ಲಿ ತೇಲುತ್ತಾರೆ.

**೨: ಸಂದೇಹ ಸಾಮ್ರಾಜ್ಯ**

ವಿಶ್ವಗುಣಾದರ್ಶ ನಾಟಕ ಮಂಡಳಿಗೆ ವೈಭವದ ದಿನಗಳನ್ನು ತಂದುಕೊಟ್ಟ ಮಹತ್ವದ ನಾಟಕವಿದು ಮರಾಠಿ ರಂಗಭೂಮಿಯಲ್ಲಿ ಕ್ರಾಂತಿ ಮಾಡಿದ 'ಸಂಶಯ ಕಲ್ಲೋಳ' ಹೆಸರಿನ ನಾಟಕದ ಅನುವಾದವಿದು. ಮರಾಠಿಯಲ್ಲಿ ಇದನ್ನು ಬರೆದವರು ಗೋವಿಂದ ಬಲ್ಲಾಳ ದೇವಳ. ಮಹಾರಾಷ್ಟ್ರದ ಪ್ರಸಿದ್ಧ ಕಂಪನಿಯಾಗಿದ್ದ 'ಗಂಧರ್ವ ನಾಟಕ ಮಂಡಳಿ'ಯು ೧೯೧೬ ರಲ್ಲಿ ಪ್ರಯೋಗಕ್ಕೆ ಎತ್ತಿಕೊಂಡಿತು.

ಇದರ ಪ್ರಥಮ ಪ್ರಯೋಗ ಜರುಗಿದ್ದು ಹುಬ್ಬಳ್ಳಿಯಲ್ಲಿ ಎಂದು ಮರಾಠಿ ರಂಗಭೂಮಿಯ ಚರಿತ್ರೆ ದಾಖಲಿಸುತ್ತದೆ. 'ಸಂಶಯ ಕಲ್ಲೋಳ' ಶ್ರೇಷ್ಠ ಸಂಗೀತ ನಾಟಕ. ಬಾಲಗಂಧರ್ವ, ಗಣಪತರಾವ್ ಬೋಡಸ. ಸದುಭಾವು ರಾನಡೆ ಮೊದಲಾದ ಹೆಸರಾಂತ ಕಲಾವಿದರು ಅಭಿನಯಿಸಿ, ಸಂಗೀತ ಅಭಿನಯದ ಪರಾಕಾಷ್ಠೆಯಿಂದ ಕರ್ನಾಟಕದಲ್ಲಿಯೂ ಜಯಭೇರಿಗೆ ಕಾರಣರಾದರು. ಹುಬ್ಬಳ್ಳಿಯಿಂದ ಪ್ರಾರಂಭವಾದ ಈ ನಾಟಕದ ರಂಗಯಾತ್ರೆ ಆ ಮೇಲೆ ಮಹಾರಾಷ್ಟ್ರದ ತುಂಬ ಜಯಭೇರಿ ಬಾರಿಸಿತು.

ಗೋವಿಂದ ಬಲ್ಲಾಳ ದೇವಳರು ಅಣ್ಣಾಸಾಹೇಬ ಕಿರ್ಲೋಸ್ಕರ ನಂತರದ ಮಹತ್ವದ ನಾಟಕಕಾರರೆಂದು ಗುರುತಿಸಲ್ಪಡುತ್ತಾರೆ. ಇವರ ಏಳು ನಾಟಕಗಳು ರಂಗಭೂಮಿಯ ಮೇಲೆ ಅತ್ಯಂತ ಯಶಸ್ವಿಯಾಗಿ ಪ್ರಯೋಗಗೊಂಡು ಇತಿಹಾಸ ನಿರ್ಮಿಸಿವೆ. ಇವರ ವಿಕ್ರಮೋರ್ವಶೀಯ, ಮೃಚ್ಛಕಟಿಕ, ಶಾಪಸಂಭ್ರಮ, ಶಾರದಾ ಹೆಸರಿನ ನಾಟಕಗಳನ್ನು ಕರ್ನಾಟಕದ ಅಂದಿನ ಹಲವಾರು ಕಂಪನಿಗಳು ತಮಗೆ ಅನುಕೂಲವಾಗುವ ರೀತಿಯಲ್ಲಿ ಭಾಷಾಂತರಿಸಿ, ಪರಿವರ್ತಿಸಿಕೊಂಡು ರಂಗದ ಮೇಲೆ ಪ್ರಯೋಗಿಸಿವೆ. ದೇವಳರ 'ಸಂಶಯ ಕಲ್ಲೋಳ' ಕೂಡ ಮರಾಠಿಯ ಸ್ವತಂತ್ರ ರಂಗಕೃತಿಯಲ್ಲ. ಇಂಗ್ಲೀಷಿನಲ್ಲಿ ಮರ್ಫಿ ಎಂಬ ನಾಟಕಕಾರ ಬರೆದ 'ಆಲ್ ಇನ್ ದ ರಾಂಗ' ನಾಟಕದ ರೂಪಾಂತರ. ಮರ್ಫಿಯ ಈ ನಾಟಕಕ್ಕೆ ಮೂಲವಾದುದು ಫ್ರೆಂಚ್ ಮೋಲ್ಯರ್ ಬರೆದ 'ಗಾನಾರೇಲ್' ಹೆಸರಿನ ನಾಟಕ. ದೇವಳರು ಮೊದಲು ಗದ್ಯದಲ್ಲಿ 'ಫಲ್ಗುಣರಾವ್ ಉರ್ಫ್ ತಸಬಿರಿಂಚಾ ಘೋಟಾಳ' ಹೆಸರಿನಿಂದ ಬರೆದಿದ್ದರು. ಆ ಮೇಲೆ ಸಂಗೀತ ಸಂಯೋಜಿಸಿ 'ಸಂಗೀತ ಸಂಶಯ ಕಲ್ಲೋಳ' ಹೆಸರಿನಿಂದ ರಚಿಸಿದರು. ಇದು ಮೊದಲು ಗಂಧರ್ವ ಕಂಪನಿಯಿಂದ ರಂಗವನ್ನೇರಿ ಮರಾಠಿಯಲ್ಲಿ, ಅತ್ಯಂತ ಜನಪ್ರಿಯವಾದ ಬಳಿಕ ಈ ನಾಟಕವನ್ನು ವಾಮನರಾಯರು ೧೯೨೦ ರ ದಶಕದಲ್ಲಿ ಕನ್ನಡಕ್ಕೆ ಅನುವಾದಿಸಿ 'ಸಂದೇಹ ಸಾಮ್ರಾಜ್ಯ' ಎಂದು ಹೆಸರಿಟ್ಟು, ವಿಶ್ವಗುಣಾದರ್ಶ ಮಂಡಳಿಯಿಂದ ಪ್ರಯೋಗಿಸಿದರು. ಕನ್ನಡದಲ್ಲಿಯೂ ಯಶಸ್ವಿ ರಂಗಕೃತಿಯಾಗಿ ಹೆಸರು ಮಾಡಿತು. ಇದು ಪುಸ್ತಕ ರೂಪದಲ್ಲಿ ೧೯೪೪ ರಲ್ಲಿ, ವಿಶ್ವಗುಣಾದರ್ಶ ಪ್ರಕಾಶನ ಸಮಿತಿ, ಧಾರವಾಡದಿಂದ ಪ್ರಕಟವಾಯಿತು. ೫ ಅಂಕಗಳಲ್ಲಿ ಹರಡಿಕೊಂಡಿರುವ ನಾಟಕದ ಕಥೆ ಹೀಗಿದೆ.

ವಿಜಯರಾಜ ಈ ನಾಟಕದ ನಾಯಕ. ಇವನ ಪತ್ನಿ ಪೂರ್ಣಿಮಾ. ಒಂದು ದಿನ ಇವರ ಮನೆಯ ಮುಂದೆ ಒಬ್ಬ ಸಾಧು ಬಂದು 'ಕಾರ್ತಿಕನಾಥನ ದೀಪೋತ್ಸವಕ್ಕೆ ಒಂದು ಮಣ ಎಣ್ಣೆಯನ್ನು ಕೊಡಬೇಕೆಂದು ಕೇಳುತ್ತಾನೆ. ಇದನ್ನು ಕೇಳಿಸಿಕೊಂಡ ವಿಜಯರಾಜ 'ಇಲ್ಲಿ ಏನೂ ಸಿಗುವುದಿಲ್ಲ ಮುಂದೆ ಹೋಗು' ಎಂದು ಕೂಗುತ್ತಾನೆ. ಇದಕ್ಕೆ ಪ್ರತ್ಯುತ್ತರವಾಗಿ ಸಾಧು 'ನೋಡಿ ಸ್ವಾಮಿ ದೇವಿಯರು ಕೊಡುತ್ತೇನೆ ಎಂದು ಹೇಳಿದ್ದರಿಂದ ನಾನು ಇಲ್ಲಿಗೆ ಬಂದಿರುವೆ' ಎಂದು ತನ್ನ ಬೇಡಿಕೆಯನ್ನು ಸಮರ್ಪಿಸಿಕೊಳ್ಳುತ್ತಾನೆ. ಆಗ ವಿಜಯನ ಮನದಲ್ಲಿ ಹೆಂಡತಿಯ ವರ್ತನೆ ಬಗೆಗೆ ಅನೇಕ ಸಂದೇಹಗಳು ಮುತ್ತಿಕೊಳ್ಳುತ್ತವೆ. ಸಾಧುವಿನ ಮೂಲಕ ಮತ್ತೇ ಅವಳು ಹೊರಗೆ ಹೋಗಲು ಈ ರೀತಿ ಸಂಚು ಹೂಡಿರಬಹುದೇ

ಎನಿಸುತ್ತದೆ. ಇದರಿಂದ ಮತ್ತಷ್ಟು ವ್ಯಗ್ರ್ಯವಾಗಿ ಸಾಧುವಿನ ಮೇಲೆ ಹರಿಹಾಯುತ್ತಾನೆ. "ಎಲೇ ಡಾಂಭಿಕ – ಸಾಧುವೇ? ನೀನು ಈ ರೀತಿ ಮೋಸ ಮಾಡುವುದು ಸರಿಯಲ್ಲ. ಮುಂದಕ್ಕೆ ಹೋಗು" ಎಂದು ಕಿಡಿಕಾರುತ್ತಾನೆ. ಇದಕ್ಕೆ ಪ್ರತಿಯಾಗಿ ಸಾಧುವೂ ನಮ್ರವಾಗಿ ಹೀಗೆ ನುಡಿಯುತ್ತಾನೆ. 'ಸ್ವಾಮಿ! ಇದೋ – ನಿಮಗೆ ಧರ್ಮ ಮಾಡುವುದು ಬೇಡವಾಗಿದ್ದರೆ ಬಿಡಿ, ಆದರೆ ಸುಮ್ಮನೆ ಸಂಶಯಕ್ಕೆ ಒಳಗಾಗಬೇಡಿ. ಈ ಸಂಶಯ ವೃತ್ತಿಯೂ ದಾನ–ಧರ್ಮಕ್ಕೆ ಅಡ್ಡವಾಗಿ ಬಂದು ಪುಣ್ಯಕ್ಷಯ ಮಾಡುವುದು. ಇಷ್ಟೇ ಅಲ್ಲ ಒಮ್ಮೊಮ್ಮೆ ಸಂಸಾರದ ನಿತ್ಯ ವ್ಯವಹಾರದಲ್ಲಿಯೂ ಈ ಸಂಶಯಪಿಶಾಚಿಯು ಅಡ್ಡ ಬಂದು ಸುಖದಲ್ಲಿ ಮಣ್ಣು ಬೆರೆಸುವುದು. ಧರ್ಮ ಮಾಡಬೇಡಿ ನಾನು ಹೋಗುವೆನು. ಆದರೆ ನಿಮ್ಮ ಸ್ವಂತ ಕಲ್ಯಾಣಕ್ಕಾಗಿ ನಾನು ಹೇಳುವ ಈ ಉಪದೇಶವನ್ನು ಮಾತ್ರ ಮರೆಯಬೇಡಿ!' ಎಂದು ಉಪದೇಶಿಸಿ ಹೊರಟು ಹೋಗುತ್ತಾನೆ.

ಸಾಧುವಿನ ಈ ವರ್ತನೆಯ ಸನ್ನಿವೇಶ ಹೆಂಡತಿಯು ಹೂಡಿರುವ ತಂತ್ರವಾಗಿರಬಹುದೆಂದು ಕೂಡಲೆ ಅವಳನ್ನು ಕರೆಯುತ್ತಾನೆ. ಆದರೆ ಅವಳು ಮನೆಯಲ್ಲಿ ಇರುವುದಿಲ್ಲ. ಕೆಲಸದವನು (ವೃಶ್ಚಿಕ) 'ಅಮ್ಮಾವ್ರು ಹಿತ್ತಲಬಾಗಿಲನಿಂದ ಕಾರ್ತೀಕನಾಥ ದೇವಸ್ಥಾನಕ್ಕೆ ಹೋಗಿದ್ದಾರೆ' ಎಂದು ಹೇಳುತ್ತಾನೆ. ಈ ವಿಷಯ ಕೇಳಿದ್ದೇ ತಡ ವಿಜಯನ ತಲೆಯಲ್ಲಿ ಸಂಶಯದ ಸುರುಳಿ ಬಿಚ್ಚುತ್ತದೆ. ಅವಳು ಹಿತ್ತಲಬಾಗಿಲನಿಂದ ಹೋದಳೇ? ಇಷ್ಟು ದೊಡ್ಡದಾದ ಹದಿನೇಳು ಬಾಗಿಲುಗಳುಳ್ಳ ಮನೆಯಲ್ಲಿ ಅವಳನ್ನು ಕಣ್ಣಿಟ್ಟು ಕಾಯುವುದು ಹೇಗೆ?' ಈ ಬಾಗಿಲುಗಳನ್ನು ಮುಚ್ಚಿಸಿದರೆ ಹೇಗೆ' ಎಂದು ಚಿಂತಿಸುತ್ತಾ ಮುಂದುವರೆದು 'ಸಿಂಗಾರವಾಗಿ ಹೋದಳೋ" ಒಡವೆ ವಸ್ತ್ರ ಪೀತಾಂಬರ ಉಟ್ಟುಕೊಂಡಿದ್ದಳೋ' ಎಂದು ಸೇವಕನನ್ನು ಕೇಳುತ್ತಾನೆ. ಅದಕ್ಕೆ ಸೇವಕನು "ನಾನು ಇಷ್ಟು ದಿವಸ ನಿಮ್ಮ ಮನೆಯಲ್ಲಿ ಕೆಲಸ ಮಾಡಿ ಎಲ್ಲವನ್ನು ತಿಳಿದಿರುವೆ. ಈ ರೀತಿ ಆಲೋಚಿಸಬೇಡಿ ಅಮ್ಮನವರು ದೇವರು ಇದ್ದಹಾಗೆ" ಎಂದು ವಿಜಯನ ಅಪನಂಬಿಕೆಯ ಕೆಟ್ಟ ಮಾತುಗಳನ್ನು ಖಂಡಿಸುತ್ತಾನೆ. ಆಗ ವಿಜಯನಲ್ಲಿ ಮತ್ತೊಂದು ಸಂದೇಹ ಮೂಡುತ್ತದೆ. ಕೆಲಸದವನು ಅವಳ ಪರವಾಗಿರಬಹುದೆ? ಅವಳೇನಾದರೂ ಅವನಿಗೆ ಹಣದ ಆಮಿಷ ಒಡ್ಡಿರಬಹುದೆ? ಹೀಗೆ ನೂರೆಂಟು ಸಂದೇಹ ವಿಜಯನ ಮನದಲ್ಲಿ ಮುತ್ತಿಕೊಳ್ಳುತ್ತವೆ.

'ಕೆಲಸದವನು ಮನೆ ಬಿಟ್ಟು ಹೊರಟು ನಿಂತಾಗ ಪತ್ನಿಯ ಸತ್ವಪರೀಕ್ಷೆಯನ್ನು ಮಾಡಲು ಅವನಿಂದ ಇನ್ನು ಎಷ್ಟೊ ವಿಷಯಗಳನ್ನು ತಿಳಿದುಕೊಳ್ಳಲಿಕ್ಕೇಬೇಕೆಂದು ಅವನನ್ನು ರಮಿಸಿ "ಕೆಲಸಕ್ಕೆ ಬಿಟ್ಟು ಹೋಗುವದು ಬೇಡ" ಎಂದು ಸಮಾಧಾನಪಡಿಸುತ್ತಾನೆ.

ಇತ್ತ ನಾಟಕದ ಮುಂದಿನ ಕಥೆಯಲ್ಲಿ ಆನಂದಶೇಟ ಶತತಾರೆಯರ ಪ್ರವೇಶವಾಗುತ್ತದೆ. ಆನಂದಶೇಟನು ಶತತಾರೆಯ ಮೋಹಪಾಶದಲ್ಲಿ ಸಿಲಿಕಿರುವವನು ಆಗಲೇ ಮೂರು ಮದುವೆಯಾಗಿ ಮೂವರು ಹೆಂಡಂದಿರನ್ನು ಪ್ರಾಯದಲ್ಲಿಯೇ ಕಳೆದುಕೊಂಡಿರುವವ. ಆದರೆ ಹಾಡುನೃತ್ಯಗಳ ಮೋಜಿನಲ್ಲಿ

ರಸಿಕನಾಗಿರುವವ. ಶತತಾರೆಯು ಆನಂದಶೇಟನನ್ನು ಬಹುವಾಗಿ ಮೆಚ್ಚಿಕೊಂಡವಳು. ಮದುವೆಯಾಗಿ ಇವನ ಜೊತೆ ಇರಬೇಕೆಂಬ ಅಭಿಲಾಷೆಯನ್ನು ಹೊಂದಿದವಳು. ತತ್ಪೂರ್ವ ಆನಂದಶೇಟನಿಂದ ಇನ್ನಷ್ಟು ವೈಯುಕ್ತಿಕ ಸಂಗತಿಗಳನ್ನು ತಿಳಿದುಕೊಳ್ಳಬೇಕೆನ್ನುತ್ತಾಳೆ. ಮತ್ತು ಅವನ ಭಾವಚಿತ್ರ ಪಡೆದು ಹೋಗುತ್ತಾಳೆ. ಇತ್ತ ಪೂರ್ಣಿಮಾದೇವಿ ಕಾರ್ತೀಕನಾಥನ ದರ್ಶನ ಪಡೆದು ಮನೆಗೆ ಬರುತ್ತಾಳೆ. 'ಪ್ರತಿ ಪ್ರತಿಪದೆ' ಎಂದು ಕೂಗುತ್ತಾಳೆ. ತೆಗೆಯದಾದಾಗ ಒಳಗೆ ಏನೋ ನಡೆದಿರಬೇಕೆಂದು ಊಹಿಸಿ ಬೇರೊಂದು ಬಾಗಿಲ ಹತ್ತಿರ ಹೋಗಿ ಮರೆಯಾಗಿ ನಿಲ್ಲುತ್ತಾಳೆ.

ಪ್ರತಿಪದೆ ಬಾಗಿಲು ತೆರೆದು ನೋಡಲು ಅಲ್ಲಿ ಯಾರೂ ಕಾಣುವುದಿಲ್ಲ. ಆಗ ಅವರಿಬ್ಬರು "ಈ ಮನೆಯಲ್ಲಿ ಯಾವಾಗಲೂ ಚಮತ್ಕಾರದ ಸಂಶಯ ಪಿಶಾಚದ ಚೇಷ್ಟೆಗಳು ನಡೆಯುತ್ತಲೇ ಇರುತ್ತವೆ" ಎಂದು ತಮ್ಮೊಳಗೆ ಮಾತನಾಡಿಕೊಳ್ಳುತ್ತಾರೆ. ಇದನ್ನು ಗಮನಿಸಿದ ಪೂರ್ಣಿಮಾದೇವಿ ರೇಗಿಕೊಂಡು ಕೂಗಾಡುತ್ತಾಳೆ. ಆದರೆ ಪ್ರತಿಪದೆ 'ಅಮ್ಮಾವ್ರೆ ಅವಾಗಲೇ ಬಾಗಿಲು ತೆರೆದು ನೋಡಿದೆ ಯಾರೂ ಕಾಣಿಸಲಿಲ್ಲ' ಎನ್ನುವಳು ಜೊತೆಗಿದ್ದ ಸಪ್ತಮಿಯನ್ನು ನೋಡಿ 'ಇವಳ್ಯಾರು? ಇಲ್ಲಿ ಇವಳಿಗೇನು ಕೆಲಸ' ಎನ್ನುತ್ತಾಳೆ. ಸಪ್ತಮಿ ಗಾಬರಿಯಿಂದ 'ನನ್ನದು ಏನು ಕೆಲಸ' ಎಂದು ತಡವರಿಸಿದಾಗ, 'ನಮ್ಮ ಯಜಮಾನರ ಹತ್ತಿರ ನಿನ್ನದೇನು ಕೆಲಸವಿತ್ತು? ಹೊಟ್ಟೆನೋವಿಗೆ ಔಷಧಿ ಬೇಕಿತ್ತೆ' ಎಂದು ರೇಗಾಡುತ್ತಾಳೆ. ಗೆಳತಿಯ ಅಪಮಾನವಾಗುತ್ತಿರುವುದನ್ನು ಕಂಡು ಪ್ರತಿಪದೆ ಸಪ್ತಮಿಯನ್ನು ಪರಿಚಯಿಸುತ್ತಾಳೆ 'ಇವಳು ಇದೇ ಊರಿನವಳು, ಶ್ರವಣಶೇಟರ ಹೆಂಡತಿ ಭರಣಿದೇವಿಯರ ದಾಸಿ. ನಿಮ್ಮನ್ನು ಸುಮ್ಮನೆ ಭೇಟಿಯಾಗಲು ಬಂದಿದ್ದಳು. ಇವಳು ಸಂಪನ್ನೆ, ಸಾತ್ವಿಕಳು'. ಎನ್ನುತ್ತಿರುವಂತೆ ಪೂರ್ಣಿಮಾದೇವಿ ಸಿಡಿಮಿಡಿಗೊಳ್ಳುತ್ತಾಳೆ. 'ನಿಮ್ಮಂತವರೇ ನಮ್ಮ ಯಜಮಾನರ ಹತ್ತಿರ ಔಷಧಿ ತೆಗೆದುಕೊಳ್ಳಲು ಬರುತ್ತಾರೆ'. ಎಂದು ವ್ಯಂಗ್ಯದ ಮಾತುಗಳನ್ನಾಡುತ್ತಾಳೆ. ಮತ್ತು ಅವಳನ್ನು ಬೈದು ಮನೆಯಾಚೆಗೆ ಕಳಿಸುತ್ತಾಳೆ. ಕೂಡಲೇ ಯಜಮಾನರ ಕುರಿತು ಪ್ರತಿಪದೆಗೆ 'ಇವರು ಎಲ್ಲಿ ಹೋದರು? ಯಾವಾಗ ಹೋದರು?' ಎಂದು ಪ್ರಶ್ನಿಸುತ್ತಾಳೆ. ಪ್ರತಿಪದೆ ತನಗೆ ಏನೂ ಗೊತ್ತಿಲ್ಲವೆಂದು ಹೇಳಲು 'ಇದರ ಗುಟ್ಟನ್ನು ತಿಳಿಯುವ ತನಕ ನಾನು ಅನ್ನವನ್ನು ಸ್ವೀಕರಿಸುವುದಿಲ್ಲ. ಭರಣಿದೇವಿಗೆ ಈಗಲೇ ಪತ್ರ ಬರೆಯುತ್ತೇನೆ. ವೃಶ್ಚಿಕನನ್ನು ಕರೆ. ಅಯ್ಯೋ ಎಂತಹ ಪರೀಕ್ಷೆ ಶಿವನೆ? ನಿನಗೆ ಕಣ್ಣಿಲ್ಲವೇ' ಎಂದು ಗೋಗರೆಯುತ್ತಾಳೆ. ಇತ್ತ ವಿಜಯನು ಹೆಂಡತಿಯನ್ನು ಹುಡುಕುತ್ತಾ 'ಎಲ್ಲೆಡೆ ಹುಡುಕಿದೆ ಇವಳ ಸುಳಿವೇ ಇಲ್ಲ. ಇನ್ನು ಮನೆಗೆ ಹೋಗಿ ನೋಡೋಣ' ಎಂದು ಹೊರಡುತ್ತಾನೆ. ಅದೇ ಮಾರ್ಗವಾಗಿ ಶತತಾರೆ ಬರುತ್ತಿರುತ್ತಾಳೆ. ಸತ್ಯನಾರಾಯಣ ವ್ರತದ ಉಪವಾಸ ಮಾಡಿ ತುಂಬಾ ಬಳಲಿರುತ್ತಾಳೆ. ನಿಶ್ಯಕ್ತಿಯಿಂದ ಮೂರ್ಛೆ ಹೋಗಿ ಇನ್ನೇನು ಬೀಳುವಷ್ಟರಲ್ಲಿ ವಿಜಯನು ಧಾವಿಸಿ ಅವಳನ್ನು ಹಿಡಿದುಕೊಳ್ಳುತ್ತಾನೆ. ತೊಡೆ ಮೇಲೆ ಮಲಗಿಸಿಕೊಂಡು ಉಪಚರಿಸುತ್ತಾನೆ. ಈ ದೃಶ್ಯವನ್ನು ಪೂರ್ಣಿಮಾ ಕಿಡಕಿಯಿಂದ ನೋಡುತ್ತಾಳೆ. ಮರದಡಿಯಲ್ಲಿ ಯಾರೋ ಹೆಂಗಸಿನ ಜೊತೆ ಅಸಹ್ಯವಾಗಿ ವರ್ತಿಸುತ್ತಿದ್ದಾನೆ. ಛೇ ಮಾನಬಿಟ್ಟವರು. ಎಂದು ಅದನ್ನು ನೋಡಿ

ಪರಿತಪಿಸುತ್ತಾಳೆ. ಇತ್ತ ವಿಜಯನು ಅವಳ (ಶತತಾರೆ) ಪರಿಚಯ ಮಾಡಿಕೊಂಡು, ವಿಶ್ರಾಂತಿಗಾಗಿ ಮನೆಗೆ ಕರೆಯುತ್ತಾನೆ. ಸುಧಾರಿಸಿಕೊಂಡ ಶತತಾರೆ ಮನೆ ತುಂಬಾ ಸಮೀಪದಲ್ಲಿದೆ. ಪೂಜೆ ಮಾಡಿದ ಮೇಲೆಯೇ ಪ್ರಸಾದ ಸ್ವೀಕರಿಸಬೇಕು; ನಿಮ್ಮ ಉಪಕಾರನ್ನು ನಾನೆಂದೂ ಮರೆಯಲಾರೆ' ಎಂದು ಹೇಳಿ ಹೋಗುತ್ತಾಳೆ.

ಈ ಚಿತ್ರವನ್ನು ನೋಡಿದ ಪೂರ್ಣಿಮಾದೇವಿ ಪ್ರತಿಪದೆಯ ಮುಂದೆ "ನಾನು ಕುರೂಪಿಯೇ, ಮುಪ್ಪಾಗಿರುವೆನೇ, ಸುಂದರವಾಗಿಲ್ಲವೆ? ಇವರು ಈ ರೀತಿ ಮಾಡುವದು ನನಗೆ ಬಹಳ ನಿರಾಸೆ ತಂದಿದೆ. ನಾನು ಈ ಭೂಮಿ ಮೇಲೆ ಬದುಕಿರುವುದೇ ತಪ್ಪು" ಎಂದು ಗೋಳಾಡುತ್ತಾಳೆ. ಅದಕ್ಕೆ ಪ್ರತಿಪದೆ ಸಾಂತ್ವನದ ಮಾತುಗಳನ್ನು ಹೇಳಿ ಸಮಾಧಾನಪಡಿಸಲು ಪ್ರಯತ್ನಿಸುತ್ತಾಳೆ. ಮನದಲ್ಲಿ ಸಂಶಯ ತುಂಬಿಕೊಂಡ ಪೂರ್ಣಿಮಾದೇವಿ 'ಇರಲಿ ನಿನ್ನ ಜೊತೆ ಬೆಳಿಗ್ಗೆ ಇದ್ದ ಸಪ್ತಮಿ ಯಾರು! ಇವಳಿಗೂ ನನ್ನ ಯಜಮಾನರಿಗೂ ಏನು ಸಂಬಂಧವಿದೆ? ನೀನು ಸುಳ್ಳು ಹೇಳುತ್ತಿರುವಿ' ಎಂದು ಮತ್ತೆ ತನ್ನ ಸಂಶಯ ವ್ಯಕ್ತಪಡಿಸುತ್ತಾಳೆ.

ವಿಜಯನು ಮನೆಗೆ ಬರುತ್ತಾನೆ. ಆಗ ಹೆಂಡತಿಯು ಭಾವಚಿತ್ರವೊಂದನ್ನು ಹಿಡಿದುಕೊಂಡು ಅಪ್ಪಿಕೊಳ್ಳುವ ದೃಶ್ಯವನ್ನು ನೋಡುತ್ತಾನೆ. ಇವಳು ಕಾರ್ತೀಕನಾಥನ ದೇವಸ್ಥಾನಕ್ಕೆ ಹೋಗಿ ಪರಪುರುಷನ ಬಲೆಗೆ ಬಿದ್ದಿದ್ದಾಳೆಂದು ಸಂಶಯ ತಾಳುತ್ತಾನೆ. ಮತ್ತು ಆವೇಶದಲ್ಲಿ "ನನ್ನೆದುರೆ ಯಾವುದೊ ಚಿತ್ರವನ್ನು ಮುದ್ದಿಸುವೆಯಾ? ನಿನಗೆ ನಾಚಿಕೆಯಾಗುವುದಿಲ್ಲವೇ?" ಎಂದು ಕೋಪ ವ್ಯಕ್ತಪಡಿಸುತ್ತಾನೆ. ಅದಕ್ಕೆ ಪೂರ್ಣಿಮಾದೇವಿ "ನೀವು ಯಾರದೋ ಜೊತೆ ಚಕ್ಕಂದವಾಡುತ್ತಿರುವುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ನನಗೇನು ಕೇಳುತ್ತಿರುವಿರಿ" ಎಂದು ಉತ್ತರಿಸುತ್ತಾಳೆ. ಪರಸ್ಪರವಾದ ವಿವಾದಗಳು ಬೆಳೆಯುತ್ತವೆ. ಸಂಶಯದ ಸುಳಿಯಲ್ಲಿ ಇಬ್ಬರ ದಾಂಪತ್ಯ ವಿರಸಮಯವಾಗುತ್ತದೆ. ಹೀಗಿರುವಾಗ ಪೂರ್ಣಿಮೆಯ ಕೈಯಲ್ಲಿ ಇರುವ ಭಾವಚಿತ್ರ ಎಲ್ಲಿಯದೆಂದು ವಿಜಯ ಪತ್ತೆ ಹಚ್ಚಲು ಹೊರಡುತ್ತಾನೆ. ಮರದಡಿಯಲ್ಲಿ ವಿಜಯನು ಸಲ್ಲಾಪಗೈದ ಹೆಣ್ಣು ಯಾರೆಂದು ತಿಳಿಯಲು ಪೂರ್ಣಿಮಾದೇವಿಯ ಪ್ರಯತ್ನ ಮುಂದುವರೆಯುತ್ತದೆ.

ಆ ಭಾವಚಿತ್ರವು ಶತತಾರೆಗೆ ಆನಂದಶೇಟ ಕೊಟ್ಟಿದ್ದು. ಅವಳು ಮೂರ್ಛೆ ಹೋದಾಗ ಅದು ಸೆರಗಿನಿಂದ ಜಾರಿ ಬಿದ್ದಿತ್ತು. ಪೂರ್ಣಿಮೆಗೆ ಸಿಕ್ಕಿತ್ತು. ಈ ಎಲ್ಲ ಘಟನೆಗಳು ಕೊನೆಗೆ ಬೆಳಕಿಗೆ ಬರುತ್ತವೆ. ಪೂರ್ಣಿಮಾದೇವಿಗೆ ತಪ್ಪಿನ ಅರಿವಾಗುತ್ತದೆ. ವಿಜಯನಿಗೂ ಕೂಡಾ ಹೆಂಡತಿಯ ದೈವಭಕ್ತಿಯ ಪರಿಚಯವಾಗುತ್ತದೆ. ವಿನಾಕಾರಣ ಒಬ್ಬರು ಇನ್ನೊಬ್ಬರ ಮೇಲೆ ಸಂಶಯ ತಾಳಿ ಬದುಕನ್ನು ನರಕ ಮಾಡಿಕೊಂಡ ಬಗ್ಗೆ ಪಶ್ಚಾತ್ತಾಪ ಪಡುತ್ತಾರೆ. ಕೊನೆಯಲ್ಲಿ ದಂಪತಿಗಳು ಪ್ರೀತಿ ಅನುರಾಗದಿಂದ ಹೊಂದಿಕೊಂಡು ಬಾಳಲು ಮುಂದಾಗುತ್ತಾರೆ.

ಕಥೆಯ ಕೊನೆಯ ಭಾಗದಲ್ಲಿ ಸಾಧು ಮತ್ತೆ ಪ್ರತ್ಯಕ್ಷನಾಗುತ್ತಾನೆ. ಕಾರ್ತೀಕನಾಥನ ದೇವಸ್ಥಾನಕ್ಕೆ ಹರಕೆಯ ಒಂದು ಮಣ ಎಣ್ಣೆ ಕೇಳುತ್ತಾನೆ. ಅದಕ್ಕೆ ವಿಜಯರಾಯನು 'ಒಂದು ಮಣ ಏಕೆ? ಎರಡು ಮಣ ಎಣ್ಣೆಯನ್ನು ಖುಷಿಯಿಂದ ಕೊಡುತ್ತೇನೆ. ಕಾರ್ತೀಕನಾಥನನ್ನು ಪೂಜಿಸಿ ಅವನ ಕೃಪೆಗೆ ಪಾತ್ರರಾಗೋಣ" ಎಂದು ಹೇಳುತ್ತಾನೆ. ಇಲ್ಲಿಗೆ ನಾಟಕಕ್ಕೆ ತೆರೆ ಬೀಳುತ್ತದೆ.

ಗಂಡ ಹೆಂಡತಿಯರಿಬ್ಬರು ಪರಸ್ಪರ ಸಂಶಯತಾಳುತ್ತಾ ಹೋಗುವುದು ಅದಕ್ಕೆ ಪೂರಕವಾಗಿ, ಘಟನೆಗಳು ಜರುಗುವದು, ಸಂಸಾರ ವಿರಸದ ಆಗರವಾಗಿ ಪರಿಣಮಿಸುವದು ನಾಟಕದ ಕೊನೆಯ ಭಾಗದವರೆಗೂ ಅತ್ಯಂತ ಔಚಿತ್ಯಪೂರ್ಣವಾಗಿ ಹೆಣೆದುಕೊಂಡಿದೆ. ಹೆಂಡತಿ ಹಿತ್ತಲಬಾಗಿಲಿನಿಂದ ದೇವಸ್ಥಾನಕ್ಕೆ ಹೋದುದೆ ವಿಜಯರಾಜನ ಸಂಶಯಗಳ ಸರಮಾಲೆಗೆ ಮೂಲ ಎಳೆಯಾಗುತ್ತದೆ. ಪೂರ್ಣಿಮಾದೇವಿ ಕೂಡ ಗಂಡನ ಚಟುವಟಿಕೆಗಳನ್ನು ಗುಮಾನಿಯಿಂದ ನೋಡುತ್ತಾ ಆರೋಪಗಳನ್ನು ಮಾಡುತ್ತಾ ಹೋಗುತ್ತಾಳೆ.

ಕೊನೆಗೆ ನೈಜ ಸಂಗತಿ ಗೊತ್ತಾಗಿ, ಸಂಶಯದ ಸುಳಿಯಲ್ಲಿ ಸಿಲುಕಿಕೊಂಡ ಮನಸ್ಸುಗಳು, ಅದರಿಂದ ಹೊರ ಬಂದು ಅನ್ಯೋನ್ಯವಾಗಿ ಬಾಳಲು ನಿರ್ಧರಿಸುತ್ತವೆ. ನಾಟಕ ಸುಖಾಂತ್ಯದಲ್ಲಿ ಪೂರ್ಣಗೊಳ್ಳುತ್ತದೆ. ವಿಷಯ ವಿವರಣೆ, ಪಾತ್ರಚಿತ್ರಣ, ಸನ್ನಿವೇಶ ನಿರ್ಮಾಣ, ಸಂಗೀತ ಮತ್ತು ಹಾಸ್ಯದ ಸಾಂಗತ್ಯದಿಂದ ರಂಗದ ಮೇಲೆ ಪ್ರೇಕ್ಷಕರನ್ನು ಆಕರ್ಷಿಸಿದಂತೆಯೆ ಓದುಗರನ್ನು ತನ್ನೊಳಗೆ ಕರೆದುಕೊಳ್ಳುತ್ತದೆ.

**೩: ಕೃಷ್ಣಾರ್ಜುನರ ಯುದ್ಧ**

ವಿಶ್ವಗುಣಾದರ್ಶ ನಾಟಕ ಮಂಡಳಿಯ ಜನಪ್ರಿಯ ನಾಟಕಗಳಲ್ಲಿ 'ಕೃಷ್ಣಾರ್ಜುನ ಯುದ್ಧ'ವೂ ಒಂದು. ಇದು ಮರಾಠೀ ನಾಟಕದ ಅನುವಾದ. ಮರಾಠಿಯಲ್ಲಿ ಬರೆದವರು ನ. ಚಿ. ಕೇಳಕರ (೧೮೭೨–೧೯೪೭) ಸಂಗೀತ ನಾಟಕ ಪರಂಪರೆಯಲ್ಲಿ ಇವರು ಶ್ರೇಷ್ಠ ನಾಟಕಕಾರರೆಂದು ಗುರುತಿಸಲ್ಪಡುವರು ರಾಕ್ಷಸೀ ಮಹಾತ್ವಾಕಾಂಕ್ಷೆ, ಮಾನಾಪಮಾನ, ಹಾಚ ಮುಲಾಚಾ ಬಾಪ, ಶಹಾ ಶಿವಾಜಿ, ಕೃಷ್ಣಾರ್ಜುನ ಯುದ್ಧ ಇವರ ಜನಪ್ರಿಯ ನಾಟಕಗಳು. ಮಹಾರಾಷ್ಟ್ರದ ಹಲವಾರು ಕಂಪನಿಗಳು ಇವರ ನಾಟಕಗಳನ್ನು ಪ್ರಯೋಗಿಸಿವೆ. ಮರಾಠೀ ನಾಟಕವನ್ನು ಯಶಸ್ವಿ ಸಾಹಿತ್ಯ ಕೃತಿಯಾಗಿ ಮತ್ತು ಯಶಸ್ವಿ ರಂಗಕೃತಿಯಾಗಿ ಹೇಗೆ ರಚಿಸಬೇಕು ಎಂಬುದಕ್ಕೆ ಕೇಳ್ಕರರ ನಾಟಕಗಳು ನಿದರ್ಶನಗಳೆನಿಸಿವೆ. ಕಥೆ, ತತ್ವ, ಉಪದೇಶ, ಗಂಭೀರತೆ, ಹಾಸ್ಯ ಎಲ್ಲ ಸಂಗತಿಗಳನ್ನೂ ನಾಟಕದಲ್ಲಿ ಸೊಗಸಾಗಿ ಹೆಣೆಯುವ ಕಲೆಗಾರಿಕೆ ಕೇಳ್ಕರ್ ಅವರದು. ಮರಾಠೀ ಕೃಷ್ಣಾರ್ಜುನ ಯುದ್ಧ ನಾಟಕ ಓದಿ, ಅದರ ಪ್ರಯೋಗಗಳನ್ನು ನೋಡಿ ಅದನ್ನು ಕನ್ನಡಕ್ಕೆ ಪರಿಚಯಿಸಬೇಕೆಂದು ಅನುವಾದಿಸಿರುವವರು ವಾಮನರಾಯರು.

ಕೃಷ್ಣ-ಅರ್ಜುನರ ಆತ್ಮೀಯ ಸಂಬಂಧ ಪುರಾಣ ಪ್ರಸಿದ್ಧವಾದುದು ಇವರಿಬ್ಬರು ಬೀಗರು, ಗುರುಶಿಷ್ಯರು, ಸ್ನೇಹಿತರೆಂದು ಮಹಾಭಾರತದ ಉದ್ದಕ್ಕೂ ನೋಡುತ್ತೇವೆ. ಇಂಥ ಆತ್ಮೀಯರ ನಡುವೆ ಯುದ್ಧದ ಪ್ರಸಂಗವೊಂದು ನಿರ್ಮಾಣವಾಗಲು ಕಾರಣವೇನು? ಎಂಬ ಕುತೂಹಲವು ಎಲ್ಲರಲ್ಲಿ ನಿರ್ಮಾಣವಾಗುತ್ತದೆ. ನಾಟಕದ ತಲೆಬರಹವೇ ಅತ್ಯಂತ ಆಕರ್ಷಕವಾದುದು. ಅದರ ಕಥೆ ಹೀಗಿದೆ.

ಕುರುಕ್ಷೇತ್ರಯುದ್ಧ ಮುಗಿದಿದೆ. ಕೃಷ್ಣನಿಗೆ ಒಂದಿಷ್ಟು ದಿನ ಅರಾಮವಾಗಿ, ವಿನೋದದಿಂದ ಕಾಲ ಕಳೆಯಬೇಕಾಗಿದೆ. ಅದಕ್ಕಾಗಿ ಅವನು ಸತ್ಯಭಾಮೆಯನ್ನು ಮತ್ತು ಅರ್ಜುನ ದ್ರೌಪದಿಯನ್ನು ಕರೆದುಕೊಂಡು ಗಂಗಾ ನದಿಯ ದಂಡೆಗೆ ಬರುತ್ತಾನೆ. ಅಲ್ಲಿ ನಿರ್ಮಿಸಿದ ಶಿಬಿರಗಳಲ್ಲಿ ಅವರು ನೆಲೆಸುತ್ತಾರೆ. ಯುದ್ಧದ ಗೆಲುವಿನ ಸಂತೋಷದಲ್ಲಿ ಈ ನಾಲ್ವರು ಲೋಕಾಭಿರಾಮವಾಗಿ ಹರಟೆ ಹೊಡೆಯುತ್ತಿರುತ್ತಾರೆ. ಅದೇ ವೇಳೆಗೆ ಅಲ್ಲಿ ನಾರದನ ಪ್ರವೇಶವಾಗುತ್ತದೆ. ನಾರದರ ಆಗಮನವೆಂದರೆ ಅಲ್ಲಿ ಏನೋ ಚೋದ್ಯವಿರುವುದೆಂದು ಎಲ್ಲರಿಗೂ ಅನಿಸುತ್ತದೆ. 'ಯುದ್ಧದ ಶ್ರಮ ನಿವಾರಿಸಿಕೊಳ್ಳಲು ಅರ್ಜುನನನ್ನು ಮಾತ್ರ ಕರೆದುಕೊಂಡು ಉಳಿದ ಪಾಂಡವರನ್ನು ಏಕೆ ಕರೆತರಲಿಲ್ಲ' ಎಂದು ನಾರದ ಕೃಷ್ಣನಿಗೆ ಕೇಳುತ್ತಾನೆ. 'ಎಲ್ಲರಿಗೂ ಆಮಂತ್ರಣ ಕೊಟ್ಟಿದ್ದೆ ಆದರೆ ಅರ್ಜುನ ಮಾತ್ರ ಬಂದಿರುವುನೆಂದು ಕೃಷ್ಣನು ಉತ್ತರಿಸುವನು. ಆಗ ನಾರದನ ಕಲಹಪ್ರೀತಿಯ ಬಗ್ಗೆ ಮೋಜಿನ ಮಾತುಗಳು ನಡೆಯುತ್ತವೆ. 'ತನ್ನ ಕಲಹಪ್ರೀತಿಯಿಂದ ಜಗತ್ತಿನಲ್ಲಿ ಕಲ್ಯಾಣದ ಕೆಲಸಗಳು ಆಗಿವೆ' ಎಂದು ನಾರದ ಸಮರ್ಥಿಸಿಕೊಳ್ಳುವನು. ಅದಕ್ಕೆ ನಿದರ್ಶನವಾಗಿ ಅರ್ಜುನ-ಸುಭದ್ರೆಯರ ವಿವಾಹ ಏರ್ಪಟ್ಟ ಬಗೆಗೆ ಹೇಳುವನು 'ಸುಭದ್ರಾ ವಿವಾಹದ ಪೂರ್ವದಲ್ಲಿ ನೀನು ಜೀವನದ ಪರಿವೆ ಇಲ್ಲದೆ, ವನವನ ಸುತ್ತುತ್ತಿದ್ದೆ. ಆಗ ನಾನೇ ನಿನಗೆ ತ್ರಿದಂಡೀಸಂನ್ಯಾಸ ದೀಕ್ಷೆ ಕೊಟ್ಟೆ, ಮತ್ತು ದ್ವಾರಕೆಯ ಅರಮನೆಯನ್ನು ತಮ್ಮ ವಾಸವಾಗುವಂತೆ ಏರ್ಪಾಟು ಮಾಡಿದೆ. ಅಣ್ಣ ತಮ್ಮಂದಿರಲ್ಲಿ ನ್ಯಾಯ ಹೊತ್ತಿಸಿದೆ, ಇಷ್ಟೆಲ್ಲ ಖಟಾಟೋಪ ಮಾಡಿದೆನೆಂದೇ-ಸ್ವಾಮಿ ತಮಗೆ-ಸುಭದ್ರೆಯು ದೊರೆತಳು. ಎಂದು ಅರ್ಜುನನಿಗೆ ತನ್ನ ಕಲಹಪ್ರೀತಿಯ ಪ್ರತಾಪವನ್ನು ವರ್ಣಿಸುವನು.

ಬಹುಜನರು ನೆರೆದಲ್ಲಿ ಕಲಹವು ಇದ್ದೇ ಇರುತ್ತದೆ. ಕಲಹವೇ ವೇದಾಂತಗಳ ದ್ವೈತವು. ಕಲಹವು ನಿಸರ್ಗಸಿದ್ಧ ಕಲಹವು ಪರಮಾತ್ಮನಿಗೆ ಪ್ರಿಯವಾದದ್ದು. ಕಲಹದಿಂದ ಸಂಸಾರದ ವೈಚಿತ್ರ್ಯವು ಬೆಳೆದೀತು. ಸಾತ್ವಿಕ ಶ್ರದ್ಧೆಗೆ ಕಲಹವು ಅವಶ್ಯಕ. ಕಲಹದಿಂದ ಮಿತ್ರ ಪ್ರೇಮವು ಒರೆಗೆ ಹತ್ತೀತು. ಕಲಹದಿಂದ ದಾಂಪತ್ಯ ಸುಖಕ್ಕೆ ಕಳೆ ಏರೀತು!.

ಹೀಗೆ ಕಲಹದ ಕಲೆಯಿಂದ ಎಷ್ಟೊಂದು ಲಾಭಗಳಿವೆ ಎಂಬುದನ್ನು ಹೇಳಿ ನಾರದನು ಗಂಗಾತೀರದ ವಿಹಾರಕ್ಕೆ ಹೊರಡುವನು.

ಇತ್ತ ಗಂಗಾತೀರದ ಯಕ್ಷದ್ವೀಪದಲ್ಲಿ ಮುನಿಕುಮಾರರಿಬ್ಬರು ಗುರುಗಳಿಗೆ ಬೇಕಾಗುವ ಪೂಜಾ ಸಾಮಗ್ರಿ ತೆಗೆದುಕೊಂಡು ಹೊರಟಿರುತ್ತಾರೆ. ಆಗ ಅಲ್ಲಿಗೆ ಬಂದ ಗಂಧರ್ವ ಮತ್ತು ಗಂಧರ್ವ ಸ್ತ್ರೀ ಮುನಿಕುಮಾರರಿಗೆ ಬೈದು ಹೀಯಾಳಿಸುವರು ಮನುಜರು ಹಗಲು ಹೊತ್ತು ಮಾತ್ರ ಯಕ್ಷದ್ವೀಪದಲ್ಲಿ ಸಂಚರಿಸಬೇಕು ರಾತ್ರಿ ಅಲ್ಲಿ ಗಂಧರ್ವರು ವಿನೋದಾರ್ಥ ವಿಹರಿಸುವರೆಂದು, ಇನ್ನೂ ನಸುಕತ್ತಲೆ ಇರುವಾಗಲೇ ಮುನಿಕುಮಾರರು ಬಂದ ಬಗ್ಗೆ ಅಸಮಾಧಾನ ವ್ಯಕ್ತಪಡಿಸುವರು. ಅಲ್ಲದೆ ಗಂಧರ್ವರು ತಂದಿದ್ದ ಪೂಜಾ ಸಾಮಗ್ರಿಯಿಂದ ಒತ್ತಾಯ ಪೂರ್ವಕವಾಗಿ ಗಂಧರ್ವಸ್ತ್ರೀಯ ಪೂಜೆ ಮಾಡಿಸುವನು. ಗಂಧರ್ವರ ವರ್ತನೆಯ ಬಗ್ಗೆ ಕೋಪಿಸಿಕೊಂಡು ಮುನಿಕುಮಾರರು ಅಲ್ಲಿಂದ ದೂರ ಹೋಗುವರು.

ಅದೇ ನಸುಕಿನ ವೇಳೆಯಲ್ಲಿ ಗಾಲವಮುನಿ ಮತ್ತು ಕೌಶಿಕರು ಸ್ನಾನ ಮಾಡಿ ಸೂರ್ಯದೇವನಿಗೆ ಅರ್ಘ್ಯವನ್ನು ಅರ್ಪಿಸುತ್ತಿರುತ್ತಾರೆ. ಆಗ ಅಂತರಿಕ್ಷದಲ್ಲಿ, ವಿಮಾನದಲ್ಲಿ ಕುಳಿತು ಚಿತ್ರರಥನು ತನ್ನ ಪತ್ನಿಯೊಡನೆ ಸರಸ ಸಲ್ಲಾಪದಿಂದ ಕ್ರೀಡೆಯಲ್ಲಿ ತೊಡಗಿರುವನು. ಮದಿರೆ ಕುಡಿದು, ತಾಂಬೂಲ ಸವಿಯುತ್ತ ಕೆಳಗಡೆ ಇರುವ ಮುನಿಗಳನ್ನು ನೋಡುವನು. ಅವರು ಸೂರ್ಯನಿಗೆ ಅರ್ಘ್ಯವನ್ನು ಅರ್ಪಿಸುವುದನ್ನು ನೋಡಿ ಕುಚೇಷ್ಟೆ ಮಾಡುವನು. ಅಲ್ಲದೆ ಅರ್ಘ್ಯದ ಬೊಗಸೆಯಲ್ಲಿ ಬಾಯಿಯಲ್ಲಿರುವ ಮದಿರೆಯನ್ನು ಉಗುಳಿ ಮೋಜು ಮಾಡುವನು. ಪತ್ನಿ ಮಾಲತಿ ನಿಶೆಯಲ್ಲಿ ಹೀಗೆ ಮುನಿಗಳಿಗೆ ಅಪಮಾನ ಮಾಡುವುದು ಸರಿಯಲ್ಲ ಎಂದು ಹೇಳಿದರೂ ಚಿತ್ರರಥ ಕೇಳುವುದಿಲ್ಲ. ಒಂದಲ್ಲ ಎರಡು ಸಲ ಗಾಲವಮುನಿಯ ಬೊಗಸೆಯಲ್ಲಿ ಎಂಜಲು ಮದಿರೆ ಉಗುಳುವನು. ಬೊಗಸೆ ನೀರು ಕೆಂಪಾಗಿರುವುದನ್ನು ನೋಡಿ ಹೀಗೇಕಾಯಿತೆಂದು ಮುನಿಗಳು ಮೇಲೆ ನೋಡಿದರೆ ಚಿತ್ರರಥನು ಗಹಗಹಿಸಿ ನಗುತ್ತಿದ್ದನು. ಮತ್ತು 'ಸ್ವರ್ಗದ ಗಂಧರ್ವರಾಜನಾದ ಚಿತ್ರರಥನ ಮತ್ತು ಅವನ ಪ್ರೇಯಸಿಯ ಉಚ್ಛಿಷ್ಟ ಮುಖರಸದ ಆಸ್ವಾದವನ್ನು ಒಮ್ಮೆಯಾದರೂ ತಕ್ಕೊಳ್ಳಿರಿ ಎಂದು ಕಟಕಿಯಾಡುವನು.

ಗಾಲವ ಮತ್ತು ಕೌಶಿಕ ಮುನಿಗಳಿಬ್ಬರೂ ಅಪಮಾನದಿಂದ ಕುದಿಯುತ್ತಿರುವಾಗ ಅಲ್ಲಿಗೆ ನಾರದ ಲಗುಬಗೆಯಿಂದ ಬರುತ್ತಾನೆ. ಗಾಲವಮುನಿ ನಾರದರಿಗೆ ಗಂಧರ್ವನಿಂದ ನಡೆದ ಅಸಹ್ಯಕೃತ್ಯವನ್ನು ಹೇಳುವನು ಮತ್ತು ಶಾಪ ಕೊಟ್ಟು ಅವರಿಗೆ ಶಿಕ್ಷಿಸುವುದಾಗಿ ಹೇಳುವನು. ನಾರದನು 'ಇಂಥ ಕಾರ್ಯಕ್ಕೆ ತಪಸ್ಸಿನ ಪುಣ್ಯವನ್ನು ಏಕೆ ವ್ಯಯ ಮಾಡಬೇಕು? ಎಂದು ಬೇರೊಂದು ಉಪಾಯ ಸೂಚಿಸುವರು.

'ಕ್ಷತ್ರೀಯ ವೀರನೂ, ಯದುಕುಲತಿಲಕನೂ ಆದ ಶ್ರೀಕೃಷ್ಣನು ಕ್ರೀಡೆಯ ದೆಸೆಯಿಂದ ಗಂಗಾತೀರಕ್ಕೆ ಬಂದಿದ್ದಾನೆ ಅವನನ್ನು ಭೇಟಿಯಾಗಿರಿ. ಚಿತ್ರರಥನ ಪಾರುಪತ್ಯವನ್ನು ಅವನ ಕೈಯಿಂದಲೇ ಮಾಡಿಸಿರಿ' ಎಂದು ಹೇಳುವನು. ಆಗ ಮುನಿಗಳಿಬ್ಬರೂ ನಾರದನ ಜೊತೆಗೆ ಶ್ರೀಕೃಷ್ಣನಿರುವ ಶಿಬಿರಕ್ಕೆ ಬರುವರು. ಶ್ರೀಕೃಷ್ಣನು ಮುನಿಗಳ ವಿಚಾರ ಕ್ಷೇಮವನ್ನು ವಿಚಾರಿಸುತ್ತಿದ್ದಂತೆ ಗಾಲವಮುನಿಯು ಗಂಧರ್ವರಿಂದ

ತಪೋಭಂಗವಾಗುತ್ತಿರುವ ಬಗ್ಗೆ ಹೇಳಿ ಚಿತ್ರರಥನಿಂದಾದ ಪ್ರಮಾದವನ್ನು ತಿಳಿಸುವರು. ಅದೇ ಕಾಲಕ್ಕೆ ಮುನಿಕುಮಾರರು ಬಂದು ಗಂಧರ್ವ ದಂಪತಿಗಳಿಂದ ತಮ್ಮ ಮೇಲಾದ ಹಲ್ಲೆಯನ್ನು ಹೇಳುವರು.

ಮುನಿಗಳ ಮತ್ತು ಮುನಿಕುಮಾರರ ಮೇಲೆ ಗಂಧರ್ವರಿಂದಾದ ಅಪಮಾನದ ಮತ್ತು ದೌರ್ಜನ್ಯದ ಪ್ರಕರಣವನ್ನು ದೇವೇಂದ್ರನ ಗಮನಕ್ಕೆ ತಂದು ಅವರಿಗೆ ತಕ್ಕ ಶಿಕ್ಷೆಯಾಗುವಂತೆ ಮಾಡುವುದಾಗಿ ಕೃಷ್ಣ ಅಭಯವನ್ನು ಹೇಳುವನು, ಗಾಲವಮುನಿಗೆ ಕೃಷ್ಣನ ಮಾತುಗಳಿಂದ ಸಮಾಧಾನವಾಗುವುದಿಲ್ಲ ಚಿತ್ರರಥನಿಗೆ ಘೋರ ಶಿಕ್ಷೆ ನಿನ್ನಿಂದಲೇ ಆಗಬೇಕೆಂದು ಶ್ರೀಕೃಷ್ಣನಿಗೆ ಒತ್ತಾಯ ಮಾಡುವರು. ಮುನಿಯ ಒತ್ತಾಯಕ್ಕೆ ಮಣಿದ ಶ್ರೀಕೃಷ್ಣನು ಹನ್ನೆರಡು ಪ್ರಹರ ಅವಧಿಯೊಳಗೆ ಚಿತ್ರರಥನ ರುಂಡ ಚೆಂಡಾಡುವುದಾಗಿ ಪ್ರತಿಜ್ಞೆ ಮಾಡುವನು. ಇದಿಷ್ಟು ಒಂದನೇಯ ಅಂಕದ ಕಥೆ.

ನಾರದರು ಗಂಗಾತೀರದಿಂದ ಇಂದ್ರಲೋಕದಲ್ಲಿರುವ ಚಿತ್ರರಥನ ಅರಮನೆಗೆ ಬರುವರು. ಅಲ್ಲಿ ಚಿತ್ರರಥನು ಮದಿರೆ ಸೇವಿಸಿ ತನ್ನ ಸಂಗೀತ ಸಾಧನೆ ಬಗ್ಗೆ ಸಂಭ್ರಮಿಸುತ್ತಿದ್ದನು. ಹಿಂದಿನ ದಿನದ ಸಂಗೀತ ಕಛೇರಿಗೆ ರಸಿಕರಿಂದ ಸಿಕ್ಕ ಪ್ರತಿಕ್ರಿಯೆ ಬಗ್ಗೆ ಹೆಂಡತಿಗೆ ಹೇಳುತ್ತ ಹೆಮ್ಮೆ ಪಡುತ್ತಿದ್ದನು. ಅದೇ ವೇಳೆಗೆ ಅಲ್ಲಿಗೆ ಬಂದ ನಾರದರು ಶ್ರೀಕೃಷ್ಣನು ಮಾಡಿದ ಪ್ರತಿಜ್ಞೆಯ ವಿಷಯ ತಿಳಿಸುವನು ನಿಶೆಯಲ್ಲಿ ನಾರದನ ಮಾತನ್ನು ಕೇಳಿ ಚಿತ್ರರಥ ಚೇಷ್ಟೆ ಮಾಡುವನು. ಆದರೆ ಮಾಲತಿ ಗಂಡನಿಗೆ ಒದಗಿರುವ ಸಂಕಟವನ್ನು ತಿಳಿದು ಪಶ್ಚಾತ್ತಾಪ ಪಡುವಳು. ಪತಿಯನ್ನು ಪ್ರಾಣ ಸಂಕಟದಿಂದ ಪಾರು ಮಾಡಬೇಕೆಂದು ಬೇಡಿಕೊಳ್ಳುವಳು. ಅವಳ ದುಃಖವನ್ನು ನೋಡಿ ನಾರದನು ಆ ಪತಿಪತ್ನಿಯರನ್ನು ಕರೆದುಕೊಂಡು ದ್ವಾರಕಾ ಪಟ್ಟಣಕ್ಕೆ ಹೊರಡುವನು.

ರಾತ್ರಿ ಸಮಯ ಗಂಗಾತೀರದಲ್ಲಿರುವ ಅರ್ಜುನನ ಬಿಡಾರಕ್ಕೆ ನಾರದಮುನಿ ಬರುವನು. ದ್ರೌಪದಿ ಇನ್ನೂ ಮಲಗಿದ್ದಳು. ನಾರದ ದಾಸಿಯ ಸಹಾಯದಿಂದ ಅವಳನ್ನು ಎಚ್ಚರಿಸಿ ನಸುಕಿನಲ್ಲಿ ಪುಣ್ಯದ ಪರ್ವಕಾಲವಿರುವುದಾಗಿ ಹೇಳುವನು. ಆ ಶುಭಘಳಿಗೆಯಲ್ಲಿ ಸ್ನಾನ ಮಾಡಿ ದಾನ-ಧರ್ಮ ಮಾಡಿದರೆ ಪುಣ್ಯ ಬರುವುದೆಂದು ಹೇಳುವನು. ನಾರದನ ಮಾತಿನಂತೆ ದ್ರೌಪದಿ ಗಂಗಾನದಿಯಲ್ಲಿ ಸ್ನಾನ ಮಾಡಿ ಸಂಕಲ್ಪಕ್ಕಾಗಿ ಸಿದ್ಧತೆ ನಡೆಸಿದ್ದಳು. ಅಷ್ಟರಲ್ಲಿ ಹೆಣ್ಣುಮಕ್ಕಳ ಅಳುವನ್ನು ಕೇಳುವಳು. ನಾರದನು ತಾನೇ ರೂಪಿಸಿದ ದೃಶ್ಯ ಆದರೆ ಅದು ದ್ರೌಪದಿಗೆ ಗೊತ್ತಾಗದ ಹಾಗೆ ಅವಳಿಗೆ ತೋರಿಸುವನು. ಚಿತ್ರರಥನು ಅಗ್ನಿಪ್ರವೇಶದ ಸಿದ್ಧತೆಯಲ್ಲಿರುವನು ಮಾಲತಿ ಅಪಾರವಾಗಿ ಶೋಕಿಸುತ್ತಿರುವಳು. ಉಳಿದ ಅಪ್ಸರೆಯರು ದುಃಖದಲ್ಲಿದ್ದಾರೆ ಆ ಸನ್ನಿವೇಶದಿಂದ ವ್ಯಾಕುಲಳಾದ ದ್ರೌಪದಿ "ಅಮ್ಮಾ, ನೀನು ಯಾರು? ಹೀಗೆ ಅಗ್ನಿಪ್ರವೇಶ ಮಾಡಲು ಏನು ಕಾರಣ. ನಿನ್ನ ಸಂಕಟವು ನನ್ನಿಂದ ಪರಿಹಾರ ಮಾಡುವಂತಿದ್ದರೆ ನಾನು ಯತ್ನ ಮಾಡುತ್ತೇನೆ.' ಎಂದು ನೆರವಿಗೆ ಧಾವಿಸುವಳು, ನೆರವಿಗೆ ಬಂದವಳು ದ್ರೌಪದಿ ಎಂದು ಮಾಲತಿಗೆ ಗೊತ್ತಾಗುವುದು ತನ್ನ ಪತಿಯ ಪ್ರಾಣರಕ್ಷಣೆಗೆ ತ್ರೈಲೋಕದ ಚಿಂತಾಮಣಿಯೇ ದೊರಕಿತು ಎಂದು

ಧೈರ್ಯ ತಾಳುವಳು. ದ್ರೌಪದಿಯು 'ನೀನು ಸೌಭಾಗ್ಯವತಿಯಾಗು! ಇದು ನನ್ನ ಆಶೀರ್ವಾದ ಎಂದು ಅಭಯ ನೀಡುವಳು. ಆಮೇಲೆ ಚಿತ್ರರಥನಿಗೆ ಬಂದೊದಗಿದ ಪ್ರಾಣಾಪಾಯದ ಕಥೆ ಹೇಳುವಳು ಗಾಲವ ಮುನಿಗಾಗಿ ಶ್ರೀಕೃಷ್ಣನು ಮಾಡಿದ ಪ್ರತಿಜ್ಞೆ ತಿಳಿದು ಚಿಂತಿತಳಾಗುವಳು. ಶ್ರೀಕೃಷ್ಣನಿಗೆ ಎದುರು ಹಾಕಿಕೊಂಡು ತೊಂದರೆಗೆ ಗುರಿಯಾದಂತಾಯಿತಲ್ಲ ಎಂದು ಯೋಚಿಸುವಳು. ಆಗ ನಾರದನು ದ್ರೌಪದಿಗೆ ಮತ್ತೊಂದು ಉಪಾಯ ಸೂಚಿಸುವನು. ಅರ್ಜುನನಿಂದಲೂ ಚಿತ್ರರಥನಿಗೆ ಪ್ರಾಣದಾನ ದೊರೆಯಬೇಕು ಅಂದರೆ ನೀನು ದಯಪಾಲಿಸಿದ ಪ್ರಾಣದಾನಕ್ಕೆ ಇಮ್ಮಡಿ ಬಲವು ಬರುವುದು' ಎನ್ನುವನು. ದ್ರೌಪದಿಗೂ ಅದು ಸರಿಯೆನಿಸುವುದು. ತಾನು ಕೊಟ್ಟ ಪ್ರಾಣದಾನ ಸಾರ್ಥಕವಾಗಬೇಕೆಂದು ಚಿತ್ರರಥ ದಂಪತಿಗಳನ್ನು ತನ್ನ ಬಿಡಾರಕ್ಕೆ ಕರೆದುಕೊಂಡು ಹೋಗುವಳು. ನಾರದನು 'ಕಲಹನಾಟಕ'ವು ಈಗ ಮಧ್ಯಂತರಕ್ಕೆ ಬಂದು ಒಳ್ಳೆಯ ಕಳೆ ಕಟ್ಟಿ ಹೋಗಿದೆ!' ಎಂದು ಸಂತೋಷಪಡುವನು.

ಮೂರನೇ ಅಂಕದ ಕಥೆ ದ್ರೌಪದಿಯ ಅನಾರೋಗ್ಯದ ಸನ್ನಿವೇಶದಿಂದ ಆರಂಭವಾಗುವುದು ಗಂಗಾತೀರದಿಂದ ಬಂದ ದ್ರೌಪದಿ ಮೈಯಲ್ಲಿ ಹುಷಾರಿಲ್ಲವೆಂದು ದಾಸಿಯರಿಗೆ ಹೇಳುವಳು. ದಾಸಿಯರಿಂದ ಅರ್ಜುನನಿಗೂ ಗೊತ್ತಾಗುವುದು ದ್ರೌಪದಿಯ ವ್ಯಥೆಗೆ ಏನು ಕಾರಣವೆಂದು ತಿಳಿದುಕೊಳ್ಳಲು ಅರ್ಜುನನು ದ್ರೌಪದಿಯನ್ನು ಕೇಳಿದಾಗ ದ್ರೌಪದಿಯು ಒಂದು ವಚನ ಕೊಡಬೇಕೆಂದು ಕೇಳುತ್ತಾಳೆ ಅರ್ಜುನನಿಗೆ ಭಯವಾಗುತ್ತದೆ. ಅದೆಂಥ ವಚನವೆಂದು ತಿಳಿದುಕೊಳ್ಳಲು ಪ್ರಯತ್ನಿಸುತ್ತಾನೆ. ಆದರೆ ದ್ರೌಪದಿ ಅದನ್ನು ಒಡೆದು ಹೇಳುವುದಿಲ್ಲ ಆದರೆ ಪತ್ನಿಯ ವಚನ ಎಂದರೆ ಪತಿಯ ವಚನ ಹೌದಲ್ಲವೆ? ಎಂದು ಕೇಳುವಳು ಅದಕ್ಕೆ ಅರ್ಜುನ 'ಹೌದು' ಎಂದು ಒಪ್ಪಿಕೊಳ್ಳುವನು ಅದಕ್ಕೆ ದ್ರೌಪದಿಯು ನಡೆದ ವಿಷಯ ತಿಳಿಸುವಳು ತನ್ನ ಪರ್ವಕಾಲದ ದಾನವು ಈಗ ಸಫಲವಾಯಿತೆಂದು ಸಂತೋಷಪಡುವಳು.

ಅದೇ ವೇಳೆಗೆ ದ್ರೌಪದಿಗೆ ದೇಹಾಲಾಸ್ಯ ಎಂಬ ಸುದ್ದಿ ತಿಳಿದು ಶ್ರೀಕೃಷ್ಣನು ಅಲ್ಲಿಗೆ ಬರುವನು. ಯೋಗಕ್ಷೇಮದ ಉಭಯ ಕುಶಲೋಪರಿ ನಡೆಯುವುದು. ಆಗ ಅಲ್ಲಿಗೆ ನಾರದನು ಬಂದಾಗ 'ಮತ್ತೇನು ಪರೀಕ್ಷೆಯ ಕಾಲ ಸನ್ನಿಹಿತವಾಯಿತೆ? ಅದಾವ ಚಮತ್ಕಾರ ಇಲ್ಲಿ ನಡೆಯುವುದಿದೆ?' ಎಂದು ಶ್ರೀಕೃಷ್ಣ ನಾರದನಿಗೆ ಕೇಳುವನು. ನಾರದ 'ದೇವಾ ತಾವು ಚಮತ್ಕಾರವನ್ನು ಮಾಡಿ ತೋರಿಸಲು ಸಿದ್ಧರಾದ ಮೇಲೆ ಅದನ್ನು ನೋಡಲು ನನ್ನಂತಹ ರಸಿಕ ಪ್ರೇಕ್ಷಕನು ಅವಶ್ಯವಾಗಿ ಬೇಕಲ್ಲವೇ? ಇಂದಿನವರೆಗೆ 'ಕೃಷ್ಣಲೀಲಾ' ನಾಟಕವು ನಟರ ಚಾತುರ್ಯಕ್ಕಿಂತ ಪ್ರೇಕ್ಷಕರ ರಸಿಕತೆಯಿಂದಲೇ ಹೆಚ್ಚು ಕಳೆ ಕಟ್ಟಿದೆ! ಶ್ರೀಕೃಷ್ಣ, ನನ್ನಂತಹ ಪ್ರಿಯ ಭಕ್ತನ ಆನಂದವೇ, ನಿನ್ನ ನಾಟ್ಯ ವ್ಯವಸಾಯದ ಧ್ಯೇಯವಲ್ಲವೇ? ಎಂದು ನಗೆಯಾಡುವನು ನಾರದನ ಚತುರ ಮಾತಿನಿಂದ ಗಂಭೀರವಾದ ವಿಷಯಕ್ಕೆ ಅವರು ತಲುಪುವರು. ಮುನಿಗಳಿಗೆ ತೊಂದರೆ ಕೊಟ್ಟ ಗಂಧರ್ವನಿಗೆ ದೇಹಾಂತ ಶಿಕ್ಷೆ ಮಾಡುವುದಾಗಿ ಪ್ರತಿಜ್ಞೆ ಮಾಡಿರುವುದಾಗಿ ಶ್ರೀಕೃಷ್ಣ

ನೆನಪಿಸಿಕೊಳ್ಳುವನು. ಆಗ ಅರ್ಜುನ ಕೂಡ 'ದೇವಾ ದೈವದ ಲೀಲೆಯೇ ಅತಿ ವಿಚಿತ್ರವಾಗಿದೆ. ಯಾಕೆಂದರೆ ವನವಿಹಾರದ ಪ್ರಥಮ ದಿವಸ ತಾವು ಒಬ್ಬನ ಪ್ರಾಣ ತಕ್ಕೊಳ್ಳುವ ಪ್ರತಿಜ್ಞೆ ಮಾಡಿದರೆ ಮರುದಿನವೆ ನಾನು ಒಬ್ಬನ ಪ್ರಾಣ ರಕ್ಷಣೆ ಮಾಡುತ್ತೇನೆಂದು ಪ್ರತಿಜ್ಞೆ ಮಾಡಬೇಕಾಯಿತು'! ಎನ್ನುವನು.

ಕೃಷ್ಣನು ತಾನು ಮಾಡಿದ ಪ್ರತಿಜ್ಞೆಯನ್ನು ಸಮರ್ಥಿಸಿಕೊಂಡಂತೆ ಅರ್ಜುನನು ತನ್ನ ಪ್ರತಿಜ್ಞೆ ಸಮರ್ಥಿಸಿಕೊಳ್ಳುವನು. ನಾರದನಿಗೆ ತನ್ನ ತಂತ್ರ ಫಲಿಸುತ್ತಿರುವುದರ ಬಗ್ಗೆ ಸಂತೋಷವಾಗುತ್ತದೆ. ಆಗ ದ್ರೌಪದಿ ಅಲ್ಲಿಗೆ ಬರುವಳು. ಜೊತೆಗೆ ತಾನು ಅಭಯ ನೀಡಿದ ದಂಪತಿಗಳನ್ನೂ ಕರೆತರುವಳು. ಶ್ರೀಕೃಷ್ಣನಿಗೆ ಆಶ್ಚರ್ಯವಾಗುವುದು. 'ಗಂಧರ್ವಲೋಕದ ಗಾಯಕ ಚಿತ್ರರಥ ಇವನೇ ಏನು? ಎಂದು ಕೇಳುವನು. ದ್ರೌಪದಿ 'ಈತನೇ ಹೌದು' ಎಂದು ಹೇಳುವಳು. ಗಾಲವಮುನಿಯ ಅರ್ಘ್ಯದಲ್ಲಿ ಉಚಿಷ್ಟ್ಯಮದ್ಯವನ್ನು ಉಗುಳಿದ ಮಹಾಪಾಪಿ! ನಿನಗೆ ಶಿಕ್ಷೆಯಾಗಬೇಕು ನನ್ನ ಪ್ರತಿಜ್ಞೆ ಈಡೇರಬೇಕು ಸಿದ್ಧನಾಗು' ಎಂದು ಶ್ರೀಕೃಷ್ಣ ಕೋಪಾವಿಷ್ಟನಾಗಿ ಹೇಳುವನು. ಚಿತ್ರರಥನು ತನ್ನ ಅಪರಾಧ ಮನ್ನಿಸಬೇಕೆಂದು ಪರಿಪರಿಯಿಂದ ಬೇಡಿಕೊಳ್ಳುವನು. ಶ್ರೀಕೃಷ್ಣನು ಯಾರನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿರುವನೋ ಅದೇ ಗಂಧರ್ವನನ್ನು ರಕ್ಷಿಸಿಸುವುದಾಗಿ ಅರ್ಜುನನು ಪ್ರತಿಜ್ಞೆ ಮಾಡಿರುವನು ಇವರಿಬ್ಬರೂ ತಮ್ಮ ತಮ್ಮ ಪ್ರತಿಜ್ಞೆಗೆ ಬದ್ಧರಾಗಿ ಮಾತನಾಡುವರು. 'ನಾನು ನನ್ನ ಪ್ರತಿಜ್ಞೆ ನಿಷ್ಫಲಗೊಳಿಸಲಾರೆ. ಚಿತ್ರರಥನ ಶಿರಸ್ಸನ್ನು ನಾನು ಇಲ್ಲಿಯೇ ಛೇದಿಸತಕ್ಕವನು' ಎಂದು ಕೃಷ್ಣ ಕೂಗಿದರೆ, 'ನಡೆ ಚಿತ್ರರಥಾ, ಈ ಅರ್ಜುನನ ದೇಹದಲ್ಲಿ ಪ್ರಾಣವಿರುವವರೆಗೆ ನಿನ್ನನ್ನು ರಕ್ಷಿಸುತ್ತೇನೆ' ಎಂದು ಅರ್ಜುನ ಹೇಳುವನು ಚಿತ್ರರಥನ ಸಲುವಾಗಿ ಇಬ್ಬರು ಜೀವದ ಗೆಳೆಯರು ತಮ್ಮ ತಮ್ಮ ಪ್ರತಿಜ್ಞೆಗೆ ಕಟ್ಟು ಬಿದ್ದು ಕಲಹವಾಡುವ ಪ್ರಸಂಗ ಬಂದೊದಗಿತ್ತು ಇದೆಲ್ಲವೂ ನಾರದರ ಕುಚೇಷ್ಟೆ ಎಂದು ಸತ್ಯಭಾಮೆ ಚಿಂತಿತಳಾಗುವಳು. ತನ್ನ ಪ್ರತಿಜ್ಞೆ ಶ್ರೀಕೃಷ್ಣ ಹಿಂದಕ್ಕೆ ಪಡೆಯಬೇಕೆಂದು ದ್ರೌಪದಿ, ಅರ್ಜುನ, ನಾರದ, ಸತ್ಯಭಾಮೆ ಎಲ್ಲರೂ ಪ್ರಯತ್ನಿಸುವರು. ಆದರೆ ಶ್ರೀಕೃಷ್ಣ ಒಪ್ಪುವುದಿಲ್ಲ.

ದ್ರೌಪದಿಯಿಂದ ಚಿತ್ರರಥನ ಪ್ರಾಣರಕ್ಷಣೆಯ ಪ್ರಯತ್ನ ನಡೆದಿರುವುದೆಂಬ ವಾರ್ತೆ ಗಾಲವ ಮತ್ತು ಕೌಶಿಕಮುನಿಗಳಿಗೆ ತಿಳಿಯುವುದು. ತಪಸ್ವಿಗಳನ್ನು ರಕ್ಷಿಸುವ ಕ್ಷತ್ರಿಯರು ಈ ಭೂಮಿಯಲ್ಲಿ ಇರುವರೇ ಎಂಬುದನ್ನು ಕಾದುನೋಡಬೇಕು; ಎಂದು ಶ್ರೀಕೃಷ್ಣ ಪ್ರತಿಜ್ಞೆ ಏನಾಗುವುದೋ ನೋಡಬೇಕು ಎಂದು ಮುನಿಗಳು ಚರ್ಚೆಯಲ್ಲಿದ್ದಾಗ ಅಲ್ಲಿಗೆ ದ್ರೌಪದಿ, ಸತ್ಯಭಾಮಾ, ಚಿತ್ರರಥ, ಮಾಲತಿ, ಕನಕಶ್ರೀ, ಬರುವರು. ಯುದ್ಧ ಮುಗಿಸಿಕೊಂಡು ಸಂತೋಷದಿಂದ ಕೆಲದಿನ ಕಳೆಯಬೇಕೆಂದು ಗಂಗಾತೀರಕ್ಕೆ ಬಂದರೆ. ಅಲ್ಲಿ ಮತ್ತೊಂದು ಯುದ್ಧ ಸಿದ್ಧವಾಗುತ್ತಿದೆ. ಗಂಧರ್ವರು, ಮುನಿಗಳು ಸೇರಿ ಶ್ರೀಕೃಷ್ಣ ಅರ್ಜುನರ ಸಂತೋಷಕ್ಕೆ ಸಂಚಕಾರ ತಂದಂತಾಯಿತು ಎಂದು ಕನಕಶ್ರೀ ಬೇಸರ ವ್ಯಕ್ತ ಮಾಡುವಳು. ಅವಳ ಮಾತು ಸರಿಯೆನಿಸಿ ಮುನಿಗಳು ಚಿತ್ರರಥರನ್ನು ಕ್ಷಮಿಸಲು ಮುಂದಾಗುವರು ಅದರಿಂದ ಶ್ರೀಕೃಷ್ಣ ಅರ್ಜುನರ ಪ್ರತಿಜ್ಞೆಗಳಿಗೆ –

ಸಂಘರ್ಷಕ್ಕೆ ಕೊನೆ ಹಾಡಿದಂತಾಗುವುದು ಎನ್ನುವರು. ಎಲ್ಲರೂ ಸೇರಿ ಗಂಗಾತೀರದಲ್ಲಿರುವ ಶ್ರೀಕೃಷ್ಣ ಅರ್ಜುನರ ಕಡೆಗೆ ಬರುವರು.

ಶ್ರೀಕೃಷ್ಣ ಅರ್ಜುನರು ಯುದ್ಧಕ್ಕೆ ಸನ್ನದ್ಧರಾಗಿರುವರು ಒಪ್ಪಂದಕ್ಕೆ ಇಬ್ಬರೂ ಬರುತ್ತಿಲ್ಲ. ಪ್ರತಿಜ್ಞಾಭಂಗಕ್ಕಿಂತ ಮರಣವೇ ಮೇಲು ಎಂಬ ನಿಲುವು ಇಬ್ಬರದೂ. ತಮ್ಮ ಪ್ರತಿಜ್ಞೆ ಸಫಲವಾಗಬೇಕೆಂಬ ಹಟ ಇಬ್ಬರಲ್ಲಿ, ಕೊನೆಗೂ ಕೃಷ್ಣಾರ್ಜುನರಲ್ಲಿ ಯುದ್ಧ ನಡೆಯುತ್ತದೆ. ಕೃಷ್ಣನ ಬಾಣದಿಂದ ಅರ್ಜುನ ಮೂರ್ಛೆ ಹೋಗುವನು. ಕೂಡಲೇ ಅವನೇ ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಪಾರ್ಥನನ್ನು ಉಪಚರಿಸುವನು. ಆ ಸಮಯದಲ್ಲಿ ಅಲ್ಲಿಗೆ ಚಿತ್ರರಥ, ಸತ್ಯಭಾಮೆ, ದ್ರೌಪದಿ ನಾರದರು ಬರುವರು. ಕೃಷ್ಣನಿಗೆ ತನ್ನ ಪ್ರತಿಜ್ಞೆ ನೆರವೇರಿಸುವ ಹಂಬಲ. ಅರ್ಜುನನು ಮೂರ್ಛೆ ಹೋಗಿರುವನು. ಇನ್ನು ಚಿತ್ರರಥನನ್ನು ಮುಗಿಸಬೇಕೆಂದು ಬಾಣ ಬಿಡುವಷ್ಟರಲ್ಲಿ ಅರ್ಜುನ ಎಚ್ಚರಾಗಿ ಮಧ್ಯದಲ್ಲಿ ನಿಲ್ಲುವನು. ಯುದ್ಧಕ್ಕೆ ಮತ್ತೆ ಅಣಿಯಾಗುವನು. ಅಷ್ಟರಲ್ಲಿ ಗಾಲವನು ಮಧ್ಯೆ ಪ್ರವೇಶಿಸುವನು 'ಅರ್ಜುನಾ, ಶ್ರೀಕೃಷ್ಣಾ, ನೀವೀರ್ವರು ಅಸ್ತ್ರಗಳನ್ನು ಹಿಂದೆಗೆಯಲಿಕ್ಕೇಬೇಕು ನನ್ನ ಶಪಥವಿದೆ ನಿಮಗೆ ಪಶ್ಚಾತ್ತಾಪದಿಂದ ಮೊದಲಿನ ಉನ್ಮತ್ತ ಚಿತ್ರರಥನು ಮೃತನಾದನು. ಈಗ ಅವನು ವಿವೇಕಿಯಾಗಿದ್ದಾನೆ. ದೇವಾ ನಿನ್ನ ಪ್ರತಿಜ್ಞೆಯ ಉದ್ದೇಶವು ಬರಿಯ ಉಚ್ಚಾರದಿಂದ ಸಫಲಗೊಂಡ ಮೇಲೆ ಯುದ್ಧಕ್ಕೆ ಕಾರಣವೆಲ್ಲಿ ಉಳಿಯಿತು? ಚಿತ್ರರಥಾ ಹೀಗೆ ಬಾ! ಶ್ರೀಕೃಷ್ಣನ ಪಾದಗಳ ಮೇಲೆ ಬೀಳು' ಎಂದು ಯುದ್ಧಕ್ಕೆ ವಿರಾಮ ಹೇಳುವನು. ನಾರದನಾದರೂ ತನ್ನ ಕಲಹಪ್ರಿಯತೆಯು ಪರೋಪಕಾರ ಬುದ್ಧಿಯದು. ಇಲ್ಲದ ತೊಡಕನ್ನು ತಂದೊಡ್ಡಿ ಉತ್ಸವ ಸಮಾರಂಭಕ್ಕೆ ಕಳೆ ತರುವುದು ಎಂದು ಹಾರೈಸುವನು ಇಲ್ಲಿಗೆ ನಾಟಕ ಮಂಗಲವಾಗುವುದು.

**೪: ಎರಡನೇ ಬಾಜೀರಾವ ಪೇಶವೆ**

ದೀಕ್ಷಿತರು ಮರಾಠಿಯಲ್ಲಿ ಬರೆದ ಈ ನಾಟಕವನ್ನು ವಾಮನರಾಯರು ತಮ್ಮ ಕಂಪನಿಯ ಪ್ರಯೋಗಕ್ಕಾಗಿ ಅನುವಾದಿಸಿದರು. ಪೇಶವೆ ಆಡಳಿತ, ಮರಾಠಾ ಸಾಮ್ರಾಜ್ಯದ ಅಂತ್ಯವನ್ನು ಪರಿಣಾಮಕಾರಿಯಾಗಿ ಈ ನಾಟಕವು ಪ್ರದರ್ಶಿಸುತ್ತದೆ. ಒಂದು ಕಾಲದಲ್ಲಿ ಅತ್ಯಂತ ವೈಭವದಿಂದ ಆಳ್ವಿಕೆ ನಡೆಸಿದ ಮರಾಠಾ ರಾಜ್ಯವು ಹೇಗೆ ಬ್ರಿಟಿಷ, ಆಡಳಿತಕ್ಕೆ ಒಳಗಾಯಿತು? ೨ನೆಯ ಬಾಜೀರಾವನ ಚಟುವಟಿಕೆಗಳು ಹೇಗಿದ್ದವು? ಎಂಬುದರ ಚಿತ್ರಣ ನಾಟಕದ ವಸ್ತು. ನಾಟಕ ಪುಸ್ತಕ ರೂಪದಲ್ಲಿ ೧೯೪೨ ಡಿಸೆಂಬರ್ ೧೫ ರಂದು ಪ್ರಕಾಶನವಾಯಿತು. ವಾಮನರಾಯರ ಮಗ ವೆಂಕಟರಾಯರ ನೇತೃತ್ವದ 'ವಿಶ್ವಗುಣಾದರ್ಶ ಪ್ರಕಾಶನ ಸಮಿತಿ, ಧಾರವಾಡ' ನಾಟಕವನ್ನು ಪ್ರಕಟಿಸಿತು ೧೧೬ ಪುಟಗಳಿವೆ, ೫ ಅಂಕಗಳಿವೆ.

ಭಾರತದ ರಾಜಕೀಯ ಚರಿತ್ರೆಯಲ್ಲಿ ಮರಾಠಾ ಸಾಮ್ರಾಜ್ಯದ್ದೇ ಒಂದು ಪ್ರಮುಖ ಅಧ್ಯಾಯ. ಶೌರ್ಯ, ಸಾಹಸಗಳಿಗೆ, ಧರ್ಮನೀತಿಗೆ ಮತ್ತು ಒಂದು ಕಾಲದ ಜನಾಂಗದ ಉದ್ಧಾರಕ್ಕೆ ಹೆಸರಾದ ಈ

ಸಾಮ್ರಾಜ್ಯವನ್ನು ಛತ್ರಪತಿ ಶಿವಾಜಿ ಮಹಾರಾಜರು ಸ್ಥಾಪಿಸಿದರು. ದಕ್ಷಿಣ ಭಾರತದಲ್ಲಿ ಬೆಳೆಸಿ ಇದನ್ನು ಉತ್ತರ ಭಾರತಕ್ಕೆ ಕೊಂಡೊಯ್ದ ಶ್ರೇಯಸ್ಸು ಅಸಂಖ್ಯಾತ ಮರಾಠಾ ವೀರರದು. ಇಂಥ ಮಹಾನ್ ಸಾಮ್ರಾಜ್ಯದ ಘನತೆಗೆ ಮುಳ್ಳಾದವರು ಎರಡನೇ ಬಾಜೀರಾವ ಪೇಶವೆ. ಇವನೊಬ್ಬ ಹೇಡಿ ಪುಕ್ಕಲು ರಾಜ. ವಿಲಾಸೀ ಜೀವನದಲ್ಲಿ ಮಾತ್ರ ವೀರ. ವಿಷಯ ಸುಖದಲ್ಲಿ ಮುಳುಗಿ ಏಳುವ ಲಂಪಟ. ಸ್ವಯಂಕೃತ ಅಪರಾಧಗಳಿಂದ ಸ್ವರಾಜ್ಯಕ್ಕೆ ಮಾರಿಯಾದನು. ತನ್ನ ಕೈಯಿಂದಲೇ ತನ್ನ ಮನೆಗೆ ಬೆಂಕಿ ಇಟ್ಟನು. ಬ್ರಿಟಿಷ ಅಧಿಕಾರಿಗಳಿಗೆ ಉಪಕಾರಿಯಾದನು. ಇವನಿಂದಾಗಿಯೇ ಮಹಾರಾಷ್ಟ್ರ ತನ್ನ ಸ್ವಾತಂತ್ರ್ಯವನ್ನು ಬಲು ಸುಲಭವಾಗಿ ಕಳೆದುಕೊಂಡಿತು.

ಮೊದಲ ಅಂಕದಲ್ಲಿಯೇ ಎರಡನೇ ಬಾಜೀರಾವನ ಅಪರಾಧಗಳ ಪರಿಚಯವಾಗುತ್ತದೆ. ಸ್ವರಾಜ್ಯನಿಷ್ಠ ಸರದಾರರು, ದೇಶಭಕ್ತರು, ವೀರರು ರಾಜನ ದುಷ್ಟ ನಡತೆಗಾಗಿ ಚಿಂತಿಸುತ್ತಾರೆ. ಈ ಬಾಜೀರಾಯನು ರಾಜನಾದ ಸವಾಯಿ ಮಾಧವರಾಯನನ್ನು ಪೀಡಿಸಿ ಕೊಲೆ ಮಾಡಿದ್ದಾನೆ. ನಾರಾಯಣರಾಯನ ಕೊಲೆಗೂ ಕಾರಣನಾಗಿದ್ದಾನೆ. ವಿಠೋಜಿ ಹೋಳ್ಕರ್‌ನನ್ನು ಆನೆಯಿಂದ ತುಳಿಸಿದ್ದಾನೆ. ಪಂಢರಪುರದ ಲಿಮೆಯವರ ಮನೆಯಲ್ಲಿ ಗಂಗಾಧರಶಾಸ್ತ್ರಿಯನ್ನು ಕೊಲ್ಲಿಸಿದ್ದಾನೆ. ತನ್ನ ಭೋಗಕ್ಕಾಗಿ ಸರದಾರರ ಪತ್ನಿಯರನ್ನು ಸೆಳೆದಿದ್ದಾನೆ. ಗಣಪತರಾವ ಪಾನಸೆ ಅವರ ಪತ್ನಿ ಅರಮನೆಯ ಹತ್ತಿರ ಸುಳಿಯಲಿಲ್ಲವೆಂದು ಅವರ ಮನೆ ಜಪ್ತ ಮಾಡಿಸಿದ್ದಾನೆ. ಗಂಗಾಧರಶಾಸ್ತ್ರಿ ಅವರ ಮಗಳು ಲಕ್ಷ್ಮಿಯ ಚೆಲುವಿಗೆ ಹುಚ್ಚನಾಗಿ ಅವಳ ಹಿಂದೆ ಬಿದ್ದಿದ್ದಾನೆ. ಇಂತಹ ಅನೇಕ ಚಟುವಟಿಕೆಗಳಲ್ಲಿ ತೊಡಗಿರುವ ಎರಡನೇ ಬಾಜೀರಾಯ ಬಗ್ಗೆ ರಾಜ್ಯದ ಜನರಲ್ಲಿ ಸಮಾಧಾನವಿರಲಿಲ್ಲ. ರಾಜನಿಗೂ ತಪ್ಪಿನ ಅರಿವಿದೆ ಅದಕ್ಕೆಂದೇ ಅವನು ರಾಜ್ಯದ ಗುಡಿ ಗುಂಡಾರಗಳಲ್ಲಿ ನಂದಾದೀಪಗಳನ್ನು ಉರಿಸಿ ಪ್ರಾಯಶ್ಚಿತ್ತ ಪಡುತ್ತಿದ್ದಾನೆ.

ಈ ರಾಜನ ಇನ್ನೊಂದು ದೌರ್ಬಲ್ಯ ಎಂದರೆ ಒಳಗಿಂದೊಳಗೇ ಬ್ರಿಟಿಷ ಅಧಿಕಾರಿಗಳೊಡನೆ ಸ್ನೇಹ ಬೆಳೆಸಿರುವುದು ಒಂದು ಕಡೆಗೆ ಪ್ರಜೆಗಳಿಗೆ ದ್ರೋಹ, ಮತ್ತೊಂದು ಕಡೆಗೆ ರಾಜದ್ರೋಹ. ರಾಜನ ವರ್ತನೆಗೆ ಸ್ವರಾಜ್ಯ ಭಕ್ತರು ಕ್ರುದ್ಧರಾಗಿದ್ದಾರೆ. ಸ್ವರಾಜ್ಯಭಕ್ತಿಯೇ ಮೈವೆತ್ತಿದಂತಹ ಲಕ್ಷ್ಮೀ ರಾಜನ ಎದುರೇ ಅವನ ಗುಣಗಳನ್ನು ಎತ್ತಿ ಮಾತನಾಡುತ್ತಾಳೆ.

'ಶಿವಛತ್ರಪತಿಯು ಸ್ವರಾಜ್ಯದ ವೃಕ್ಷವನ್ನು ನೆಟ್ಟರು, ಅದಕ್ಕೆ ಮುಂದೆ ಅಸಂಖ್ಯಾತ ಮರಾಠಾ ವೀರರು ನೀರುಣಿಸಿದರು, ಬೆಳೆಸಿದರು. ಅದು ಬದುಕಬೇಕೆಂದು ಸೋನಪತ್-ಪಾನಿಪತ್‌ಗಳಲ್ಲಿ ಒಂದು ಲಕ್ಷ ಐವತ್ತು ಸಾವಿರ ಸ್ತ್ರೀಯರು ಸೌಭಾಗ್ಯಹೀನರಾದರು. ಇನ್ನೂ ಅದರ ಬೆಳವಣಿಗೆಯು ಆಗಬೇಕಾಗಿದೆ, ಫಲಭಾರದಿಂದ ತೂಗುವ ದಿನಗಳಂತೂ ಬಹಳ ದೂರ ಇವೆ. ಜನಾಂಗವನ್ನೇ ಉದ್ಧಾರ ಮಾಡುವ ಈ ಸ್ವರಾಜ್ಯ ವೃಕ್ಷಕ್ಕೆ ನೀನು ಬ್ರಹ್ಮಹತ್ಯೆ, ವಚನಭಂಗ, ಸೇವಕದ್ರೋಹ, ಸ್ತ್ರೀವಾಂಛೆ, ಹೀಗೆ ಅನೇಕ ಪ್ರಕಾರದ

ಹುಳಗಳನ್ನು ಹತ್ತಗೊಡುತ್ತಿರುವಿ! ಈ ಸ್ವರಾಜ್ಯದ ಪತಾಕೆ ಮರಾಠರ ಪಂಚಪ್ರಾಣ ಈ ಪಂಚಪ್ರಾಣವನ್ನು ಪೇಶವೆಯವರು ಸ್ವಾಧೀನಪಡಿಸಿದರು............. ಎಲೋ ಸ್ವರಾಜ್ಯವನ್ನು ಸ್ಥಾಪಿಸುವುದು ಮತ್ತು ಅದನ್ನು ಹಾಳು ಮಾಡುವುದು ಎಂದರೆ ಹುಡುಗರ ಆಟವಾಗಿದೆಯೇ ನಿನಗೆ?"

ಲಕ್ಷ್ಮಿ, ಠಾಕುರದಾಸ, ಬಾಪು ಗೋಖಲೆ, ಗೆಹನಾಜಿ, ಮಿಂಚೂರಕರ ಇವರೆಲ್ಲ ಮರಾಠಾ ರಾಜ್ಯದ ಹಿತಚಿಂತಕರು. ಅದರ ಗೌರವ ಘನತೆಗಾಗಿ ಪ್ರಾಣವನ್ನು ಪಣಕ್ಕಿಟ್ಟು ಹೋರಾಡುವಂತಹ ವೀರರು. ಇನ್ನು ಬಾಳಾಜಿ, ಅನೆಬಾ. ಇವರೆಲ್ಲ ರಾಜನಿಗೆ ಶಿಕ್ಷೆ ಆಗಬೇಕೆಂದು ಸಂಚು ಹೂಡುವರು. ಇದರಲ್ಲಿ ೨ನೇ ಬಾಜೀರಾವ ಮಾತ್ರ ಯಾವ ಸಂಘರ್ಷಕ್ಕೂ ಮುಖಾಮುಖಿ ಆಗದೆ ವಿಷಯ ಸುಖದ 'ಸನ್ನಿಪಾತ' ನಿದ್ರೆಯಲ್ಲಿರುವವ.

ನಾಟಕದ ಉದ್ದಕ್ಕೂ ಅವನ ಶೌರ್ಯ ಸಾಹಸದ ಗೈರುಹಾಜರಿ ಎದ್ದು ಕಾಣುತ್ತದೆ. ಇಂಥ ರಾಜನನ್ನು ಪದಚ್ಯುತಗೊಳಿಸಿ ಬ್ರಿಟಿಷರ ವಿರುದ್ಧ ಎದ್ದು ನಿಲ್ಲುವ ಧೈರ್ಯ ಲಕ್ಷ್ಮಿ ಮತ್ತು ಬಾಪು ಗೋಖಲೆಯವರ ಪ್ರಯತ್ನದಲ್ಲಿದೆ. ಇದು ತಿಳಿದು ಬ್ರಿಟಿಷ ಅಧಿಕಾರಿ ಎಲಿಫಿನ್‌ಸ್ಟನ್ ಮುಂಬಯಿಂದ ಐದು ಸಾವಿರ ಸೈನಿಕರನ್ನು ಪುಣೆಗೆ ಕಳಿಸುತ್ತಾನೆ. ಪೇಶವೆ ಅಧಿಕಾರವನ್ನು ಕಬಳಿಸಲು ಯುದ್ಧ ಸಾರುತ್ತಾನೆ. ಆಗ ಬಾಪು ಗೋಖಲೆ, ಲಕ್ಷ್ಮಿ, ಗೆಹನಾಜಿ, ನಾರೋಪಂತ ಅಠವಲೆ, ಮೋರೋ ದೀಕ್ಷಿತ, ಗಣಪತರಾವ ಪಾನಸೆ, ಅಬಾ ಪುರಂದರೆ, ವಿಠ್ಠಲಪಂತ ವಿಂಚೂರಕರ ಇವರೆಲ್ಲ ಪೇಶವೆ ರಾಜ್ಯದ ಹಿತರಕ್ಷಣೆಗಾಗಿ ಹೋರಾಡುತ್ತಾರೆ. ಆದರೇನು ರಾಜನೇ ನಿರ್ವೀರ್ಯನಂತೆ ವರ್ತಿಸುವುದನ್ನು 'ಲಕ್ಷ್ಮಿ ಸ್ವರಾಜ್ಯಕ್ಕಾಗಿ ಬಾಪು ಗೋಖಲೆಯವಂತಹ ತೇಜಸ್ವಿ ರತ್ನಗಳು ಇಂದು ಬೆಳಗುತ್ತಿವೆ. ಅವರ ಸ್ವಾಭಿಮಾನವನ್ನು, ಶ್ರಮವನ್ನೂ ಮಣ್ಣುಪಾಲು ಮಾಡಬೇಡ!" ಎಂದು ಯುದ್ಧಭೂಮಿಯಲ್ಲಿಯೇ ಹೇಳುತ್ತಾಳೆ. ಅದಕ್ಕೆ ಈ ಬಾಜೀರಾಯನು "ಈ ಉಪದೇಶ ಕೇಳಿ ಕೇಳಿ ನಾನು ತೀರ ಬೇಸತ್ತು ಹೋಗಿದ್ದೇನೆ" ಎಂದು ಓಡಿಹೋಗಲು ಯತ್ನಿಸುವನು ಅವನನ್ನು ಅಡ್ಡಗಟ್ಟಿ ಲಕ್ಷ್ಮಿ ಹೇಳುವ ಮಾತುಗಳು:

"ಎಲವೋ, ಅಂಜುಗುಳಿಯೇ ಈ ಲಕ್ಷ್ಮಿಯ ರೂಪದಿಂದ ನಿನ್ನ ಸ್ವರಾಜ್ಯಲಕ್ಷ್ಮಿಯೇ ನಿನಗೆ ಓಡಿ ಹೋಗಬೇಡವೆಂದು ಹೇಳುತ್ತಿರುವಳು ಅದಕ್ಕಾಗಿ ಚೆನ್ನಾಗಿ ವಿಚಾರ ಮಾಡು. ಧೈರ್ಯ ತಂದುಕೊಂಡು. ಇಲ್ಲಿಯೇ ನಿಲ್ಲು." ಎನ್ನುವಳು ಆದರೂ ರಾಜ ಕೊಸರಿಕೊಂಡು ಓಡಿ ಹೋಗುವನು. ಇದರಿಂದಾಗಿ ಬ್ರಿಟಿಷ ಸೈನ್ಯದ ಕೈಮೇಲಾಗುವುದು ಖಡ್ಕಿ ಮತ್ತು ಕೋರೆಗಾಂವ ಎರಡೂ ಯುದ್ಧಗಳಲ್ಲಿ ಪೇಶವೆ ಸೈನ್ಯಕ್ಕೆ ಸೋಲು ಅನುಭವಿಸಬೇಕಾಗುವುದು. ೨ನೇ ಬಾಜೀರಾವ ಪೇಶವೆನನ್ನು ನಾಗಪುರ ಅರಣ್ಯದಲ್ಲಿ ಬ್ರಿಟಿಷ ಸೈನ್ಯ ಬಂಧಿಸುವುದು. ಅವನ ಜೊತೆಯಲ್ಲಿ ವಿಠ್ಠಲರಾವ ವಿಂಚೂರಕರ ಮತ್ತು ಅಬಾ ಪುರಂಧರೆ ಇರುವರು. ಇವರು ಕೈಯೊಳಗಿನ ಖಡ್ಗ ಬ್ರಿಟಿಷರಿಗೆ ಕೊಡಲು ನಿರಾಕರಿಸುತ್ತಾರೆ ಆದರೆ ಬಾಜೀರಾವ ಮಾತ್ರ "ನನಗೆ ಈ ರಕ್ತಪಾತವೆಂದರೆ ತಲೆ ಹಿಡಿದು ಹೋಗಿದೆ ಇನ್ನು ಈ ವ್ಯಾಪ ಸಾಕು. ಇದೋ ನಾನೇ

ನಿಮ್ಮ ಖಡ್ಗಗಳನ್ನು ತೆಗೆದುಕೊಂಡು, ಕ್ಯಾಪ್ಟನ್ನನ ಸ್ವಾಧೀನಪಡಿಸುತ್ತೇನೆ" ಎಂದು ಅವರ ಕೈಯಲ್ಲಿರುವ ಖಡ್ಗಗಳನ್ನು ಬ್ರಿಟಿಷ ಸಿಪಾಯಿಗಳಿಗೆ ಒಪ್ಪಿಸುತ್ತಾನೆ. ಮುಂದೆ ಎಲಿಫಿನ್‌ಸ್ಟನ್ ಬರೆದು ಕಳಿಸಿದ ಒಪ್ಪಿಗೆ ಪತ್ರಕ್ಕೆ ಸಹಿ ಮಾಡುತ್ತಾನೆ. ಒಪ್ಪಿಗೆ ಕೊಡಬೇಡ ಎಂದು ಲಕ್ಷ್ಮಿ ಪ್ರತಿಭಟಿಸಿದರೂ ರಾಜನು ಕೇಳುವುದಿಲ್ಲ. ಮರಾಠಾ ಸಾಮ್ರಾಜ್ಯದ ಈ ಪರಿಯ ಅವನತಿ ನೋಡಲಾಗದೆ ಲಕ್ಷ್ಮೀ ಖಡ್ಗದಿಂದ ಇರಿದುಕೊಂಡು ಪ್ರಾಣ ಬಿಡುವಳು. ಬ್ರಿಟಿಷ ಅಧಿಕಾರಿ ಮಾಲಕಂ ಜೊತೆಗೆ ೨ನೇ ಬಾಜೀರಾವ ಶೇಕ್‌ಹ್ಯಾಂಡ ಮಾಡುವನು ಇಲ್ಲಿಗೆ ನಾಟಕಕ್ಕೆ ತೆರೆ ಬೀಳುವುದು.

ಮರಾಠಾ ರಾಜ್ಯದ ಪಾರತಂತ್ರಕ್ಕೆ ೨ನೇ ಬಾಜೀರಾವ ಕಾರಣನಾಗುತ್ತಾನೆ. ಆದರೆ ಬಾಪು ಗೋಖಲೆ, ಲಕ್ಷ್ಮಿ ಮತ್ತು ಠಾಕೂರ ದಾಸರ ಸ್ವರಾಜ್ಯಪ್ರೇಮ, ಕರ್ತವ್ಯ ಪರಿಪಾಲನೆ ಮುಂತಾದ ಉಜ್ವಲ ಗುಣಗಳು ನಾಟಕದಲ್ಲಿ ಪರಿಣಾಮಕಾರಿಯಾಗಿ ಮೂಡಿ ಬಂದಿವೆ. ನಾಟಕದ ಭಾಷೆ ಸಂದರ್ಭೋಚಿತವಾಗಿದೆ. ಪಾತ್ರಗಳ ವಿವರಣೆ ಕೂಡ ಲವಲವಿಕೆಯಿಂದ ಕೂಡಿದೆ. ನಾಟಕದ ಒಳಗೆಯೇ ವೇಷಾಂತರದ ಸನ್ನಿವೇಶಗಳು ನಡೆಯುತ್ತವೆ. ಬ್ರಿಟಿಷ ಅಧಿಕಾರಿಗಳಿಂದ ಕಣ್ತಪ್ಪಿಸಿಕೊಂಡು ಸ್ವರಾಜ್ಯದ ಹಿತ ಕಾಪಾಡುವುದಕ್ಕಾಗಿ, ಗೆಹನಾಜಿ, ಗೋಸಾವಿ ಆಗಿ ಲಾವಣಿಗಳನ್ನು ಹಾಡುತ್ತಾನೆ. ಲಕ್ಷ್ಮಿ ಜೋಗಿಣಿ ಆಗಿ ಹಾಡುತ್ತ ತಿರುಗುತ್ತಾಳೆ. ತ್ರ್ಯಂಬಕಜಿ ಗವಳಿಯ ವೇಷ ಧರಿಸಿ ಜೇಲಿನಿಂದ ಪಾರಾಗುತ್ತಾನೆ. ಕೆಲವೊಮ್ಮೆ ತಮಾಷಾದವರು ಪಾಲ್ಗೊಳ್ಳುತ್ತಾರೆ. ಈ ವೇಷಾಂತರದ ಹಾಗೂ ಭಾಷಾಂತರದ ಸನ್ನಿವೇಶಗಳಿಂದ ನಾಟಕೀಯತೆಗೆ ರಭಸ ಬಂದಿದೆ. ಮರಾಠಿ ರಂಗಗೀತೆಗಳ ಮಾದರಿಯಲ್ಲಿಯೇ ಇಲ್ಲಿಯ ಹಾಡುಗಳು ರಚನೆಯಾಗಿವೆ. ವಾಮನರಾಯರ ಭಾವಪೂರ್ಣ ಅನುವಾದಶೈಲಿಗೆ ಈ ನಾಟಕ ಉತ್ತಮ ಉದಾಹರಣೆ.

**೫: ಸಾಧ್ವಿ ಸಖೂಬಾಯಿ**

ಹೆಸರಿಗೆ ತಕ್ಕಂತೆ ಸಖೂಬಾಯಿ ಈ ನಾಟಕದ ನಾಯಕಿ. ಅವಳ ಭಕ್ತಿಯ ಬದುಕು ಈ ನಾಟಕದ ಕಥೆ. ಸಖೂಬಾಯಿ ಪಾಂಡುರಂಗನ ಭಕ್ತರಲ್ಲಿ ಶ್ರೇಷ್ಠಳು. ಅವಳ ಕುರಿತು ಮರಾಠಿಯಲ್ಲಿ ಅನೇಕ ಕಥೆಗಳು ಹಾಡುಗಳಿವೆ. ಪಂಢರಪುರದ ವಿಠ್ಠಲನ ಬಗೆಗಿದ್ದ ಅವಳ ಭಕ್ತಿಯ ಕೆಲವು ಘಟನೆಗಳನ್ನು ಪ್ರಸ್ತುತ ನಾಟಕ ಸಾದರಪಡಿಸುತ್ತದೆ. ವಿಶ್ವಗುಣಾದರ್ಶ ನಾಟಕ ಮಂಡಳಿಯ ಶ್ರೇಷ್ಠ ರಂಗಕೃತಿಯಾಗಿ ಈ ನಾಟಕ ಜನರ ಮೆಚ್ಚುಗೆಗೆ ಪಾತ್ರವಾಗಿತ್ತು. ಅನಂತರದಲ್ಲಿ ವಿಶ್ವಗುಣಾದರ್ಶ ಪ್ರಕಾಶನ ಸಮಿತಿ, ಧಾರವಾಡದಿಂದ ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಇದರಲ್ಲಿ ಮೂರು ಅಂಕಗಳಿವೆ. ಕರ್ಹಾಡ ಗ್ರಾಮದ ಕೃಷ್ಣಾನದಿ ದಡದಲ್ಲಿರುವ ಪಾಂಡುರಂಗನ ಗುಡಿಯ ಹತ್ತಿರ ಬಾಲಿಕೆಯರು ದೇವರ ಸ್ತುತಿ ಮಾಡುತ್ತಿರುವ ದೃಶ್ಯದೊಂದಿಗೆ ನಾಟಕ ಆರಂಭವಾಗುತ್ತದೆ. ಭಜನೆ, ದೇವರನಾಮ ಎಂದರೆ ಸಖೂಗೆ ಅತ್ಯಂತ ಪ್ರೀತಿ, ಹಾಡುತ್ತ ಹಾಡುತ್ತ ಭಾವಪರವಶಳಾಗುತ್ತಿದ್ದಳು. ಇವಳ ತಂದೆ ತಾಯಿ ಕೂಡ ಪಾಂಡುರಂಗನ ಭಕ್ತರಾಗಿದ್ದರು. ಪ್ರತಿ ವರುಷ

ಪಾಂಡುರಂಗನ ದರ್ಶನಕ್ಕೆ ಹೋಗುತ್ತಿದ್ದರು. ಈ ಸಂಸ್ಕಾರದಿಂದ ಸಖೂಬಾಯಿಯಲ್ಲಿ ವಿಠ್ಠಲನ ಭಕ್ತಿ ಇನ್ನಷ್ಟು ಪ್ರಖರವಾಗಿ ಬೆಳೆಯಿತು.

ಸಖೂಬಾಯಿಯ ಮದುವೆ ಮಾಧವನ ಜೊತೆಗೆ ನೆರವೇರುತ್ತದೆ. ಮಾಧವನ ಮನೆಯ ಪರಿಸರವು ಭಕ್ತಿಯ ಬದುಕಿಗೆ ವಿರುದ್ಧವಾಗಿತ್ತು. ಆಗ ಸಖೂಬಾಯಿ ಅತ್ತಿಗೆಯ ಕಾಟಾಚಾರಕ್ಕೆ ಗುರಿಯಾಗುತ್ತಾಳೆ. ಬಟ್ಟೆ ತೊಳೆಯಲು ನದಿಗೆ ಹೋಗಿ ಮನೆಗೆ ಬರಲು ತಡವಾದರೆ ಏನೇನೋ ಆಪಾದನೆಗಳು, ಶಿಕ್ಷೆಗಳು ಯಾರೋ ಹಿರಿಯರ ಜೊತೆ ಮಾತನಾಡಿದರೆ ಎಂಥದೋ ಸಂಶಯ ಮತ್ತು ಚಿತ್ರಹಿಂಸೆ. ಸಖೂಬಾಯಿ ಎಲ್ಲವನ್ನು ಸಹಿಸಿಕೊಂಡು ಪಾಂಡುರಂಗನ ಧ್ಯಾನದಲ್ಲಿರುತ್ತಾಳೆ. ಗಂಡ ಮಾಧವರಾಯ ತಾಯಿಯ ಹೆದರಿಕೆಯಿಂದ ಅವಳು ಹೇಳಿದಂತೆಯೇ ಕೇಳುತ್ತಿದ್ದನು. ಅತ್ತೆಯ ಕಾರಸ್ಥಾನದಿಂದ ಗಂಡ–ಹೆಂಡಿರ ಸಾಮರಸ್ಯ ಕೆಡುತ್ತದೆ. ಸಖೂಬಾಯಿ ಧೃತಿಗೆಡದೆ ಬಂದ ಕಷ್ಟಗಳನ್ನೆಲ್ಲ ದೇವರ ಮೇಲೆ ಹಾಕಿ ನಿರುಮ್ಮಳಾಗಿರಲು ಪ್ರಯತ್ನಿಸುತ್ತಾಳೆ.

ಮನೆಯಲ್ಲಿ ಬಿಡುವಿಲ್ಲದ ಕೆಲಸ, ಗಂಡನ ಶಿಕ್ಷೆ, ಅತ್ತೆಯ ಕಿರುಕುಳ. ದಣಿವರಿಯದ ದಿನಚರಿ. ಒಂದು ದಿನ ನೀರು ತರಲು ಹೋಗಿ ಸಖೂ ಮೂರ್ಛೆ ಬೀಳುವಳು. ಆಗ ಗಿರಿಜಾದೇವಿ ವಿಶ್ವನಾಥಭಟ್ಟರು ಉಪಚರಿಸುವರು. ಅಂತಹದರಲ್ಲಿಯೂ ಪಂಢರಪುರದ ಯಾತ್ರೆಗೆ ತನ್ನನ್ನು ಕರೆದುಕೊಂಡು ಹೋಗಬೇಕೆಂದು ಆ ಹಿರಿಯರಿಗೆ ಕೇಳಿಕೊಳ್ಳುತ್ತಾಳೆ. ಅದರಂತೆ ಯಾತ್ರೆ ಸಮೀಪಿಸುತ್ತದೆ. ಅವರು ಇವಳನ್ನು ಕರೆದುಕೊಂಡು ಹೋಗಲು ಸಿದ್ಧರಾಗುತ್ತಾರೆ. ಮನೆಯಲ್ಲಿ ಗಂಡನಿಗೆ ಹೇಳಿ ಹೋಗುವುದೆಂದು ಸಖೂ ನಿರ್ಧರಿಸಿ, ಗಂಡನ ಕೋಣೆಗೆ ಹೋಗುತ್ತಾಳೆ. ಇದನ್ನು ಕಂಡು ಅತ್ತೆಗೆ ಎಲ್ಲಿಲ್ಲದ ಕೋಪ ಬಂತು. 'ನಿನ್ನ ಕೋಣೆಗೆ ಅವಳೇ ಬಂದಳೋ? ನೀನೇ ಕರೆದೆಯೋ' ಎಂದು ಮಗನನ್ನು ಗದರಿಸುತ್ತಾಳೆ. ಒಂದು ಕಡೆಗೆ ತಾಯಿಯ ಕೋಪ, ಮತ್ತೊಂದು ಕಡೆಗೆ ಹೆಂಡತಿಯ ಭಕ್ತಿಯ ಜೀವನ ಎರಡನ್ನು ಹೊಂದಿಸಿಕೊಳ್ಳಲಾಗದ ಉಭಯ ಸಂಕಟದಲ್ಲಿ ಬಿದ್ದು ಮಾಧವ ಒದ್ದಾಡುತ್ತಾನೆ. ಹೆಂಡತಿಯದು ಏನೂ ತಪ್ಪು ಇರದೆ ಅವಳನ್ನು ಶಿಕ್ಷಿಸುವುದು ಸರಿಯೇ? ಪದ್ಮಾವತಿಯ ಎದುರು ಸಖೂಬಾಯಿಯ ತಾಪತ್ರಯಗಳನ್ನು ಬಿಡಿಸಿ ಹೇಳುತ್ತಾನೆ. ಮನೆ ಬಿಟ್ಟು ಹೋದ ಅವಳನ್ನು ಮನೆಗೆ ಕರೆತರಲು ಕೇಳಿಕೊಳ್ಳುತ್ತಾನೆ. ಪದ್ಮಾವತಿ ಒಪ್ಪದಿದ್ದಾಗ ಅವಳನ್ನು ಹುಡುಕಲು ತಾನೆ ಹೊರಡುತ್ತಾನೆ.

ಇತ್ತ ಸಖೂ 'ಅತ್ತೆಯವರು ತಪ್ಪಾಗಿ ತಿಳಿದು ಹೊರ ಹಾಕಿದರು ಪಾಂಡುರಂಗಾ ಇನ್ನು ನೀನೇ ಗತಿ' ಎಂದು ಹಂಬಲಿಸುತ್ತ ಅವನ ದರ್ಶನ ಪಡೆಯಲು ಹೊರಡುತ್ತಾಳೆ. ಅನಂತರ ವಿಶ್ವನಾಥಭಟ್ಟ ಗಿರಿಜಾದೇವಿಯವರ ಬಳಿ ಬಂದು ಯಾತ್ರೆಗೆ ಸಿದ್ಧಳಾಗುತ್ತಾಳೆ. ಇದು ಅತ್ತೆ ಚಂಡಿಕಾಬಾಯಿಗೆ ಗೊತ್ತಾಗುವುದು, ಅವಳು ಯಾತ್ರೆಗೆ ಹೋಗದಂತೆ ತಡೆಯುತ್ತಾಳೆ. ಮತ್ತು ಮನೆಯ ಒಂದು ಕೋಣೆಯಲ್ಲಿ ಕಟ್ಟಿ ಹಾಕಲು ಮಗನಿಗೆ ಆಜ್ಞಾಪಿಸುತ್ತಾಳೆ. ಮಾಧವನು ತಾಯಿಯ ಮಾತು ಮೀರಲಾಗದೆ ಹೆಂಡತಿಯನ್ನು

ಹೊಡೆಯುತ್ತ, ಬಡಿಯುತ್ತ ಮನೆಗೊಯ್ದು ಒಂದು ಕತ್ತಲ ಕೋಣೆಯಲ್ಲಿ ಕಂಬಕ್ಕೆ ಕಟ್ಟಿ ಹಾಕುತ್ತಾನೆ. ಚಂಡಿಕಾಬಾಯಿ ಮಾಧವನಿಗೆ 'ಇವಳು ಸಾಮಾನ್ಯಳಲ್ಲ ಒಂದು ದಿನ ಯಾವನೋ ಒಬ್ಬನ ಜೊತೆ ಹೋಗುವಳೆಂದು ಹೇಳಿರಲಿಲ್ಲವೆ? ಎಂದು ಮಗನಿಗೆ ಗದರಿಸುವಳು ಇನ್ನಷ್ಟು ಶಿಕ್ಷಿಸಲು ಪ್ರೋತ್ಸಾಹಿಸುವಳು. ಸಖೂಗೆ ಹೀನಾಯಮಾನ ಶಬ್ದಗಳಿಂದ ಬೈಯುವಳು. 'ನಿನ್ನ ಪಾಂಡುರಂಗ ನಿನ್ನನ್ನು ಹೇಗೆ ಕಾಪಾಡುವನೋ ನೋಡುವೆ' ನೆಂದು ಸವಾಲು ಹಾಕುವಳು ಮಗನ ಕಡೆಗೆ ನೋಡಿ–

'ಮಾಧವ ಇವಳನ್ನು ಮದುವೆಯಾಗುವುದಕ್ಕಿಂತ ಸೂಳೆಯ ಸಂಗ ಮಾಡಿದ್ದರೆ ಚೆನ್ನಾಗಿತ್ತು' ಎನ್ನುವಳು. ಮಾಧವನು ಹೊಡೆದಂತೆ ಮಾಡುವನು 'ಥೂ ಹೇಡಿ ಗಂಡಸು ಕೈಲಾಗದವನೇ ನನ್ನ ಮಗನೆಂದು ಹೇಳಲು ಅಸಹ್ಯವಾಗುತ್ತಿದೆ. ನಾಳೆ ವೈಶಾಖದಂದು ಬೇರೆ ಮದುವೆ ಮಾಡೇ ಮಾಡುತ್ತೇನೆ. ನಡೆ ಹೋಗೋಣ. ಇವಳು ಇಲ್ಲೆ ಬಿದ್ದಿರಲಿ' ಎನ್ನುತ್ತ ಸಖೂದೇವಿ ಕಡೆ ಕೈಮಾಡಿ 'ಕರೆ ಆ ನಿನ್ನ ಪಂಡರೀನಾಥನನ್ನು, ಬರಲಿ, ಅವನ ಸಾಮರ್ಥ್ಯವನ್ನು ನೋಡಿಯೇ ಬಿಡುವೆ' ಎಂದು ಹೇಳಿ ಹೋಗುತ್ತಾರೆ. ಸಖೂಬಾಯಿ ನಿತ್ರಾಣವಾಗಿದ್ದರೂ ಸದಾ ಪಂಢರಿನಾಥನ ಧ್ಯಾನದಲ್ಲಿ ಮುಳುಗಿರುವಳು. ಪರಮಭಕ್ತೆಯ ಮೇಲೆ ನಡೆದಿರುವ ಈ ಎಲ್ಲ ವಿಷಯ ಕೃಷ್ಣ ರುಕ್ಮೀಣಿಯರಿಗೆ ತಿಳಿದು, 'ಸಾತ್ವಿಕಳ ಮೇಲೆ ನಡೆದ ಈ ಅನ್ಯಾಯವನ್ನು ನಾವು ತಪ್ಪಿಸಬೇಕೆಂದು' ನಿರ್ಧರಿಸುತ್ತಾರೆ. ಕೃಷ್ಣನು ಗಿರಿಜಾಬಾಯಿಯ ರೂಪ ಧರಿಸಿ ಗರುಡನ ಜೊತೆ ಇವಳನ್ನು ಕರೆದುಕೊಂಡು ಹೋಗುವುದಾಗಿ ಸಖೂಬಾಯಿಯ ಎದುರು ಪ್ರತ್ಯಕ್ಷನಾಗುತ್ತಾನೆ. ಪಂಢರಪುರಕ್ಕೆ ಗಿರಿಜಾಬಾಯಿಯ ವೇಷದಲ್ಲಿ ಕೃಷ್ಣನು ಸಖೂಬಾಯಿ ಹತ್ತಿರ ಬರುತ್ತಾನೆ. ಸಖೂಗೆ ಆಶ್ಚರ್ಯವಾಗುವುದು. 'ಗಿರಿಜಾಬಾಯಿಯವರೆ, ನೀವೇಕೆ ಇಲ್ಲಿಗೆ ಬಂದಿರಿ? ಯಾತ್ರೆಗೆ ಹೋಗಲಿಲ್ಲವೆ ನಿಮಗೆ ಯಾವ ತೊಂದರೆಯಾಗಲಿಲ್ಲವೇ?' ಎಂದು ಕೇಳಿದಾಗ 'ನಾನು ಪಂಢರಪುರಕ್ಕೆ ನಿನ್ನನ್ನು ಕರೆದುಕೊಂಡು ಹೋಗಲು ಬಂದಿರುವೆ. ಈ ಹಿಂದೆ ನಿನಗೆ ವಚನ ಕೊಟ್ಟಿದ್ದೆ. ಆ ವಚನವನ್ನು ಪೂರೈಸಲು ನಿನ್ನ ಭಕ್ತಿಗೆ ಮೆಚ್ಚಿ ಸಾಕ್ಷಾತ್ ದೇವರೇ ನನ್ನನ್ನು ಕಳುಹಿಸಿದ್ದಾನೆ. ನೀನು ಯಾವುದರ ಬಗೆಗೂ ಚಿಂತಿಸಬೇಡ, ಎಂದು ಕಟ್ಟಿದ ಹಗ್ಗವನ್ನು ಬಿಚ್ಚಿ ಗರುಡನ ಜೊತೆ ಪಂಢರಪುರಕ್ಕೆ ಕಳುಹಿಸುತ್ತಾಳೆ.

ಅತ್ತ ಸಖೂಬಾಯಿ ಗಂಡನ ಜೊತೆ ಪಂಢರಪುರಕ್ಕೆ ಪ್ರಯಾಣ ಬೆಳೆಸುತ್ತಾಳೆ. ಇತ್ತ ವೃದ್ಧ ರೂಪದಲ್ಲಿದ್ದ ಗಿರಿಜಾಬಾಯಿ ಹದಿನೆಂಟು ವಯಸ್ಸಿನ ಸಖೂದೇವಿಯ ರೂಪವನ್ನು ಧರಿಸಿ ಸಖೂಬಾಯಿ ಬರುವತನಕ ಕಾಲಕಳೆಯಲು ಸಿದ್ಧತೆ ಮಾಡಿಕೊಳ್ಳುತ್ತಾಳೆ. ಮಾಧವನ ಮಿತ್ರ ಶ್ರೀಪತಿ ಸಖೂಬಾಯಿಯನ್ನು ಕುರಿತು ಮಾಧವನಿಗೆ 'ನಿನ್ನ ಹೆಂಡತಿ ತುಂಬಾ ಸಾತ್ವಿಕಳು, ಅವಳೇನು ತಪ್ಪು ಮಾಡಿದಳು? ಅವಳು ಸ್ನೇಹಿತೆಯರೊಡನೆ ಮಾತನಾಡಿದ್ದು, ಪಂಢರಪುರಕ್ಕೆ ಹೋಗಲು ತಯಾರಾಗಿದ್ದು. ಇದೆ ಅಲ್ಲವೆ ಅಪರಾಧ! ನೀನು ಹೀಗೆ ಸುಮ್ಮನೆ ಕೂತರಾಗದು ಬಂಧಮುಕ್ತನಾಗಿ ಪ್ರೀತಿ ಅನುರಾಗ ತೋರಿಸು. ಎಲ್ಲ

ಸರಿ ಹೋಗುತ್ತೆ' ಎಂದು ತಿಳಿಹೇಳಿದಾಗ ಮಾಧವನಿಗೆ ತನ್ನ ತಪ್ಪಿನ ಅರಿವಾಗಿ 'ಇವರು ಹೇಳುವದು ಸರಿ, ಇನ್ನು ಎಷ್ಟು ದಿವಸ ಅಮ್ಮನಿಗೆ ಹೆದರಿ ಜೀವನ ನಡೆಸುವುದು? ಇನ್ನು ಮುಂದೆ ಅವಳು ಹೇಳಿದಂತೆ ಕೇಳದೆ ಹೆಂಡತಿಯೊಡನೆ ಇದ್ದು ಅವಳ ಪ್ರೀತಿ ಸಂಪಾದಿಸಬೇಕೆಂದು ನಿರ್ಧರಿಸುತ್ತಾನೆ. ಕತ್ತಲ ಕೋಣೆಯಲ್ಲಿದ್ದ ಸಖೂಬಾಯಿಯನ್ನು ಕಂಡು, ಅವಳಿಗೆ ಕೊಟ್ಟ ಹಿಂಸೆ, ಸಧ್ಯದ ಪರಿಸ್ಥಿತಿ ಅವನ ಮನವನ್ನು ಪರಿವರ್ತಿಸುತ್ತವೆ. 'ಎಂತಹ ತಪ್ಪು ಮಾಡಿದೆ?' ಎಂದು ಪಶ್ಚಾತಾಪ ಪಡುತ್ತಾನೆ. ಸಖೂದೇವಿಯ ಕೈಕಾಲುಗಳನ್ನು ಒತ್ತುತ್ತ, 'ನೀನು ಆಯಾಸ ಮಾಡಿಕೊಳ್ಳಬೇಡ. ಊಟವಿಲ್ಲದೆ ಶಕ್ತಿ ಇಲ್ಲದಂತಾಗಿದೆ' ಎಂದು ಅವಳನ್ನು ಎತ್ತಿಕೊಂಡು ಉಪಚರಿಸುತ್ತಾನೆ. ಇದನ್ನು ಕಂಡು ಪದ್ಮಾವತಿ 'ಚಂಡಿಕಾಬಾಯಿ ಇವನು ನಮ್ಮ ಮಾಧವನೆ ಹೀಗೇಕೆ ಮಾಡುತ್ತಿದ್ದಾನೆ, ತಲೆ ಕೆಟ್ಟಿದೆಯೇ' ಎಂದು ವಿಚಾರಿಸುತ್ತಾ 'ಮಾಧವ ಅವಳಿಗೇನಾಗಿದೆ ಒದ್ದು ಎಬ್ಬಿಸು' ಎಂದಾಗ ಮಾಧವ 'ಅಮ್ಮಾ ಒದೆವ ದಿನಗಳು ಕಳೆದವು, ನೀವು ಹೇಳಿದಂತೆ ಕೇಳಲು ನಾನು ಮೊದಲಿನ ಮಾಧವನಲ್ಲ' ಎಂದು ಪ್ರತಿಭಟಿಸಿದಾಗ ಅವಳನ್ನು ಒದೆಯಲು ಚಂಡಿಕಾಬಾಯಿ ಮುಂದಾಗುತ್ತಾಳೆ ಕೈ ಕಾಲುಗಳು ಮೇಲೇಳುವುದಿಲ್ಲ. ನಿಶ್ಯಕ್ತಳಾಗಿ ಏನೋ ಮಾಟ ಮಾಡಿಸಿಬಿಟ್ಟಿದ್ದಾಳೆ. ಏನೇನೋ ಏರುಪೇರು ಆಗ್ತಾ ಇದೆ' ಎಂದು ಚಿಂತಿಸುತ್ತಾಳೆ. ಮಾಧವನು ಮತ್ತಷ್ಟು ಅವಳನ್ನು ಪ್ರೀತಿಸುತ್ತಾನೆ.

'ಎಲಾ ನೀಚಾ ಅವಳ ಬಗ್ಗೆ ಪಿತ್ತ ನೆತ್ತಿಗೇರಿದೆ. ನೀನು ಸತ್ತರೆ ಚೆನ್ನಾಗಿತ್ತು' ಎಂದು ಬೈಯ್ದಾಗ ಸಖೂಬಾಯಿ 'ಅತ್ತೆಯವರೆ ಅಮಂಗಳದ ಮಾತುಗಳನ್ನಾಡಬೇಡಿ. ಇನ್ನು ಮುಂದೆ ನೀವು ಹೇಳಿದಂತೆಯೇ ನಡೆಯುತ್ತೇನೆ. ವಿಠ್ಠಲ ಸ್ಮರಣೆ ಮಾಡುವುದಿಲ್ಲ. ಮೂರ್ತಿಯನ್ನು ಆವಾಗಲೇ ಬೀಸಾಕಿರುವೆ, ನೀವು ಕೋಪಿಸಿಕೊಳ್ಳಬೇಡಿರೆಂದು ನಮಸ್ಕರಿಸಲು ಮುಂದಾದಾಗ ಒದೆಯಲು ಕಾಲೆತ್ತಿದರೆ ಕಾಲು ಮೇಲೇಳುವುದಿಲ್ಲ. ಹೀಗೇಕಾಯಿತೆಂದು ಚಂಡಿಕಾಬಾಯಿ ಒದ್ದಾಡುವಳು. ಮಾಧವನು ಸಖೂಬಾಯಿಯ ಕೋಣೆಗೆ ಬಂದು ನೋಡಿದರೆ ಅವಳು ಅತ್ಯಂತ ಸುಂದರಿಯಾಗಿ ಕಾಣಿಸುತ್ತಾಳೆ.

'ನಾನು ಇಷ್ಟು ದಿವಸ ಕುರುಡನಾಗಿದ್ದೆ. ಇನ್ನು ತಡ ಮಾಡುವುದು ಬೇಡ ಇವಳೊಡನೆ ಸುಖಿಸಬೇಕು' ಎಂದು ತುಂಬಾ ಖುಷಿಯಿಂದ ಅವಳನ್ನು ಮಾತನಾಡಿಸುತ್ತಾನೆ. 'ನಿನ್ನ ನೋಡಿ ವಿಲಕ್ಷಣ ಬದಲಾವಣೆ ಆಯಿತು' ಎಂದು ರಮಿಸುತ್ತಾನೆ. 'ಏನು ಚಮತ್ಕಾರ! ಇವಳ ಸ್ಪರ್ಶದಿಂದ ಮನ ತೃಪ್ತವಾಗಿ ರೋಮಾಂಚನಗೊಂಡಿತು'. ಇದೆಲ್ಲ ಅದ್ಭುತವೆಂದು ಮನದಲ್ಲಿ ಅಂದುಕೊಳ್ಳುತ್ತಾನೆ. ಅವಳು ಕೊಟ್ಟ ತಾಂಬೂಲ ಸೇವಿಸುತ್ತಾನೆ.

ಇತ್ತ ಪಂಢರಪುರದ ಚಂದ್ರಭಾಗೆಯ ತೀರ. ವಸಂತೋತ್ಸವಕ್ಕಾಗಿ ಭಕ್ತರೆಲ್ಲ ಸೇರಿದ್ದಾರೆ. ಸಂತೋಷಭರಿತೆಯಾದ ಸಖೂಬಾಯಿಯ ಪ್ರವೇಶವಾಗುತ್ತದೆ. ದರ್ಶನಕ್ಕಾಗಿ ನಿಂತಾಗ ವಿಶ್ವನಾಥಭಟ್ಟ ಗಿರಿಜಾಬಾಯಿ ಇವಳನ್ನು ನೋಡುವರು. ಆಶ್ಚರ್ಯದಿಂದ 'ಇಲ್ಲಿಗೆ ಹೇಗೆ ಬಂದೆ? ಯಾರ ಜೊತೆ

ಬಂದೆ? ಕೊನೆಗೂ ನಿನ್ನ ಹಠ ಬಿಡಲಿಲ್ಲ'. ಎಂದು ಮಾತನಾಡಿಸುತ್ತಾರೆ. ಸಖೂಬಾಯಿ ಪರಿಚಯದ ಯಾತ್ರಿಕರೊಡನೆ ಇಲ್ಲಿಗೆ ಬಂದೆನು. ಅವನು ಎಲ್ಲಿ ತಪ್ಪಿಸಿಕೊಂಡನೋ ಏನೋ! ನಿಮ್ಮ ಭೇಟಿಯಾಯ್ತು. ಪಾಂಡುರಂಗನ ದರ್ಶನ ಮಾಡಿಸಿರಿ' ಎಂದು ನಿವೇದಿಸುತ್ತಾಳೆ. ಅವರು ಒಪ್ಪದಾದಾಗ ಸಾವಿರಾರು ಜನ ಚಂದ್ರಭಾಗೆಯ ಸ್ನಾನ ಮಾಡುತ್ತಿದ್ದಾರೆ. ಅವರ ಜೊತೆ ಸೇರಿಕೊಳ್ಳುತ್ತಾಳೆ.

ಪಾಂಡುರಂಗನ ದೇವಸ್ಥಾನದ ತುಂಬಾ ಜನ ಸೇರಿದ್ದಾರೆ. ಗರುಡ ಪ್ರವೇಶಿಸಿ ಸಖೂಬಾಯಿಯನ್ನು ಕರೆದುಕೊಂಡು ಹೋಗಿ ದೇವರ ಮೂರ್ತಿಯ ದರ್ಶನ ಮಾಡಿದಾಗ ಸಖೂಬಾಯಿ ತನ್ಮಯಳಾಗಿ 'ನಿನ್ನ ಚರಣ ಸನ್ನಿಧಿಗೆ ಬರುವಂತೆ ಮಾಡಿದೆ. ನನ್ನ ಜನ್ಮ ಸಾರ್ಥಕವಾಯಿತು. ಈ ಜಗತ್ತಿನಲ್ಲಿ ನಿನ್ನನ್ನು ಬಿಟ್ಟು ಯಾರೂ ಇಲ್ಲ. ಎಲ್ಲವೂ ನೀನೇ ನನ್ನ ತಂದೆ ತಾಯಿಗಳ ಸಂಧಾನಕ್ಕೆ ಹೋಗುವಂತೆ ಮಾಡು ನಿನ್ನ ಚರಣಗಳನ್ನು ಬಿಡುವದೇ ಇಲ್ಲ'. ಎಂದು ಧ್ಯಾನಿಸುತ್ತಾ ದೇವರ ಪಾದಗಳ ಮೇಲೆ ತಲೆ ಇಟ್ಟು ಪ್ರಾಣ ಬಿಡುವಳು.

ಅಲ್ಲಿಯೇ ಇದ್ದ ಭಕ್ತರು, ಗಿರಿಜಾದೇವಿ, ವಿಶ್ವನಾಥಭಟ್ಟರು ಎಂತಹ ಪುಣ್ಯಶಾಲಿ ದೇವರ ಪಾದದಲ್ಲಿ ಪ್ರಾಣ ಬಿಡುವುದೆಂದರೆ, ಸಾಮಾನ್ಯದ್ದಲ್ಲ. ಸಖೂದೇವಿ ಭಾಗ್ಯಶಾಲಿ, ಎಂದು ಜಯಕಾರ ಹಾಕುತ್ತಾರೆ. ನಾಲ್ಕು ಜನ ಬ್ರಾಹ್ಮಣರು ಕೂಡಿಕೊಂಡು ಅಗ್ನಿ ಸಂಸ್ಕಾರ ಮಾಡುತ್ತಾರೆ. ಗರುಡ ಮತ್ತು ರುಕ್ಮಿಣಿ ಏನು ಮಾಡುವದು ಹೀಗಾಯಿತಲ್ಲ, ಸಖೂಬಾಯಿಯನ್ನು ದಹನ ಮಾಡಿದ ಸ್ಥಳಕ್ಕೆ ಹೋಗಿ 'ಅಮೃತ ಸಂಜೀವಿನಿಯಿಂದ ಅವಳನ್ನು ಬದುಕಿಸಿ ಅತ್ತೆಯ ಮನೆಗೆ ಕಳುಹಿಸಬೇಕು. ಅವಾಗ ನಮ್ಮ ಕಾರ್ಯ ಮುಗಿಯುತ್ತದೆ, ತಡ ಮಾಡದೆ ಹೋಗಬೇಕು' ಎಂದು ಸ್ಮಶಾನಕ್ಕೆ ಬಂದು ಅಮೃತ ಸಂಜೀವಿನಿಯಿಂದ ಪುನಃ ದೇಹ ಧಾರಣೆ ಮಾಡಿಸುತ್ತಾರೆ. ಸಖೂಬಾಯಿ ಜೀವಂತಳಾಗುತ್ತಾಳೆ. ಸಖೂದೇವಿಯ ರೂಪವನ್ನು ಮತ್ತೆ ಅಲ್ಲಿ ವಿಜೃಂಭಿಸುವಂತೆ ಮಾಡುತ್ತಾರೆ.

ಕೊನೆಗೆ ಸಖೂಬಾಯಿ ಪ್ರತ್ಯಕ್ಷಳಾದಾಗ ಚಂಡಿಕಾಬಾಯಿ, ಪದ್ಮಾವತಿ ಮಾಧವನಿಗೆ ಅಚ್ಚರಿಯಾಗುತ್ತದೆ. ವಿಶ್ವನಾಥಭಟ್ಟರು, ಗಿರಿಜಾದೇವಿ, ಗೋಪಾಳಭಟ್ಟರು ಇವರೆಲ್ಲ ಅಗ್ನಿ ಸಂಸ್ಕಾರ ಮಾಡಿದ್ದನ್ನು ಸ್ವತಃ ಹೇಳಿದಾಗ ಪಿಶಾಚಿಯ ರೂಪದಲ್ಲಿ ಬಂದಳೊ ಏನೋ ಎಂದು ಎಲ್ಲರೂ ಚಕಿತರಾಗಿ ನೋಡುತ್ತಾ 'ಏನು ದೈವಲೀಲೆಯೊ ಗೊತ್ತಾಗದು, ಏನು ಚಮತ್ಕಾರವೊ ಭಗವಂತನೆ ಬಲ್ಲ, ಇವಳು ಬ್ರಹ್ಮರಾಕ್ಷಸಿಯಾಗಿ ಬಂದಿರುವಳು ಅವಳನ್ನು ಹಾಗೆ ಬಿಡಬೇಡಿರಿ ಮತ್ತೆ ಕತ್ತಲ ಕೋಣೆಗೆ ಹಾಕೋಣ'ವೆಂದು ಚಂಡಿಕಾಬಾಯಿ ಮಾಧವ ಮುಂದಾಗುತ್ತಾರೆ. ಇದರ ರಹಸ್ಯ ತಿಳಿದ ವಿಶ್ವನಾಥಭಟ್ಟರು 'ಹಾಗೆಲ್ಲಾ ಮಾಡಬೇಡಿರಿ. ಸಾಕ್ಷಾತ್ ಪಾಂಡುರಂಗನೇ ಈ ರೀತಿ ಆಟವಾಡಿದ್ದಾನೆ'. ಎನ್ನುವರು. ಇದು ಎಲ್ಲರಿಗೂ ಮನವರಿಕೆಯಾಗಿ ಸಾಧ್ವಿ ಸಖೂಬಾಯಿಯ ಭಕ್ತಿಯ ಮಹಿಮೆಗೆ ಎಲ್ಲರೂ ತಲೆದೂಗುತ್ತಾರೆ. 'ಈ ಪಾಪಿಗಳನ್ನು ಕೃತಾರ್ಥರನ್ನಾಗಿ ಮಾಡು' ಎಂದು ಬೇಡಿಕೊಳ್ಳುತ್ತಾರೆ.

ಸಖೂದೇವಿ, 'ದೇವಾ ನೀನು ನನ್ನ ರೂಪ ಧರಿಸಿ ನಮ್ಮ ಮನೆಯಲ್ಲಿ ಕಷ್ಟದ ಭಾರ ಹೊತ್ತು ಮನೆಯ ಆಳಾಗಿ ದುಡಿದೆಯಾ? ನಿನ್ನ ದಿವ್ಯರೂಪ ತೋರಿಸಿ ನನ್ನನ್ನು ಸಂತಸಪಡಿಸು' ಎಂದು ದೈನ್ಯಭಾವದಿಂದ ಕೇಳಿಕೊಳ್ಳುತ್ತಾಳೆ. ಆಗ ಒಳಗಿನಿಂದ ಅಶರೀರವಾಣಿಯೊಂದು "ಮಾಧವರಾಯ ಚಂಡಿಕಾಬಾಯಿಯವರೆ ನಾನೇ ನಿಮ್ಮ ಮನೆಯಲ್ಲಿ ಸಖೂದೇವಿಯ ರೂಪದಿಂದ ಕೆಲಸ ಮಾಡಿದೆನು" ಇದನ್ನು ಕೇಳಿ ಮಾಧವ ಚಂಡಿಕಾಬಾಯಿ 'ಸಖೂದೇವಿ ನಿನ್ನ ಯೋಗ್ಯತೆ ತಿಳಿಯದೆ ನಿನ್ನನ್ನು ಪರಿಪರಿಯಾಗಿ ಪೀಡಿಸಿದೆವು ನಮ್ಮ ಅಪರಾಧಗಳನ್ನು ಮನ್ನಿಸು' ಎಂದು ಪಾದಗಳಿಗೆ ನಮಸ್ಕರಿಸುತ್ತಾರೆ. ನಾಟಕ ಇಲ್ಲಿಗೆ ಮಂಗಲವಾಗುತ್ತದೆ.

ಒಟ್ಟಾರೆ ಸಾತ್ವಿಕಳಾದ ಸಖೂಬಾಯಿಯ ಬಗ್ಗೆ ತಪ್ಪಾಗಿ ತಿಳಿದುಕೊಂಡ ಅತ್ತೆಯು ಇವಳನ್ನು ಅನೇಕ ಚಿತ್ರಹಿಂಸೆಗೆ ಗುರಿಪಡಿಸುತ್ತಾಳೆ, ಮಾಧವನನ್ನು ತಾನು ಹೇಳಿದಂತೆ, ಕೇಳುವಂತೆ, ನಡೆಯುವಂತೆ ಮಾಡುತ್ತಾಳೆ. ಮಾಧವನು ಸಖೂಬಾಯಿಯ ಬಗ್ಗೆ ಅಪಾರ ಪ್ರೀತಿ ವಿಶ್ವಾಸವಿದ್ದರೂ ತೋರ್ಪಡಿಸಲು ಆಗದೆ ಅಸಹಾಯಕನಾಗಿ ತೊಳಲಾಡುವ ಸನ್ನಿವೇಶ, ಇತ್ತ ತಾಯಿಯನ್ನು ಬಿಡಲಾರದ, ಹೆಂಡತಿಯನ್ನು ಬಿಡಲಾರದ ಚಿತ್ರಣ ಸೊಗಸಾಗಿ ಮೂಡಿ ಬಂದಿದೆ. ಸಖೂಬಾಯಿಯ ಸಾತ್ವಿಕ ನಿಲುವು, ಶ್ರೀರುಕ್ಮಿಣಿಯು ದೇವರನ್ನು ಬಿಡುಗಡೆ ಮಾಡಲು ಉಂಟಾದ ಪ್ರಸಂಗಗಳು ಭಕ್ತಿರಸ ತುಂಬಿದ ಸುಂದರ ಹಾಡುಗಳು ನಾಟಕಕ್ಕೆ ವಿಶೇಷ ಮೆರಗನ್ನು ತಂದು ಕೊಡುವಲ್ಲಿ ಯಶಸ್ವಿಯಾಗಿವೆ. ಸಾತ್ವಿಕ ಸಖೂಬಾಯಿಯ ದೈವನಿಷ್ಠೆ ಸಚ್ಛಂಧ ಮನಸ್ಸು ಅವಳ ನಿಷ್ಕಲ್ಮಶ ಗುಣಗಳನ್ನು ಎತ್ತಿ ಹಿಡಿದು ಶ್ರೇಷ್ಠತೆಯನ್ನು ತಂದು ಕೊಡುವದೇ ಈ ನಾಟಕದ ಹಿರಿಮೆಯಾಗಿದೆ.

**೬: ಭಕ್ತಪ್ರಹ್ಲಾದ**

ಇದೊಂದು ಪೌರಾಣಿಕ ನಾಟಕ. ಬಾಲಕ ಪ್ರಹ್ಲಾದನ ಹರಿಭಕ್ತಿ ಇಲ್ಲಿಯ ವಸ್ತು. ಪ್ರಹ್ಲಾದ ಮಹಾವಿಷ್ಣುವಿನ ಭಕ್ತ. ತಂದೆ ಹಿರಣ್ಯಕಶ್ಯಪು ದೈತೇಂದ್ರ ಹರಭಕ್ತ. ಹರಿ-ಹರರ ಭಕ್ತರ ನಡುವೆ ಸಾಕ್ಷಾತ್ಕರಿಸುವ ಸ್ಪರ್ಧೆ ಏರ್ಪಟ್ಟು 'ಹರಿಯೇ ಸರ್ವೋತ್ತಮ' ಎಂದು ಹರಿಯ ಶ್ರೇಷ್ಠತೆಯನ್ನು ಲೋಕಕ್ಕೆ ಸಾರುವ ಕತೆಯೇ 'ಭಕ್ತಪ್ರಹ್ಲಾದ' ದ ವಸ್ತು. ಹರಮಯ ವಾತಾವರಣದಲ್ಲಿದ್ದರೂ ಕೂಡ ಹರಿಭಕ್ತಿಯ ಹಿರಿಮೆಯನ್ನು ಕೊಂಡಾಡಿದ ಬಾಲಕನ ಭಕ್ತಿ ಶ್ರೇಷ್ಠವೇ, ಅವನು ಆದರ್ಶನು ಕೂಡ. ವಾಮನರಾಯರು ಬರೆದ ಈ ನಾಟಕ ವಿಶ್ವಗುಣಾದರ್ಶ ಪ್ರಕಾಶನ ಸಮಿತಿಯಿಂದ ಪ್ರಕಟವಾಗಿದೆ ಈ ನಾಟಕವು ಒಟ್ಟು ಐದು ಅಂಕಗಳನ್ನು ಹೊಂದಿದೆ.

ಭಕ್ತಪ್ರಹ್ಲಾದ ನಾಟಕದ ಮೊದಲ ಅಂಕದಲ್ಲಿ ನಾರದ ಮಹರ್ಷಿಗಳು ಸ್ವರ್ಗದಲ್ಲಿ ವಿಷ್ಣುಲೋಕದಲ್ಲಿ (ವೈಕುಂಠ) ದ್ವಾರಪಾಲಕರಾದ ಜಯ-ವಿಜಯರ ಗರ್ವ ಕುರಿತು ಯೋಚಿಸುತ್ತಿರುವಾಗ, ಅಲ್ಲಿಗೆ ಆಗಮಿಸಿದ ಸನಕಾದಿಗಳಿಗೂ ಸಹ ನಾರದರಿಗಾದ ಅನುಭವವೇ ಆಗುತ್ತದೆ. ಜಯ ವಿಜಯರು ಮೊದಲು

ನಾರದರಿಗೆ ನಂತರ ಸನಕಾದಿಗಳಿಗೆ ವೈಕುಂಠಕ್ಕೆ ಪ್ರವೇಶವನ್ನು ನಿರಾಕರಿಸುತ್ತಾರೆ. ಇದರಿಂದ ಕುಪಿತಗೊಂಡ ಸನಕಾದಿಗಳು ಜಯ-ವಿಜಯರಿಗೆ 'ಭೂಲೋಕದಲ್ಲಿ ರಾಕ್ಷಸ ಜನ್ಮ ತಾಳಿರಿ ಇದು ನಿಮ್ಮ ಅಹಂಕಾರಕ್ಕೆ ತಕ್ಕ ಶಿಕ್ಷೆ' ಎಂದು ಶಾಪವಿಡುತ್ತಾರೆ. ಒಮ್ಮೆಲೇ ದಿಗಿಲುಗೊಂಡ ಜಯ-ವಿಜಯರು ಶ್ರೀ ಮನ್ನಾರಾಯಣನ ಮೊರೆಹೋಗುತ್ತಾರೆ 'ಬ್ರಾಹ್ಮಣರ ಶಾಪ ಎಂದಿಗೂ ಸುಳ್ಳಾಗದು. ನೀವಿದನ್ನು ಅನುಭವಿಸಲೇಬೇಕು'. ಎಂದು ಶ್ರೀ ಹರಿಯು ಹೇಳಿದಾಗ ಜಯ-ವಿಜಯರು ಹರಿಯ ಪಾದವ ಬಿಟ್ಟು ಹೋಗಲು ಸಾಧ್ಯವಿಲ್ಲ ಇದಕ್ಕೊಂದು ಉಪಾಯ ಹೇಳಿ ಎಂದಾಗ ವಿಷ್ಣುವು 'ಏಳು ಜನ್ಮದಲ್ಲಿ ಸ್ನೇಹಿತರಾಗಿ ಬರುವಿರೋ ಇಲ್ಲದೆ ಮೂರು ಜನ್ಮದಲ್ಲಿ ವೈರಿಗಳಾಗಿ ಬರುವಿರೋ' ಎಂದು ಪ್ರಶ್ನಿಸಿದಾಗ 'ವೈರಿಯಾದರೂ ಸರಿ ಮೂರು ಜನ್ಮದಲ್ಲಿ ನಿನ್ನ ಸಾನಿಧ್ಯಕ್ಕೆ ಬರುವೆವು' ಎಂದು ಉತ್ತರಿಸಿದರು. ಆಗ ಅಲ್ಲಿಗೆ ನಾರದರಿಗೆ ಜಯ-ವಿಜಯರು ಶ್ರೀಮನ್ನನಾರಾಯಣನ ಮಾತನ್ನು ಹೇಳಿದಾಗ ನಾರದರು, 'ಇದೋ ಜಯವಿಜಯರಿರಾ, ಅವಿವೇಕವಾಗದಂತೆ ಮೊದಲೇ ವಿವೇಕದ ಮಾತನ್ನು ಹೇಳಿದರೆ ಅದು ಎಂದೂ ನಾಟಿಲ್ಲ ಮುಂದೂ ನಾಟುವುದಿಲ್ಲ ಇದು ಸಾಮಾನ್ಯ ಸಿದ್ಧಾಂತ......' ಎಂದು ಹೇಳಿ ಜಯ-ವಿಜಯರಿಗೆ ಸಮಾಧಾನಿಸುತ್ತ ಭೂಲೋಕದಲ್ಲಿ ಕಶ್ಯಪ ಮುನಿಯ ಎರಡನೆಯ ಹೆಂಡತಿ ದಿತಿಯ ಗರ್ಭದಲ್ಲಿ ಜನ್ಮ ತಾಳಿರಿ ಎಂದು ಹೇಳಿ ಕಳಿಸುತ್ತಾರೆ.

ಅದರಂತೆ ಹಿರಣ್ಯಕಶ್ಯಪು, ಹಿರಣ್ಯಾಕ್ಷನಾಗಿ ಜನ್ಮ ತಾಳಿದ ಜಯ-ವಿಜಯರು ಬಲಾಢ್ಯರು, ದೈತೇಂದ್ರರು, ಹರನ ಮಹಾಭಕ್ತರು. ಸಾಧಕರಾಗಿದ್ದರೂ ಅಹಂಕಾರ, ಮದ, ಮತ್ಸರಗಳ ಆಗರವಾಗಿರುತ್ತಾರೆ. ಮತ್ತೊಮ್ಮೆ ನಾರದರ ದರ್ಶನ ಅವರಿಗೆ. ನಾರದರು ಮಾತಿನಲ್ಲಿ ಅವರಿಗೆ ನಿಮ್ಮ ಮೂರನೆಯ ತಲೆಮಾರಿನ ಬಲಿಚಕ್ರವರ್ತಿಯ ಗರ್ವಭಂಗವಾಗುವುದು. ಶ್ರೀ ವಿಷ್ಣುವು ಅವರಿಂದ ಭೂಮಿಯನ್ನು ಕಸಿದುಕೊಳ್ಳುವನು ಎಂದು ಹೇಳಿದಾಗ ಹಿರಣ್ಯಾಕ್ಷನು 'ಭೂಮಿಯನ್ನು ನಮ್ಮಿಂದ ಕಸಿದುಕೊಳ್ಳುವವರ್‍ಯಾರು? ನಾನು ಭೂಮಿಯನ್ನೇ ಹಿಡಿದಿಟ್ಟುಕೊಳ್ಳುತ್ತೇನೆ' ಎಂದು ಆಕ್ರೋಶದಿಂದ ಹೊರಹೊರಡುತ್ತಾನೆ. ಭೂದೇವಿಯೊಂದಿಗೆ ಅಸಭ್ಯವಾಗಿ ವರ್ತಿಸುತ್ತಾನೆ. ವರುಣನೊಂದಿಗೆ ಮಾತಿನಲ್ಲಿ ತೊಡಗಿದಾಗ ಶ್ರೀ ಮನ್ನಾರಾಯಣನು ವರಾಹವೇಷ ಧರಿಸಿ ಬಂದು ಭೂದೇವಿಯನ್ನು ಹೊತ್ತೊಯ್ಯುತ್ತಾನೆ. ಈ ವಿಷಯ ವರುಣನಿಂದಲೇ ಹಿರಾಣ್ಯಾಕ್ಷನಿಗೆ ಗೊತ್ತಾಗುತ್ತದೆ. ವರಾಹಾವತಾರಿಗೂ ಹಿರಣ್ಯಾಕ್ಷನಿಗೂ ಯುದ್ಧವಾದಾಗ ಹಿರಣ್ಯಾಕ್ಷ ಸಾವನ್ನಪ್ಪುತ್ತಾನೆ ಇಲ್ಲಿಗೆ ಮೊದಲ ಅಂಕ ಮುಕ್ತಾಯವಾಗುತ್ತದೆ. ಇಲ್ಲಿ ಹಿರಣ್ಯಕಶ್ಯಪು ಹಾಗು ಹಿರಣ್ಯಾಕ್ಷರ ನಡುವಿನ ಸಂಭಾಷಣೆಯಲ್ಲಿ ವ್ಯಕ್ತವಾಗುವ ವೈಕುಂಠದ್ವೇಷದ ಮಾತುಗಳು ದಾನವ ಕುಲದ ಪ್ರತೀಕಗಳಾಗಿವೆ ಹಾಗೆಯೇ ಹಿರಣ್ಯಾಕ್ಷ ಹಾಗೂ ಭೂದೇವಿಯರ ನಡುವಿನ ಸಂಭಾಷಣೆಯಲ್ಲಿ ಆ ದೈತ್ಯ ಹರಿದ್ವೇಷದ ಧ್ವನಿ ಎದ್ದು ಕಾಣುತ್ತದೆ. ಭೂದೇವಿ ವ್ಯಾಕುಲಳಾಗಿ, ಆರ್ತಳಾಗಿ ಕೇಳಿಕೊಂಡರು ಹಿರಣ್ಯಾಕ್ಷ ಆಕೆಯ ಬೆಂಬಿಡದೆ ರಸಾತಲದಲ್ಲಿ ಹಿಡಿದಿಡುವ ಆರ್ಭಟ ನಾಟಕೀಯವಾಗಿ ಮೂಡಿದೆ. ಜೊತೆಗೆ ಹಿರಣ್ಯಕಶ್ಯಪ, ಹಿರಣ್ಯಾಕ್ಷರರು ಆಕ್ರೋಶದಿಂದ

ಕೂಗಾಡುವದು ನಾರದರು ನಾಟಕೀಯವಾದ ರೀತಿಯಲ್ಲಿ ಅವರಿಗೆ ಸಮಾಧಾನಿಸುವುದು, ಉಪಾಯಗಳನ್ನು ಸೂಚಿಸುವುದು ಇವುಗಳೆಲ್ಲ ನಾಟಕದ ಪ್ರಾರಂಭದಲ್ಲಿಯೇ ಪ್ರೇಕ್ಷಕರನ್ನು ಆಕರ್ಷಿಸುತ್ತವೆ.

ಎರಡನೆಯ ಅಂಕವು ಹಿರಣ್ಯಕಶ್ಯಪು ಹಾಗೂ ನಾರದರ ಸಂಭಾಷಣೆಯೊಂದಿಗೆ ಪ್ರಾರಂಭವಾಗುತ್ತದೆ. ತಮ್ಮನ ಸಾವು ಹಿರಣ್ಯಕಶ್ಯಪುವಿಗೆ ಅಗಾಧ ನೋವನ್ನು ಕಾರ್ಯಕರ್ತರಾದವರ ಮೇಲೆ ರೋಷವನ್ನು ತರುತ್ತದೆ. ನಾರದರ ಉಪದೇಶದಂತೆ ತಾಯಿ ದಿತಿದೇವಿಯ ದುಃಖಶಮನಕ್ಕಾಗಿ ಹಾಗೂ ತನಗೆ ಅಧಿಕ ಶಕ್ತಿ ಪಡೆಯುವುದಕ್ಕಾಗಿ ತಪಸಿದ್ಧಿಗಾಗಿ ಅರಣ್ಯಕ್ಕೆ ಹಿರಣ್ಯಕಶ್ಯಪು ತೆರಳುತ್ತಾನೆ. ಇತ್ತ ಆತನ ಪತ್ನಿ ಕಯಾಧು ಗರ್ಭಿಣಿ. ಆಕೆಯು ತನ್ನ ಉದರದಲ್ಲಿ ಭಗವದ್ಭಕ್ತನ ಜನನವಾಗುವ ಕನಸನ್ನು ಕಂಡು ವಿಹ್ವಲಳಾಗುತ್ತಾಳೆ. ಈ ಸಂದರ್ಭದಲ್ಲಿ ದೇವೇಂದ್ರನು ಹಿರಣ್ಯಕಶ್ಯಪು ಇಲ್ಲದ ಅವಕಾಶವನ್ನು ಅರಸಿಕೊಂಡು ದೈತ್ಯ ಸಂತತಿಯನ್ನು ನಾಶಪಡಿಸಲು ಕಯಾದುವನ್ನು ಅಮರಾವತಿಗೆ ಕರೆದೊಯ್ಯುವ ದುರುಳ ಬುದ್ಧಿಯಿಂದ ಬರುತ್ತಾನೆ. ಅವರಿಬ್ಬರ ನಡುವೆ ವಾಗ್ವಾದ ನಡೆಯುತ್ತದೆ.

ಕಯಾದು ದೇವೇಂದ್ರನಿಗೆ, 'ಪಾಪೀ, ಕಪಟತನದಿಂದ ಮಂದಿರವನ್ನು ಪ್ರವೇಶಿಸಿ ಪತಿವ್ರತೆಯಾದ ನನ್ನ ಪಾತಿವ್ರತ್ಯಯನ್ನು ಭಂಗ ಪಡಿಸಬೇಕೆಂದಿರುವೆಯಾ?' ಎಂದು ಕೂಗುತ್ತಾಳೆ ಅದಕ್ಕೆ ದೇವೇಂದ್ರನು "ಸುದತಿಮಣಿಯೇ ನಿನ್ನನ್ನು ಅಮರಪುರಕೆ ಸೆಳೆದೊಯ್ಯುವೆನು....." ಎಂದಾಗ ರೋಷಗೊಂಡ ಕಯಾದು ದೇವೇಂದ್ರನ ಕುಕಾರ್ಯ ಕುರಿತು ವ್ಯಂಗ್ಯವಾಗಿ ನುಡಿಯುತ್ತಾಳೆ. ಇಲ್ಲೆಲ್ಲಾ ಸ್ತ್ರೀ ತನ್ನ ಮಾನವನ್ನು ಹೇಗೆ ಕಾಪಾಡಿಕೊಳ್ಳುತ್ತಾಳೆ ಎಂಬುದು ತುಂಬಾ ಚೆನ್ನಾಗಿ ಮೂಡಿ ಬಂದಿದೆ.

ತನ್ನ ಶೀಲರಕ್ಷಣೆಗಾಗಿ ಆಕೆ ಹೋರಾಡುತ್ತಿರುವಾಗಲೇ ತ್ರಿಲೋಕ ಸಂಚಾರಿ ನಾರದರು ಅಲ್ಲಿಗೆ ಬಂದು ಕಯಾದು ಬಗ್ಗೆ ವಿಚಾರಿಸಿ ದೇವೆಂದ್ರನಿಗೆ ಆಕೆಯ ಗರ್ಭದಲ್ಲಿ ದೈತ್ಯಾಂಶ ಬೆಳೆಯುತ್ತಿರುವ ಸಂಶಯವನ್ನು ನಿವಾರಿಸಿ, ಆಕೆಯ ಗರ್ಭದಲ್ಲಿ ವೈಷ್ಣವ ಶಿರೋಮಣಿ ಮೊಳೆಯುತ್ತಿದೆ ಎಂದು ಹೇಳಿದಾಗ ದೇವೇಂದ್ರನು ತನ್ನ ತಪ್ಪಿಗೆ ಕಯಾದುವಿನಲ್ಲಿ ಕ್ಷಮೆ ಕೇಳುತ್ತಾನೆ. ನಾರದರು ತನ್ನ ಆಶ್ರಯದಲ್ಲಿ ಕಯಾದುವಿಗೆ ರಕ್ಷಣೆ ನೀಡುತ್ತಾನೆ. ಇತ್ತ ಹಿರಣ್ಯಕಶ್ಯಪುವಿನ ಘೋರ ತಪಸ್ಸಿಗೆ ಬ್ರಹ್ಮನು ಪ್ರಸನ್ನನಾಗಿ ವರ ನೀಡುತ್ತಾನೆ. ವರವು ಹಿರಣ್ಯಕಶ್ಯಪುವಿನ ಸಾವು ಹಗಲು-ಇರುಳು, ನರ-ಪ್ರಾಣಿ, ಮನೆ ಒಳಗೆ ಹೊರಗೆ ಆಗುವಂತಿಲ್ಲ ಎಂಬುದಾಗಿರುತ್ತದೆ. ಇಂಥ ವರವನ್ನು ಪಡೆದು ಸಂತೃಪ್ತನಾಗಿ ತನ್ನ ರಾಜ್ಯಕ್ಕೆ ಬಂದ ಹಿರಣ್ಯಕಶ್ಯಪುವಿಗೆ ಮಂತ್ರಿಯಿಂದ ಕಯಾದು ಗರ್ಭಧರಿಸಿದ ವಿಷಯ ತಿಳಿದು ಸಂತೋಷವಾಗುತ್ತದೆ. ಜೊತೆಗೆ ದೇವೆಂದ್ರನ ಅನುಚಿತ ವರ್ತನೆಯಿಂದ ಕೋಪೋದ್ರಿಕ್ತನಾಗುತ್ತಾನೆ. ಆದರೂ ಸಹನೆಯಿಂದ ಮಹಾರಾಣಿಯನ್ನು ಕಾಣಲು ನಾರದರ ಆಶ್ರಮಕ್ಕೆ ಬರುವದರೊಂದಿಗೆ ಎರಡನೆಯ ಅಧ್ಯಾಯ ಮುಗಿಯುತ್ತದೆ.

ಮೂರನೆಯ ಅಂಕವು ನಾರದರು "ಜ್ಞಾನದ ಮಹಿಮೆ'ಯನ್ನು ಗರ್ಭಿಣಿ ಕಯಾದುವಿಗೆ ಹೇಳುವುದರೊಂದಿಗೆ ಪ್ರಾರಂಭವಾಗುತ್ತದೆ. ಇಲ್ಲಿ ಕಯಾದು ನಿದ್ರೆ ಹೋಗಿದ್ದರೂ ಜ್ಞಾನದ ಹಿರಿಮೆಯನ್ನು ಆಕೆಯ ಗರ್ಭಸ್ಥ ಶಿಶುವು ಕೇಳುತ್ತಿರುತ್ತದೆ. ಈ ಸಂದರ್ಭದಲ್ಲಿ ಅಲ್ಲಿಗೆ ಆಗಮಿಸಿದ ಹಿರಣ್ಯಕಶಿಪು ಮಹಾರಾಣಿಯನ್ನು ಕಂಡು ಆನಂದತುಂದಿಲನಾಗುತ್ತಾನೆ. ತ್ವರಿತವಾಗಿ ತನ್ನ ಮುಂದಿನ ಉದ್ದೇಶ ದೇವೇಂದ್ರನೊಂದಿಗಿನ ಪಾರುಪತ್ಯಕ್ಕೆ ಅಣಿಯಾಗುವ ವಿಷಯ ತಿಳಿಸಿ ಹೊರಡುತ್ತಾನೆ. ದೇವೇಂದ್ರನ ಆಸ್ಥಾನಕ್ಕೆ ಬಂದು ತಾನಿಲ್ಲದ ವೇಳೆಯಲ್ಲಿ ತನ್ನ ಅರಮನೆ ಹೊಕ್ಕು ಅನೀತಿ ತೋರಿಸಿದ್ದಕ್ಕಾಗಿ ದೇವೇಂದ್ರನ ಇಂದ್ರಪದವಿಯನ್ನು ಕಸಿದುಕೊಂಡು ಇಂದ್ರನ ಬೆಂಬಲಕ್ಕೆ ಬಂದ ಬ್ರಹಸ್ಪತಿಯನ್ನು ಬೈಯ್ದು ಸ್ವರ್ಗದಿಂದ ಆಚೆ ದೂಡಿ, 'ಹರಿಯನ್ನು ಸಂಹರಿಸಿದ ಮೇಲೆಯೇ ನೀನು ಅಮರಾವತಿಗೆ ಬರಬೇಕು' ಎಂದು ಆಜ್ಞಾಪಿಸುತ್ತಾನೆ. ಅಷ್ಟರಲ್ಲಿ ಸೇವಕರು ಬಂದು ಮಹರಾಣಿಯವರಿಗೆ ಪುತ್ರೋತ್ಸವವಾದ ಸುವಾರ್ತೆಯನ್ನು ಹೇಳುತ್ತಾರೆ. ಇಲ್ಲಿಗೆ ಮೂರನೇ ಅಂಕ ಮುಕ್ತಾಯವಾಗುತ್ತದೆ.

ನಾಲ್ಕನೆಯ ಅಂಕ ಐದನೆಯ ಅಂಕಕ್ಕೆ ಪೂರಕವಾದುದು. ಹಿರಣ್ಯಕಶ್ಯಪುವಿನ ಮಗ ಪ್ರಹ್ಲಾದ ದಿನೇದಿನೇ ಬೆಳೆಯುತ್ತಿದ್ದಾನೆ. ಬೆಳೆದಂತೆ ಹರಿಯ ಧ್ಯಾನ ಆತನನ್ನು ಅವರಿಸಿಕೊಂಡು ಬಿಟ್ಟಿದೆ. ಸದಾಕಾಲ ಭಗವಂತನ ನೆನಕೆ, ಧ್ಯಾನದಲ್ಲೆ ತಲ್ಲೀನನಾಗಿರುತ್ತಾನೆ. ಕಯಾದುವಿಗೆ ಈ ಕುರಿತ ಯೋಚನೆ. ಇತ್ತ ಪತಿಯ ಭಯ ಆತ್ತ ಮಗನ ಮೇಲಿನ ಮೋಹ ಎರಡನ್ನು ನಿಭಾಯಿಸುತ್ತಿದ್ದಾಳೆ ನಿದ್ರೆಯಲ್ಲಿ ಕೂಡ ಹರಿಯ ನಾಮಸ್ಮರಣೆ ಮಾಡುವ ಮಗ ಸದಾಕಾಲ ಹರಿಯ ಹೆಸರು ಕೇಳಿದರಾಗದ ಅಪ್ಪ ಅಲ್ಲಲ್ಲಿಗೆ ನಾರದರ ಆಗಮನದಿಂದ ಸಾಂತ್ವನ. ಮಗನ ಆಟಗಳಲ್ಲಿ, ರೀತಿಗಳಲ್ಲಿ ಹಿರಣ್ಯಕಶ್ಯಪು ಹರನ ಸ್ಮರಣೆಯನ್ನು ಅಪೇಕ್ಷಿಸುತ್ತಾನೋ ಅಲ್ಲೆಲ್ಲ ಮಗನು ಹರಿಯ ಧ್ಯಾನ, ಆಟ, ಹಾಡಿನಲ್ಲಿಯೇ ಮಗ್ನನಾಗಿರುವುದನ್ನು ಕಂಡು ವಿಚಲಿತನಾಗುತ್ತಾನೆ. ಪ್ರಹ್ಲಾದ ನಾರದರ ಬಳಿ ಇರುವಂತಹ ವೀಣೆ ತನಗೆ ಬೇಕು ತನಗೂ ಸಂಗೀತ ಬರುತ್ತದೆ ಎಂದು ಹಿರಣ್ಯಕಶ್ಯಪುವಿನ ಬಳಿ ಹೇಳಿದಾಗ ಖುಷಿಗೊಂಡ ಹಿರಣ್ಯಕಶ್ಯಪು ಮಗನಿಗೆ ಹಾಡಲು ಹೇಳುತ್ತಾನೆ. ಆಗ ಪ್ರಹ್ಲಾದ ಹರಿನಾಮ ಸ್ಮರಣೆ ಕುರಿತಾದ ಹಾಡನ್ನು ಭಕ್ತಿಯಿಂದ ಹೇಳುತ್ತಾನೆ. ತಂದೆಗಾದರೋ ಸಹಿಸಲು ಅಸಾಧ್ಯ. ಮಗನಾದರೋ ಹರಿನಾಮ ಸ್ಮರಣೆಯಿಂದ ಆನಂದ ಅನುಭವಿಸುತ್ತಾನೆ. ತಂದೆಯೋ 'ಹರಿಯು ಕಪಟಿ ಅನ್ಯಾಯವಾಗಿ ನನ್ನ ತಮ್ಮನನ್ನು ಕೊಂದವನು ಅಂತವನ ನಾಮಸ್ಮರಣೆಯನ್ನು ಮಾಡುವುದೆಂದರೆ ನಮ್ಮ ಕುಲಕ್ಕೆ ಕಳಂಕ ಹಚ್ಚಿದಂತೆ ತಿಳಿಯಿತೇ' ಎಂದು ಅಬ್ಬರಿಸಿದರೆ ಮಗನು ಶಾಂತನಾಗಿ 'ತಾತ ಈ ಪದಗಳನ್ನು ಅನ್ನುತ್ತ ಕುಳಿತರೆ ನನಗೆ ಮತ್ತೇನೂ ಬೇಕಾಗುವುದಿಲ್ಲ. ಆಗಿನ ನನ್ನ ಆನಂದವನ್ನು ನಾನೆಂತು ಹೇಳಲಿ.... ಆದರೆ ನೀನೇಕೆ ಜಿಗುಪ್ಸೆಗೊಳ್ಳುವೆಯೊ....' ಎನ್ನುವಲ್ಲಿ ಪ್ರಹ್ಲಾದನ ಹರಿಭಕ್ತಿಯ ಪ್ರೀತಿ ಹಿರಣ್ಯಕಶಿಪುವಿನ ಹರಿದ್ವೇಷ ಸ್ಪಷ್ಟವಾಗುತ್ತದೆ. ದೈತ್ಯ ಗುರು ಶುಕ್ರಾಚಾರ್ಯರರೊಂದಿಗೆ ಆಲೋಚಿಸಿ ಅವರ ಉಪದೇಶದಂತೆ 'ಹರಿಧ್ಯಾನ' ತಪ್ಪಿಸಲು ಅನೇಕ ಉಪಾಯಗಳನ್ನು ಮಾಡುತ್ತಾನೆ. ಗುರುಗಳ ಬಳಿಗೆ 'ಹರಿಪದ' ಬಿಡಿಸಲು

ಅಧ್ಯಯನಕ್ಕಾಗಿ ಕಳುಹಿಸುವರು, ಎತ್ತರದ ಶಿಖರದಿಂದ ಕೆಳಕ್ಕೆ ದಬ್ಬುವರು,........ ಇಂತಹ ಕೆಟ್ಟ ಉಪಾಯಗಳಿಂದ ಹರಿಪ್ರಿಯ ಮಗನನ್ನು ಕೊಲ್ಲಲು ಯತ್ನಿಸುವುದು ನಾಲ್ಕನೆಯ ಅಂಕದ ವಸ್ತು.

ಐದನೆಯ ಅಂಕ ಸಂಘರ್ಷಗಳಿಂದ ಕೂಡಿದೆ. ಇಲ್ಲಿ ಹರಿ–ಹರ ಭಕ್ತಿಯ ನಡುವಿನ ಸೆಣಸಾಟವಿದೆ. ಮಗನನ್ನು ಪ್ರವಷಣ ಗಿರಿಯ ಮೇಲಿನಿಂದ ತಳ್ಳಿದರೂ ಭೂತಾಯಿ ತನ್ನ ತೋಳತೆಕ್ಕೆಯಲ್ಲಿ ಪ್ರಹ್ಲಾದನನ್ನು ಎತ್ತಿ ರಕ್ಷಿಸುವಳು. ಬೆಂಕಿಯಲ್ಲಿ ಭೋರ್ಗರೆವ ಸಮುದ್ರದಲ್ಲಿ ಹಾಕಿದರೂ ಭಗವಂತನ ರಕ್ಷಣೆಯಿಂದ ಬಾಲಕ ಹಸನ್ಮುಖಿಯಾಗಿ ಮನೆಗೆ ಮರಳುತ್ತಾನೆ. ಕೊನೆಗೆ ತಾಯಿಯಿಂದಲೇ ಮಗನಿಗೆ ವಿಷ ಉಣಿಸುವುದು ಮಾತೃ ಹೃದಯಕ್ಕೆ ಒಪ್ಪಿಗೆಯಾಗುತ್ತಿಲ್ಲ. ಆಗ ಕಯಾದು 'ಅಯ್ಯೋ ವಿಧಿಯೇ ಅಂತೂ ನೀವು ದಯ ತೋರಲಿಲ್ಲವಲ್ಲ ನವಮಾಸ ಹೊತ್ತು ಹಾಲುಣಿಸಿ ಬೆಳೆಸಿದಂತ ಕಂದನನ್ನು ವಿಷ ಉಣಿಸಿ ಕೊಲ್ಲವುದೆ?' ಎಂಬಲ್ಲಿ ಮಾತೃಹೃದಯದ ನೋವು ತುಂಬಿದೆ.

ಕಯಾದು ಮಗನಿಗೆ 'ಮಗು ನಿನಗೆ ಹರಿಯಲ್ಲಿ ಅಷ್ಟೊಂದು ಭಕ್ತಿ ಇದ್ದರೆ ಮನಸ್ಸಿನಲ್ಲಿ ಭಜಿಸು. ಆದರೆ ಬಹಿರಂಗವಾಗಿ ಏಕೆ ಧ್ಯಾನಿಸುವೆ? ಅದರಿಂದ ನಿನ್ನ ಹೆತ್ತವರಿಗೆ ಕೋಪ ಬರುವುದಿಲ್ಲವೆ' ಎಂದರೆ ಪ್ರಹ್ಲಾದನು 'ಅಂದರೆ ತಾಯಿ, ತಂದೆಗೆ ಅಂಜಿ ನಾನು ದೇವರ ಸ್ಮರಣೆಯನ್ನು ಕಳ್ಳತನದಿಂದ ಮಾಡಲೇ? ಛೇ ಛೇ ಅಮ್ಮಾ ಅದಾಗದ ಮಾತು. ಸತ್ಯಕ್ಕೆ ಎದೆಗೊಡಲೇಬೇಕು ಅಲ್ಲಿಯೇ ದೇವರ ಸಾನಿಧ್ಯವಿದೆ. ಅವನು ಭಕ್ತ ಪರಾಧೀನನಲ್ಲವೇ?' ಎನ್ನವಲ್ಲಿ ಬಾಲಕ ಪ್ರಹ್ಲಾದನ ಹರಿಭಕ್ತಿ ಎಷ್ಟೊಂದು ನಿರ್ಮಲ ಹಾಗೂ ಖಚಿತತೆಯಿಂದ ಕೂಡಿದೆ ಎನ್ನಿಸದಿರದು. ಆದರೆ ಕಯಾದು ಪತಿಯಾಜ್ಞೆ ಪಾಲಿಸಲೇಬೇಕು ವಿಷ ಉಣಿಸುತ್ತಾಳೆ ಹರಿ ರಕ್ಷಿಸುತ್ತಾನೆ. ಇಷ್ಟಾದರೂ ಹಿರಣ್ಯಕಶಿಪುವಿನ ಕೋಪ ತಣಿಯಲಿಲ್ಲ ಬದಲಿಗೆ ರೋಷ ಮತ್ತಷ್ಟು ಹೆಚ್ಚಿತು. ಕೊನೆಯದಾಗಿ ತಾನೇ ಸ್ವತಃ ತನ್ನ ಮಗನನ್ನು ಸಂಹರಿಸಿ ತನ್ನ ಬಲಾಬಲ ಪರೀಕ್ಷೆ ಮಾಡಿಕೊಳ್ಳುವ ನಿರ್ಧಾರಕ್ಕೆ ಬರುತ್ತಾನೆ. ತಂದೆ ಮಗನ ನಡುವಿನ ಹರಿ–ಹರ ಸಂವಾದ ತುಂಬ ಚೆನ್ನಾಗಿ ಮೂಡಿ ಬಂದಿದೆ ನರನೂ ಅಲ್ಲ, ಪ್ರಾಣಿಯೂ ಅಲ್ಲ, ಬೆಳಗೂ ಅಲ್ಲ, ರಾತ್ರಿಯೂ ಅಲ್ಲ, ಒಳಗೂ ಅಲ್ಲ ಹೊರಗೂ ಅಲ್ಲದ ಸಂದರ್ಭ. ನರಸಿಂಹಾವತಾರಿ ಹರಿ ಮೂರು ಸಂಜೆಯ ಹೊತ್ತಲ್ಲಿ ಹೊಸ್ತಿಲ ಮೇಲೆ ಕುಳಿತು ಹಿರಣ್ಯಕಶಿಪುವಿನ ಕರುಳನ್ನು ಬಗೆದು ಸಂಹಾರಮಾಡಿ 'ಹರಿಭಕ್ತಿ' ಮಹಿಮೆ ಮೆರೆಯುತ್ತಾನೆ. ಮಂಗಳ ಗೀತೆಯೊಂದಿಗೆ ನಾಟಕ ಮುಕ್ತಾಯಗೊಳ್ಳುತ್ತದೆ.

ಐದು ಅಂಕಗಳ ಈ ನಾಟಕ ಹರಿಭಕ್ತಿ ಸಾರವನ್ನು ಬಿಂಬಿಸುತ್ತದೆ. ಎರಡನೆಯ ಅಂಕದಿಂದ ಕೊನೆಯ ಅಂಕದವರೆಗೂ ಹರಿಯನ್ನು ಕುರಿತ ವಿಚಾರಗಳು, ಹರಿಯ ಸಾಮರ್ಥ್ಯ ಜೊತೆಗೆ ಹರನ ಸಾಮರ್ಥ್ಯಗಳು ನಡುನಡುವೆ ನಾರದ ಮಹರ್ಷಿಗಳ ಆಗಮನವು ಸಂಭವಿಸುವ ಅನಾಹುತಕ್ಕೆ ತಡೆಯೊಡ್ಡಿ ಮುಂದಿನ ಕಾರ್ಯಕ್ಕೆ ಮುನ್ಸೂಚನೆ ನೀಡಿ ಪ್ರೋತ್ಸಾಹಿಸುವ ಕಲೆ ಅರ್ಥಪೂರ್ಣವಾಗಿದೆ.

ಕಯಾದುವಿನ ರಕ್ಷಣೆಯ ಕೂಗು, ಪುತ್ರವಾತ್ಸಲ್ಯದ ಮೊರೆ, ಪ್ರಹ್ಲಾದನ ಹರಿಜ್ಞಾನ ಮಹತಿಯ ಹಾಡುಗಳು ಉಚ್ಛಾರಣೆ ಸಮಯೋಚಿತವಾದ ಮಾತುಗಳು ನಾಟಕಕ್ಕೆ ಕಳೆಕಟ್ಟಿವೆ.

ತಮ್ಮ ವಂಶದ ಮೂರನೆಯ ಪೀಳಿಗೆಯ 'ಬಲಿಚಕ್ರವರ್ತಿ'ಯಿಂದ ಭೂಮಿಯನ್ನು ಕಸಿದುಕೊಳ್ಳುವ ಮಾತು ಕೇಳಿಯೇ ರೋಷಾವೇಷದಲ್ಲಿ ತಮ್ಮ ಸಂಹಾರಕ್ಕೆ ತಾವೇ ಕಾರಣರಾದ ದೈತ್ಯಕುಲ ಸಂಭೂತರಾದ ಹಿರಣ್ಯಾಕ್ಷ – ಹಿರಣ್ಯಕಶ್ಯಪು ಇಬ್ಬರ ಪಾತ್ರ ಅಮೋಘವಾಗಿ ಮೂಡಿ ಬಂದಿದೆ.

ಅಂದು ಇಂತಹ ಪೌರಾಣಿಕ ವಸ್ತುವುಳ್ಳ ನಾಟಕಗಳು ಜನಮನ ಸೂರೆಗೊಳ್ಳುತ್ತಿದ್ದವು. ಪ್ರೇಕ್ಷಕರು ಭಕ್ತಿಲೋಕದಲ್ಲೆ ವಿಹರಿಸುತ್ತಿದ್ದರು. ಸುಶ್ರಾವ್ಯವಾದ ರಂಗಸಂಗೀತ, ಅಮೋಘವಾದ ಅಬ್ಬರದ ಮಾತುಗಳು, ಎಲ್ಲೆ ಮೀರದ ಸಂಭಾಷಣೆ, ಪಾತ್ರಕ್ಕೆ ತಕ್ಕ ವೇಷಭೂಷಣಗಳು 'ವಿಶ್ವಗುಣಾದರ್ಶ ನಾಟಕ ಮಂಡಳಿ'ಯ ಮೂಲಾಧಾರಗಳಾಗಿದ್ದವು.

**೭: ವೀರ ಅಭಿಮನ್ಯು**

ವಿಶ್ವಗುಣಾದರ್ಶ ನಾಟಕ ಮಂಡಳಿಯ ಅತ್ಯಂತ ಯಶಸ್ವಿ ನಾಟಕವಿದು. ೧೯೨೯ ರಲ್ಲಿ ರಂಗದ ಮೇಲೆ ಪ್ರಯೋಗಗೊಂಡು ಕಂಪನಿ ನಿಲ್ಲುವವರೆಗೆ ಪ್ರದರ್ಶನಗೊಂಡಿತು. ಕಂಪನಿಗೆ ಕೀರ್ತಿ ಮತ್ತು ಸಂಪತ್ತು ಧಾರಾಳವಾಗಿ ತಂದು ಕೊಟ್ಟಿತು. ನಾಟಕದ ಸಾಹಿತ್ಯಕೃತಿಗೂ ಓದುಗರ ಅಪಾರ ಬೆಂಬಲ ದೊರೆಯಿತು. ೧೯೮೪ರಲ್ಲಿ ಇದರ ಹನ್ನೊಂದನೆಯ ಆವೃತ್ತಿ ಪ್ರಕಟವಾಯಿತು. ವಾಮನರಾಯರ ಎಲ್ಲ ನಾಟಕಗಳನ್ನು ಪ್ರಕಟಿಸಿದ ಧಾರವಾಡದ 'ವಿಶ್ವಗುಣಾದರ್ಶ ಪ್ರಕಾಶನ ಸಮಿತಿ'ಯೇ ಇದನ್ನು ಮತ್ತೆ ಮತ್ತೆ ಪ್ರಕಟಿಸಿತು. ಮಹಾಭಾರತದಲ್ಲಿ ಬರುವ, ಅಭಿಮನ್ಯುವಿನ ವೀರಗಾಥೆ ಈ ನಾಟಕದ ವಸ್ತು. ನಾಲ್ಕು ಅಂಕಗಳಲ್ಲಿ, ಅನೇಕ ಪ್ರಸಂಗಗಳಲ್ಲಿ ಬಿಚ್ಚಿಕೊಳ್ಳುತ್ತದೆ.

ಕುರುಕ್ಷೇತ್ರ ಯುದ್ಧ ನಡೆದಿದೆ. ಮೇಲಿಂದ ಮೇಲೆ ಎರಗುವ ಸೋಲಿನಿಂದ ಕೌರವ ದೊರೆ ಖಿನ್ನನಾಗಿದ್ದಾನೆ. ಸೋಲಿನ ಕಾರಣಗಳನ್ನು ತಿಳಿಯಲು ಮತ್ತು ಅದಕ್ಕನುಗುಣವಾಗಿ ಮುಂದಿನ ಯುದ್ಧರಂಗವನ್ನು ರೂಪಿಸಲು ಚಿಂತಾಕ್ರಾಂತನಾಗಿರುವನು, ಇಂಥ ಹೊತ್ತಿನಲ್ಲಿ ಕೌರವ ಬಿಡಾರದಲ್ಲಿ ದುಶ್ಯಾಸನ, ಶಕುನಿ, ಜಯದ್ರಥರು ನರ್ತನ ಗಾಯನಗಳ ಮೋಜಿನಲ್ಲಿ ನಿರತರಾಗಿದ್ದಾರೆ. ದುರ್ಯೋಧನನಿಗೆ ಈ ವರ್ತನೆ ಸರಿ ಕಾಣುವುದಿಲ್ಲ. ಕೋಪಿಸಿಕೊಂಡು ಅವರನ್ನೆಲ್ಲ ಜರಿಯುತ್ತಾನೆ. ಆಗ ಶಕುನಿ, ಜಯದ್ರಥರು ತಮ್ಮ ಸೈನ್ಯದ ಸೋಲಿಗೆ ದ್ರೋಣಾಚಾರ್ಯರ ಪಕ್ಷಪಾತ ಧೋರಣೆಯೇ ಕಾರಣವೆಂದು ಹೇಳುತ್ತಾರೆ. ಸಿಟ್ಟಿನ ಭರದಲ್ಲಿ ದುರ್ಯೋಧನ ದ್ರೋಣಾಚಾರ್ಯರನ್ನು 'ಹೊರಗೆ ಕೌರವ ಪಕ್ಷದ ವೀರಯೋಧರು ಒಳಗೆ ಪಾಂಡವ ಪಕ್ಷಪಾತಿಗಳು' ಎಂದು ಕೆಣಕಿ ನುಡಿಯುತ್ತಾನೆ. ಅದಕ್ಕೆ ಪ್ರತ್ಯುತ್ತರವಾಗಿ ದ್ರೋಣಾಚಾರ್ಯರು 'ದುರ್ಯೋಧನಾ ಕೇಳು, ನಾನು ಕೌರವ ಪಾಂಡವರ ಪಕ್ಷಪಾತಿಯಲ್ಲ, ಧರ್ಮ ನ್ಯಾಯ, ಸತ್ಯಗಳ ಪಕ್ಷಪಾತಿ' ಎಂದು ಸಾರುತ್ತಾರೆ. ಇವರ ಮಾತಿನಿಂದ ಕೌರವ

ನಾಯಕರಿಗೆ ಸಮಾಧಾನವಾಗುವುದಿಲ್ಲ. ಮತ್ತೆ ಮತ್ತೆ ದ್ರೋಣಾಚಾರ್ಯರನ್ನು ಕೆಣಕಿ, ಅವರ ಆತ್ಮಾಭಿಮಾನಕ್ಕೆ ಸವಾಲು ಹಾಕುತ್ತಾರೆ. 'ಒಬ್ಬ ಪಾಂಡವ ವೀರನನ್ನಾದರೂ ಬಲಿ ತೆಗೆದುಕೊಳ್ಳಬೇಕು. ಇಲ್ಲವಾದರೆ ನಿಮ್ಮ ಕೌರವನಿಷ್ಠೆ ಗೊತ್ತಾಗುವುದಿಲ್ಲ' ಎಂದು ಅವರ ವೀರತೇಜಕ್ಕೆ ಸವಾಲು ಎಸೆಯುತ್ತಾರೆ. ಆಗ ದ್ರೋಣಾಚಾರ್ಯರು ಆವೇಶದಲ್ಲಿ ವೀರ ಪ್ರತಿಜ್ಞೆ ಮಾಡುವರು;

ಪಂಚಮಹಾಭೂತಗಳ ಸಾಕ್ಷಿಯಾಗಿ, ನಾನು ಪ್ರತಿಜ್ಞೆ ಮಾಡುವುದೇನೆಂದರೆ, 'ಇಂದು ಈ ದ್ರೋಣನು ಅಭೇದ್ಯ ಚಕ್ರವ್ಯೂಹವನ್ನು ರಚಿಸಿ, ಧರ್ಮರಾಜನನ್ನು ಜೀವಂತವಾಗಿ ಬಂಧಿಸಿ, ನಿಮ್ಮ ಸ್ವಾಧೀನಪಡಿಸುವನು. ಮತ್ತು ಆ ಚಕ್ರವ್ಯೂಹವು ಪಾಂಡವವೀರರಲ್ಲಿ ಯಾರನ್ನಾದರೂ ಒಬ್ಬನನ್ನು ಬಲಿದಾನ ತಕ್ಕೊಳ್ಳುವದು; ಮತ್ತು ಒಂದು ಕೋಟಿ ಪಾಂಡವರ ಸೈನ್ಯವನ್ನು ಮಣ್ಣು ಮುಕ್ಕಿಸುವುದು!' ದ್ರೋಣರ ಈ ಪ್ರತಿಜ್ಞೆಯಿಂದ ಎಲ್ಲರಿಗೂ ಸಂತೋಷವಾಗುತ್ತದೆ. ದ್ರೋಣಾಚಾರ್ಯರು ಚಕ್ರವ್ಯೂಹ ರಚನೆಗೆ ಹೊರಡುತ್ತಾರೆ. ಇತ್ತ ಅದನ್ನು ಭೇದಿಸಿ ಹೊರ ಬರುವ ಏಕೈಕ ವೀರನಾದ ಅರ್ಜುನ ಶ್ರೀಕೃಷ್ಣನ ಜೊತೆಯೇ ಪ್ರವಾಸಕ್ಕೆ ಹೋಗಿರುತ್ತಾನೆ. ಕೌರವರಿಗೆ ಇದೊಂದು ಅವಕಾಶವಾಗಿ ಪರಿಣಮಿಸುತ್ತದೆ. ಆದರೆ ಪಾಂಡವ ಪಾಳ್ಯದಲ್ಲಿ ಅರ್ಜುನನಿಲ್ಲದ ಈ ಚಕ್ರವ್ಯೂಹ ಭೇದಿಸುವರಾರು? ಎಂಬ ಪ್ರಶ್ನೆ ಉದ್ಭವಿಸಿ ಧರ್ಮ, ಭೀಮರು ಚಿಂತೆಯಲ್ಲಿ ಮುಳುಗುವರು.

ಇತ್ತ ಅಭಿಮನ್ಯು ಉತ್ತರೆಯ ಸಹವಾಸದಲ್ಲಿ ಸಂತೋಷದಿಂದ ಇರುವಾಗ ಮೇಘನಾದನು ಬಂದು, 'ಮಹಾರಾಜರೆ, ದ್ರೋಣಾಚಾರ್ಯರು ಚಕ್ರವ್ಯೂಹ ರಚಿಸಿದ್ದಾರೆ. ಪಾಂಡವರೆಲ್ಲ ಚಿಂತಾಕ್ರಾಂತರಾಗಿರುವರು' ಎಂದು ಗಾಬರಿಯಿಂದ ಸುದ್ದಿ ಮುಟ್ಟಿಸುತ್ತಾನೆ. ಇದನ್ನು ಕೇಳಿ ಅಭಿಮನ್ಯು 'ಈ ವೀರ ಅಭಿಮನ್ಯುವಿಗೆ ಇದೇನು ಅಸಾಧ್ಯವಾದುದಲ್ಲ. ಪಾರ್ಥನ ಪುತ್ರನಾಗಿ ಈ ಚಕ್ರವ್ಯೂಹ ಭೇದಿಸಿ ಸರ್ವರ ಹಿತ ಕಾಪಾಡುವೆ' ಎಂದು ಅಲ್ಲಿಂದ ಎದ್ದು ಹೊರಡಲು ಅನುವಾಗುತ್ತಾನೆ. ಉತ್ತರೆಯ ಪ್ರೀತಿ ಪ್ರಣಯದ ಮಾತುಗಳು ಅವನನ್ನು ತಡೆಯುವುದಿಲ್ಲ. ಅವಳು ತೊಡಿಸಿದ್ದ ಪುಷ್ಪವೇಷವನ್ನು ಬೀಸಾಕಿ ಅಭಿಮನ್ಯು ಅಲ್ಲಿಂದ ಹೋಗುತ್ತಾನೆ. ಉತ್ತರೆ ಮೂರ್ಛೆಹೋಗುತ್ತಾಳೆ.

ಪಾಂಡವ ಬಿಡಾರದಲ್ಲಿ ಭೀಮ, ಧರ್ಮರಾಜ, ನಕುಲ, ಸಹದೇವ ಚಿಂತಿತರಾಗಿರುತ್ತಾರೆ. ಚಕ್ರವ್ಯೂಹ ಭೇದಿಸುವುದು ಅಷ್ಟು ಸುಲಭದ್ದಲ್ಲ. ಅರ್ಜುನನನ್ನು ಬಿಟ್ಟರೆ ಬೇರಾರಿಗೂ ಸಾಧ್ಯವಿಲ್ಲವೆಂದು ಮಾತಾನಾಡುತ್ತಾರೆ. ಅಲ್ಲಿಯೇ ಇದ್ದ ಅಭಿಮನ್ಯು 'ಆ ವೀರಸಿಂಹನು ಇಲ್ಲಿ ಇಲ್ಲದಿದ್ದರೇನಾಯಿತು ಈ ಮರಿಸಿಂಹನಿಗೆ ಆಜ್ಞೆ ಕೊಡಿರಿ. ಚಕ್ರವ್ಯೂಹ ಬೇಧಿಸಿ ಅಭಿಮನ್ಯು ಎಂಬ ಹೆಸರನ್ನು ಸಾರ್ಥಕಗೊಳಿಸುವೆ' ಎಂದು ವೀರಾವೇಶದಿ ಹೇಳಿದ್ದನ್ನು ಕೇಳಿ ಧರ್ಮರಾಯನು; 'ಕುವರ ನಿನ್ನ ವೀರಶ್ರೀಯ ಉತ್ಸಾಹ ಯಾವ ರೀತಿ ಬಣ್ಣಿಸಲಿ?' ಎಂದು ಹರ್ಷೋದ್ಗಾರನಾಗುತ್ತಾನೆ. 'ಚಕ್ರವ್ಯೂಹದ ವಾರ್ತೆ ಆಗಲೆ ಕೇಳಿ ಮನದಲ್ಲಿ ಧೃಡ ಸಂಕಲ್ಪಗೈಯೆ. ತಮ್ಮ ಆಶೀರ್ವಾದ, ತೆಗೆದುಕೊಂಡು ಹೋಗುವೆ ಅಪ್ಪಣೆ ಕೊಡಿರಿ' ಎಂದ ಕೂಡಲೆ

ಎಲ್ಲರೂ 'ಇದೇ ಮೊದಲ ಸಲ ನೀನು ಯುದ್ಧಕ್ಕೆ ಹೋಗುತ್ತಿರುವೆ, ಚಕ್ರವ್ಯೂಹ ಬೇಧಿಸುವುದು ಕಠಿಣವಾದುದು ಗುಪ್ತವಿದ್ಯೆ' ಎಂದು ಧರ್ಮರಾಜ ಪರಿತಪಿಸುತ್ತಿರುವಾಗ ಅಭಿಮನ್ಯು 'ನೀವು ಯಾವುದಕ್ಕೂ ಚಿಂತಿಸದಿರಿ ನಾನು ತಾಯಿ ಗರ್ಭದಲ್ಲಿರುವಾಗಲೆ, ತಂದೆಯವರ ಮುಖವಾಣಿಯಿಂದ ಚಕ್ರವ್ಯೂಹವನ್ನು ಪ್ರವೇಶ ಮಾಡುವುದನ್ನು ತಿಳಿದುಕೊಂಡಿರುವೆ' ಎನ್ನುವನು. ಆಗ ಧರ್ಮರಾಯ 'ಪ್ರವೇಶಿಸುವುದು ಗೊತ್ತಿರಬಹುದು ಮರಳಿ ಬರುವುದನ್ನು ನೀನು ಅರಿತಿಲ್ಲವಲ್ಲ, ವಿಚಾರ ಮಾಡು' ಎಂದಾಗ ಅಭಿಮನ್ಯು 'ಒಳಗೆ ಹೋದ ಮೇಲೆ ಹೊರಗೆ ಬರುವದು ಕಠಿಣವಲ್ಲ' ಎಂದು ಸಲೀಸಾಗಿ ಹೇಳಿದ ಕೂಡಲೇ ಸಹದೇವ 'ಯುದ್ಧವೆಂದರೆ ಹುಡುಗರ ಆಟವೆಂದು ತಿಳಿದಿರುವೆಯಾ? ಅಭಿಮನ್ಯು?' 'ಇದು ಆಟವಲ್ಲದೆ ಮತ್ತೇನು? ಕ್ಷತ್ರಿಯ ಕುಮಾರನಿಗೆ ಎದೆಗುಂದದೆ ಶತ್ರುಗಳ ರುಂಡ-ಮುಂಡ ಕತ್ತಿಯಿಂದ ಚಂಡಿನಂತೆ ಹಾರಾಡಿಸುವೆ. ನೀವೇ ನೋಡುವಿರಂತೆ. ಸಮಯ ವ್ಯರ್ಥಮಾಡಲಾರೆ. ವಯಸ್ಸು ಚಿಕ್ಕದಾದರೇನಂತೆ? ಕಾಡಿನಲ್ಲಿರುವ ಸಿಂಹವು ಕಾಡು ಮೃಗಗಳನ್ನೇ ತಿನ್ನುತ್ತದೆ. ಹಣ್ಣು ಹಂಪಲವನ್ನಲ್ಲ' ಎಂದು ಗುಡುಗುವನು. ಎಲ್ಲರೂ ಎಳೆಯ ಬಾಲಕನನ್ನು ಕಳುಹಿಸಿದರೆಂಬ ಲೋಕನಿಂದೆಗೆ ಗುರಿಯಾಗಬೇಕಲ್ಲ ಎಂದು ಚಿಂತಿಸುತ್ತಿರುವಾಗ ಅಭಿಮನ್ಯು 'ಪ್ರತಿಜ್ಞೆಯಂತೆ ಚಕ್ರವ್ಯೂಹ ಭೇದಿಸದಿದ್ದರೆ ನಾನು ಲೋಕ ನಿಂದೆಗೆ ಗುರಿಯಾಗಬೇಕಲ್ಲವೇ? ಅದೇನು ಇಲ್ಲ. ಮೊದಲು ನನಗೆ ಅಪ್ಪಣೆ ಕೊಡಿರಿ. ಹೊರಡುತ್ತೇನೆ'. ಎನ್ನುವಾಗ ತಾಯಿ ಸುಭದ್ರೆಯು 'ನನ್ನ ಮುದ್ದುಕುಮಾರ ಚಕ್ರವ್ಯೂಹ ಭೇದಿಸಲು ಹೊರಟಿರುವನೆ ಮುಖದ ಮೇಲೆ ಮೀಸೆಮೂಡಿಲ್ಲ ಈಗ ಹದಿನೈದು ತುಂಬಿ ಹದಿನಾರು' ಎಂದ ಕೂಡಲೆ 'ವಯಸ್ಸು ಚಿಕ್ಕದಾದರೂ ಪರಾಕ್ರಮ ಅದ್ಭುತವಾಗಿದೆ. ಮರಣಕ್ಕೆ ಭಯಪಡಲಾರೆ, ಮರಣ ಹೊಂದಿದರೂ ಸಹ ಶೂರತನಕ್ಕೆ ಚ್ಯುತಿ ತರಲಾರೆ. ನಾನು ಖಂಡಿತ ವಿಜಯಶ್ರೀಯನ್ನು ಸಂಪಾದಿಸುವೆ, ಶ್ರೇಷ್ಠ ಕುಲದ ವೀರಕುಮಾರನೆನಿಸಿಕೊಳ್ಳುವೆ.' ಎಂದು ಹೇಳಿ ತಾಯಿಯ ಮನವೊಲಿಸಲು ಪ್ರಯತ್ನಿಸುವನು.

'ಅಂಜದೆ ಅಳುಕದೆ ನಿನ್ನ ಮಗನನ್ನು ಆಶೀರ್ವದಿಸು' ಎಂದು ಬೇಡಿಕೊಳ್ಳುವನು. ಆಗ ಸುಭದ್ರೆ 'ಮಂಗಳವಾಗಲಿ, ವಿಜಯಶಾಲಿಯಾಗು' ಎಂದು ಹರಸುತ್ತಾಳೆ. 'ಅಮ್ಮ ನಿನ್ನ ಮಂಗಲಕರ ಆಶೀರ್ವಾದದ ಶಬ್ದಗಳನ್ನು ಕೇಳಿ ಮನದ ಉತ್ಸಾಹ ಉಕ್ಕೇರಿತು. ಶತ್ರುಗಳಿಗೆ ರಕ್ತಾಭಿಷೇಕ ಮಾಡಲು ಹೊರಟೆನು. ಹೆಚ್ಚು ತೊಂದರೆಪಡಿಸದಿರಿ' ಎಂದು ಧರ್ಮರಾಜನ ಕಾಲು ಹಿಡಿದು ನಮಸ್ಕರಿಸುತ್ತಾನೆ.

ಅಭಿಮನ್ಯು ನೇರವಾಗಿ ಉತ್ತರೆಯ ಹತ್ತಿರ ಬಂದು ಸಲ್ಲಾಪದ ಮಾತುಗಳನ್ನಾಡಿದ ಕೂಡಲೆ ಉತ್ತರಾ ಬಹಳ ಸಂತಪ್ತಳಾಗಿ, ಸಲ್ಲಾಪಕ್ಕೆ ಕರೆಯುತ್ತಾಳೆ. 'ಆಗ ಕೂಡ್ರಲು ಸಮಯವಿಲ್ಲ ಯುದ್ಧಕ್ಕೆ ಹೋಗಬೇಕು' ಎನ್ನುತ್ತಾನೆ. ಇದನ್ನು ಕೇಳಿ ಉತ್ತರೆ ದುಃಖಿತಳಾಗುತ್ತಾಳೆ. ಅಭಿಮನ್ಯು 'ಅವಳನ್ನು ಸಂತೈಸಿ, ವೀರಪತ್ನಿಯಾದ ನೀನು ರೋಧಿಸುವುದು ತರವಲ್ಲ, ಯುದ್ಧಕ್ಕೆ ಹೋಗುವ ಸಮಯ ಸಮೀಪಿಸುತ್ತದೆ ಹೋಗುವೆ'. ಎನ್ನುವನು.

ನಿಮ್ಮೊಂದಿಗೆ ನಾನೂ ಬರುವೆ, ಒಬ್ಬಳನ್ನೇ ಬಿಡಬೇಡಿ ಎಂದು ಉತ್ತರೆಯು ದುಃಖದಿಂದ ಅಂಗಲಾಚುತ್ತಾಳೆ. 'ಕರ್ತವ್ಯ ಪಾಲನೆ ಮುಖ್ಯ ಧೈರ್ಯ ತಂದುಕೋ ವಿಜಯಿಯಾಗುವೆ, ಒಂದು ವೇಳೆ ವೀರ ಸ್ವರ್ಗ ಪಡೆವ ಭಾಗ್ಯ ಲಭಿಸಿದರೆ' 'ಬೇಡ ಬೇಡ ಅಮಂಗಲ ಮಾತುಗಳನ್ನಾಡಬೇಡಿರಿ' ಎನ್ನುತ್ತಾಳೆ. ಅಭಿಮನ್ಯು ಕೊರಳ ಸಾಕ್ಷಿಯಾಗಿ ಹೇಳುವೆ ಪ್ರಿಯೆ' ಎಂದು ಕೊರಳಿಗೆ ಕೈ ಹಾಕಿದಾಗ ಮಂಗಳಸೂತ್ರ ಹರಿದು ಬೀಳುತ್ತದೆ. 'ಅಪಶಕುನ ಹೋಗಬೇಡಿ, ನನ್ನಲ್ಲಿ ನಾನಾ ವಿಚಾರಗಳು ಬರುತ್ತಿವೆ' ಎಂದು ಉತ್ತರೆ ದುಃಖಿತಳಾದಾಗ ಅಭಿಮನ್ಯು 'ಶಾಂತಳಾಗು ನಗುಮೊಗದಿಂದ ಅನುಮತಿಕೊಡು' ಎಂದಾಗ ಉತ್ತರೆ ನಿರ್ವಾಹವಿಲ್ಲದೆ ದೇಹಕ್ಕೆ ಗಂಧವನ್ನು ಲೇಪಿಸಿ ಪಂಚಾರತಿಯನ್ನು ಬೆಳಗಿ ಬೀಳ್ಕೊಡುತ್ತಾಳೆ. 'ನಾನು ಇನ್ನು ಬರುವೆನು' ಎನ್ನುತ್ತಾ ರಣರಂಗದತ್ತ ಅಭಿಮನ್ಯು ಧಾವಿಸುತ್ತಾನೆ.

ಚಕ್ರವ್ಯೂಹದ ಹತ್ತಿರ ಅಭಿಮನ್ಯು ಭೀಮ, ನಕುಲ ಸಹದೇವರು ಪ್ರವೇಶ ಮಾಡುತ್ತಾರೆ. ಶತ್ರು ಸೈನ್ಯವು ಭರದಿಂದ ಇತ್ತ ಕಡೆಯೇ ಬರುತ್ತಿದೆ ಅದನ್ನು ತಡೆಯಬೇಕೆಂದು, ಅಭಿಮನ್ಯು ಕೆರಳಿದ ಸಿಂಹದ ಮರಿಯಂತೆ ಅದನ್ನು ಭೇದಿಸಲು ಆವೇಶಭರಿತನಾದಾಗ, 'ಇನ್ನು ಒಂದು ಹೆಜ್ಜೆ ಮುಂದೆ ಇಟ್ಟರೆ ಪ್ರಾಣಕ್ಕೆ ತೊಂದರೆ. ನೀನು ಚಿಕ್ಕವನು ಸುಮ್ಮನೆ ಮನೆಗೆ ಹೋಗಿ ನಿಮ್ಮ ತಾಯಿಯ ಜೊತೆ ಇರು' ಎಂದು ಜಯದ್ರಥ ಕುಹುಕವಾಗಿ ನಗುತ್ತಾನೆ. 'ನನ್ನ ಹೀಯಾಳಿಸುವೆಯಾ; ಎಂದು ಬಾಣ ಪ್ರಯೋಗಿಸಲು ಮುಂದಾದಾಗ, 'ಚೋಟು ಹುಡುಗನ ಜೊತೆ ಬಾಣವೇಕೆಬೇಕು? ಒಂದೇ ಏಟಿಗೆ ಕೆಳಗೆ ಕೆಡವಿದರಾಯ್ತು' ಎಂದು ಮೈಮೇಲೆ ಏರಿ ಬರುವನು. ಅಭಿಮನ್ಯು ಜಯದ್ರಥನನ್ನು ಕೆಳಗೆ ಕೆಡುವುತ್ತಾನೆ. ಇದನ್ನೆಲ್ಲ ನೋಡುತ್ತಿದ್ದ ಕರ್ಣನಿಗೆ ಅಚ್ಚರಿಯಾಗುವುದು. ಅಭಿಮನ್ಯು ಚಕ್ರವ್ಯೂಹ ಭೇದಿಸಿ ಶಲ್ಯ, ದುರ್ಯೋಧನರನ್ನು ಮೂರ್ಛೆಗೊಳಿಸಿದನು. 'ಶತ್ರುಗಳನ್ನು ಚಂಡಾಡುತ್ತಾ ಮಧ್ಯ ಭಾಗ ಪ್ರವೇಶಿಸಿದ್ದಾನೆ' ಎಂದು ಹುಬ್ಬೇರಿಸಿ ನೋಡುವನು.

ದ್ರೋಣರು ರಕ್ತಸಿಕ್ತನಾದ ಅಭಿಮನ್ಯುವನ್ನು ನೋಡಿ ಆಶ್ಚರ್ಯದಿಂದ 'ಪಾರ್ಥನ ಮಗನಾದ ಅಭಿಮನ್ಯು ನೀನೆಯೇ?' ಎಂದಾಗ 'ಹೌದು ಆಚಾರ್ಯರೆ' ಎಂದು ವಂದಿಸುತ್ತಾನೆ. 'ವೃಥಾ ಸಾಹಸಕ್ಕೆ ಕೈ ಹಾಕಿರುವೆ ತರವಲ್ಲ, ಹೊರಟುಹೋಗು ಪ್ರಾಣ ಕಳೆದುಕೊಳ್ಳಬೇಡ' ಎಂದು ದ್ರೋಣರು ತಿಳುವಳಿಕೆಯ ಮಾತು ಆಡಿದಾಗ 'ನಾನು ರಣಹೇಡಿಯಾಗಿ ಬದುಕಲಾರೆ. ಯುದ್ಧಕ್ಕೆ ನೀವು ಬನ್ನಿ ಕಾದಾಡುವೆ., ಅಂದ ಕೂಡಲೇ 'ಬಾಲಕನ ಜೊತೆ ಯುದ್ಧ ಸರಿಯಲ್ಲವೆಂದು ಹೊರಡುತ್ತಾರೆ. ದುಶ್ಯಾಸನ ದುರ್ಯೋಧನರನ್ನು ಕಾದಾಡಿ ನೆಲಕ್ಕುರುಳಿಸುತ್ತಾನೆ. 'ಸಹಾಯಕ್ಕೆ ಯಾರಾದರೂ ಬನ್ನಿರಿ' ಎಂದು ಕೂಗಾಡುವಾಗ ಜಯದ್ರಥನು ಮನದಲ್ಲಿ ಯುಕ್ತಿ ಮಾಡಿಕೊಂಡು ಮೊಣಕಾಲೂರಿ, 'ನಾನು ನಿನಗೆ ಶರಣು, ಅಭಯ ಕೊಡಲು ಬಂದಿರುವೆ' ಎಂದಾಗ ಅಭಿಮನ್ಯು 'ಆಗಲಿ ಆದರೆ ಚಕ್ರವ್ಯೂಹದ ಹೊರಗೆ ಹೋಗುವುದನ್ನು ತೋರಿಸು.' 'ಎಲ್ಲ ತೋರಿಸುವೆ ಮೊದಲು ನಿಮ್ಮ ಬಾಣ ಬತ್ತಳಿಕೆ ಆಚೆಗೆ ಚೆಲ್ಲು ನನಗೆ

ಭಯವಾಗುತ್ತದೆಂದು ಹೇಳಿದ ತಕ್ಷಣ 'ಥೂ ರಣಹೇಡಿಯೇ ನಿನ್ನ ಮೇಲೆ ವಿಶ್ವಾಸವಿಟ್ಟು ಶಸ್ತ್ರಾಸ್ತ್ರ ಬೀಸಾಡುತ್ತೇನೆ' ಎಂದು ಎಲ್ಲವನ್ನು ತೆಗೆಯುತ್ತಾನೆ. ಜಯದ್ರಥ 'ಬನ್ನಿ ಬನ್ನಿ' ಎಂದು ಕೂಗಿದಾಗ ಅಶ್ವತ್ಥಾಮ, ಕರ್ಣ, ದುಶ್ಯಾಸನ ಎಲ್ಲರೂ ಬಂದು ಕಟ್ಟಿಹಾಕಲು ಮುಂದಾಗುತ್ತಾರೆ, ವೀರಾವೇಶದಲ್ಲಿ ಅಭಿಮನ್ಯು ಬೃಹದ್ಬಲನ್ನು ಕೊಲ್ಲುತ್ತಾನೆ. 'ಷಂಡ ಜಯದ್ರಥನನ್ನು ಹಿಡಿಯಲು ಕಪಟ ಕಾರಸ್ಥಾನ ಹೂಡಿದೆಯಾ?' ಎಂದು ಕೂಗಾಡುತ್ತಾನೆ. ಕೌರವರು ನಾಲ್ಕುಕಡೆಯಿಂದ ಅಭಿಮನ್ಯುವಿನನ್ನು ಕಟ್ಟಿಹಾಕುತ್ತಾರೆ ಆಗ ಅಭಿಮನ್ಯು 'ಆಚಾರ್ಯರರೇ ವಿಶ್ವಾಸಘಾತವಾಯಿತು. ನನಗೆ ಹೀಗೆ ಮಾಡುತ್ತಿರುವುದು ಧರ್ಮವೋ ಮಾತನಾಡಿ ಎಂದಾಗ ದ್ರೋಣರು ತಮ್ಮಷ್ಟಕ್ಕೆ ತಾವೇ ಜನ್ಮಕ್ಕೆ ಧಿಕ್ಕಾರ ಧಿಕ್ಕಾರ ಎಂದುಕೊಂಡು ಪಶ್ಚಾತ್ತಾಪ ಪಡುತ್ತಾರೆ.

'ನಾ ಸತ್ತರೂ ಸರಿ ಪ್ರಾಣಭಿಕ್ಷೆ ಕೇಳಲಾರೆ' ಎಂದು ಗುಡುಗಿದಾಗ, ಧುರ್ಯೋಧನ ಜಯದ್ರಥರೆಲ್ಲ ಕೂಡಿ ಹೊಡೆದು ಗಾಯಗೊಳಿಸಿ ಬೀಳಿಸುತ್ತಾರೆ. ಇದನ್ನು ಕಂಡು ದ್ರೋಣರು ಹಸ್ತಬಡಿದುಕೊಂಡು, ದಾಸ್ಯತ್ವದ ಈ ಪಾಪಿ ಜೀವನಕ್ಕೆ ಧಿಕ್ಕಾರವೆಂದು ಪರಿತಪಿಸುತ್ತಾರೆ. ಅಭಿಮನ್ಯು ಒದ್ದಾಡುತ್ತ 'ಅಧಮರೆ ಕಪಟತನದಿಂದ ನನ್ನ ಸಂಹಾರ ಮಾಡಿದಿರಿ' ಎಂದು ರೋಧಿಸುತ್ತಾ ವೀರಾವೇಶದಿಂದ ಚೀರಾಡುತ್ತಾನೆ. ಜಯದ್ರಥನು 'ಸಾಯುವ ಕಾಲಕ್ಕೆ ಹೀಗೆ ಮಾಡುವಿಯಾ' ಎಂದು ಮಸ್ತಕಕ್ಕೆ ಒದೆಯುವನು. ಈ ಪ್ರಹಾರವು ನನ್ನನ್ನು ಸ್ವರ್ಗಕ್ಕೆ ಏರಿಸುವುದು. ನಿನ್ನನ್ನು ಪ್ರಾಣ ಸಂಕಟಕ್ಕೆ ಗುರಿಮಾಡುವುದನ್ನು ಲಕ್ಷ್ಯದಲ್ಲಿಡು 'ಎಂತಹ ಅವಮಾನ ತಂದೆ ಸೇಡು ತೀರಿಸು' ಎಂದು ಗೋಳಾಡುವುದನ್ನು ಕಂಡು ದ್ರೋಣರು 'ದುರಾಚಾರ ಮಿತಿಮೀರಿತು. ಅಭಿಮನ್ಯುವಿನ ರೋಧನ, ರಕ್ತದ ಕಣ ಕಣವು ನಿನ್ನ ವಂಶವನ್ನು ನಾಶಮಾಡದೆ ಬಿಡದು, ನೂರೆಂಟು ವೀರರು ಭರತಖಂಡದಲ್ಲಿ ಹುಟ್ಟಿಕೊಂಡು ಧುರ್ಯೋಧನನಂಥ ನೀಚರನ್ನು ಸಂಹಾರ ಮಾಡದೆ ಇರಲಾರದು' ಎಂದು ಶಪಿಸುತ್ತಾರೆ.

ಅಭಿಮನ್ಯು 'ಆಚಾರ್ಯರೇ, ನನ್ನ ಅಂತ್ಯಕಾಲದ ಸತ್ಯಸಂದೇಶವು ಇದೇ, ಅದು ನಿಮ್ಮ ಮುಖದಿಂದ ಹೊರಬಿತ್ತು ಆಚಾರ್ಯರೇ ಪ್ರ–ಣಾ–ಮ–ವು ಶ್ರೀಕೃಷ್ಣಾ ಅ–ಪ್ಪ ಅಮ್ಮಾ ಪ್ರಿ–ಯೆ ಉ–ತ–್ತರೆ ಶ್ರೀ–ಕೃ–ಷ್ಣಾ ಎಂದು ನರಳಾಡುತ್ತ ಸಾವನ್ನಪ್ಪುತ್ತಾನೆ.

ಜಯದ್ರಥ ಆನಂದದಿಂದ ಅಭಿಮನ್ಯುವಿನ ತಲೆಯ ಮೇಲೆ ಕಾಲಿಟ್ಟುಕೊಂಡು ಹಸನ್ಮುಖನಾಗುತ್ತಾನೆ. ಕಾಲದ ಸಪ್ತವೀರರು ಹೆಣದ ಮೇಲೆ ಭಲ್ಲೆಗಳನ್ನೂರುವರು. ದ್ರೋಣಾಚಾರ್ಯರು ಹತಾಶರಾಗಿ ಮುಖ ತಿರುವಿಕೊಂಡು ನಿಲ್ಲುವರು. ಅಭಿಮನ್ಯುವಿನ ಮೇಲೆ ದೇವತೆಗಳು ಹೂಮಳೆಗರೆಯುವರು.

ಅಡವಿಯ ದಾರಿಯಲ್ಲಿ ಶ್ರೀಕೃಷ್ಣ ಅರ್ಜುನರು ಭೇಟಿಯಾಗುತ್ತಾರೆ, ಅರ್ಜುನನು 'ತಮ್ಮ ಕೃಪಾಶೀರ್ವಾದದಿಂದ ಈ ದಿವಸ ಬಲಾಢ್ಯ ವೀರರಾದ ಸಂಶಪ್ತಕರಕೂಡ ಯುದ್ಧ ಮಾಡಿ

ಜಯಶಾಲಿಯಾಗಿದ್ದು ತುಂಬಾ ಸಂತಸ ತಂದಿದೆ. ಇದು ತಮ್ಮಿಂದಲೇ ಸಾಧ್ಯವಾಯಿತು' ಎಂದಾಗ 'ನಾನು ನಿನ್ನ ಕೀರ್ತಿಯ ಪಾಲುದಾರ ಮಾತ್ರ. ನಿನ್ನ ಸಾರಥಿ. ನೀನು ಪರಾಕ್ರಮಶಾಲಿ ನೀನು' ಎಂದಾಗ ಕೊನೆಯವರೆಗೂ ನಮ್ಮ ಮೇಲೆ ನಿಮ್ಮ ಬೆಂಬಲವಿರಲಿ. ಏಕೊ ನನ್ನ ಮನಸ್ಸಿಗೆ ತುಂಬಾ ಬೇಸರವೆನಿಸುತ್ತದೆ. ಬಿಡಾರ ಸ್ಮಶಾನದಂತೆ ಕಾಣುತ್ತಿದೆ, ಉತ್ಸಾಹ ಕಳೆಗುಂದಿ ನಿಸ್ತೇಜವಾಗಿದೆ' ಎಂದಾಗ ಕೃಷ್ಣ ಹೀಗೇಕೆ ಮಾತನಾಡುವಿ ಯಾವುದೇ ಕಷ್ಟ ಬಂದರೂ ಅದನ್ನು ಸಂಯಮದಿಂದ ಅನುಭವಿಸಬೇಕೆಂದು ಸಮಾಧಾನದ ಮಾತು ಹೇಳುತ್ತಾನೆ. ಆಗ ಸೌದಾಮಿನಿಯ ಜೊತೆಗೂಡಿ ಉತ್ತರೆ ಸಂಜೆಯಲ್ಲಿ ಯುದ್ಧಕ್ಕೆ ಹೋದ ಪ್ರಾಣನಾಥ ಇನ್ನು ಬರಲಿಲ್ಲವೆಂದು ಚಿಂತಿಸುತ್ತಾ, ರಣರಂಗಕ್ಕೆ ಹೋಗಿ ನೋಡಿಬರಬೇಕೆಂದು ಸಿದ್ಧಳಾದಾಗ ಸಖಿಯರು ಬೇಡವೆಂದರೂ ಕೈ ಕೊಸರಿಕೊಂಡು ಹೋಗುತ್ತಾಳೆ.

ಪಾಂಡವರ ಬಿಡಾರದಲ್ಲಿ ಯುದಿಷ್ಠಿರ, ಭೀಮ ಖಿನ್ನರಾಗಿ 'ಅಭಿಮನ್ಯು ವೀರ ಸ್ವರ್ಗ ಸೇರಿದ್ದು ಅಪಜಯದ ಮಾತಲ್ಲ ಇಡೀ ಶೌರ್ಯವೇ ಮಣ್ಣು ಪಾಲಾಯಿತು, ಧಿಕ್ಕಾರವಿರಲಿ ಈ ಪೊಳ್ಳುಗದೆಯ ಅಹಂಕಾರಕ್ಕೆ, ಆ ಸಿಂಹಾರ್ಭಕನು ಚಕ್ರವ್ಯೂಹವನ್ನು ಬೇದಿಸಿದನು,' ಎಂದು ಪರಿತಪಿಸುತ್ತಿದ್ದರು. ಅಲ್ಲಿ ಕೃಷ್ಣ ಅರ್ಜುನರ ಪ್ರವೇಶವಾಗುತ್ತದೆ. ಮಾತು ಕೇಳಿಸಿಕೊಂಡ ಅರ್ಜುನ 'ಆನಂದದ ಆತುರತೆಯಿಂದ ಚಕ್ರವ್ಯೂಹ ಬೇಧಿಸಿದನೆ? ಯಾರು ಅವನು---- ಮುದ್ದು ಕುಮಾರನೇ?' ಯುದಿಷ್ಠಿರ 'ಹೌದು, ಅದೇ ಸಿಂಹಾರ್ಭಕನು ಚಕ್ರವ್ಯೂಹ ಭೇದಿಸಿದನು. ಆದರೆ----' ಎನ್ನುವಾಗ ಕೃಷ್ಣ ಆತುರದಿಂದ 'ಆದರೆ ಆ ಕುಮಾರನು ಎಲ್ಲಿರುವನು? ಭೀಮನು ಉಸುರ್ಗರೆದು ಕಾದಾಡುವಾಗ ರಣರಂಗದಲ್ಲಿ ಬಿದ್ದನು.' ಅರ್ಜುನ ದುಃಖದಿಂದ ಏನು ಎಂದು ಕೇಳಿದನು. ಆಗ ಭೀಮನು 'ನಾನು ಏನು ಹೇಳಲಿ ದುಷ್ಪಪ್ರಾರಬ್ಧ ಕೆಟ್ಟ ಪ್ರಸಂಗಕ್ಕೆಡೆ ಮಾಡಿತು'. ಈ ದುರ್ವಾರ್ತೆಯನ್ನು ಕೇಳಿ ಅರ್ಜುನ ಶೋಕಿಸುತ್ತಾ 'ಯಾರು ಮೃತ್ಯುವಿನ ಕೂಪಕ್ಕೆ ನನ್ನ ಬಾಲಕನನ್ನು ತಳ್ಳಿದವರು? ಜಯದ್ರಥ ಮೋಸದಿಂದ ವಿಶ್ವಾಸ ಘಾತುಕನ ಮಾಡಿದ ವಿಷಯ ತಿಳಿದು ಅರ್ಜುನನ ಕ್ರೋಧಾಗ್ನಿ ಉರಿಯುತ್ತದೆ. ಕೃಷ್ಣ ಶಾಂತನಾಗುವಂತೆ ಹೇಳುತ್ತಾನೆ. 'ಎಲ್ಲಿಯ ಶಾಂತಿ ವೀರಕುಲಕ್ಕೆ ಅವಮಾನ, ಕುಮಾರನ ವಾರ್ತೆ ಕೇಳಿ ಸುಮ್ಮನೆ ಹಣೆಗೆ ಕೈ ಹಚ್ಚಿ ಕುಳಿತರೇನುಪಯೋಗ? 'ನನ್ನ ಮಗನ ಆತ್ಮಕ್ಕೆ ಶಾಂತಿ ಸಿಗಬೇಕಾದರೆ ಆ ಜಯದ್ರಥನ ರುಂಡವನ್ನು ಚೆಂಡಾಡಲೇಬೇಕು', ಎಂದು ಪ್ರತಿಜ್ಞೆ ಮಾಡುತ್ತಾನೆ, ಪ್ರತಿಜ್ಞೆ ಪೂರ್ಣವಾಗದಿದ್ದರೆ ಅಗ್ನಿಗೆ ಹಾರಿಕೊಳ್ಳುವುದಾಗಿ ಹೇಳುತ್ತಾನೆ.

ಹಸ್ತಿನಾಪುರದ ಸಾಮ್ರಾಜ್ಯದ ಅರಸೊತ್ತಿಗೆಗೆ ಜಯದ್ರಥ ಜಯಕಾರ ಹಾಕುತ್ತಾ ಇರುವುದನ್ನು ಕಂಡು ದ್ರೋಣರಿಗೆ ಬೇಸರಿಕೆಯಾಗುತ್ತದೆ. ದುರ್ಯೋಧನ 'ಇದೆಲ್ಲ ರಾಜತ್ವಕ್ಕೆ ಬೇಕಾದವುಗಳೇ ನಡೆ' ಎಂದು ಜಯದ್ರಥನೊಡನೆ ಎಲ್ಲರೂ ಹೋಗುವರು. ದ್ರೋಣಾಚಾರ್ಯರು ಒಬ್ಬರೇ, ಇತ್ತ ಸಮರ ಭೂಮಿಯಲ್ಲಿ ಅಭಿಮನ್ಯು ಹೋದ ಮೇಲೆ ಉತ್ತರೆಯು ಹೊರಳಾಡುತ್ತಾ ಇರುವುದನ್ನು ಕಂಡು

ದ್ರೋಣರು ಸಮಾಧಾನ ಹೇಳಲು ಆಗದೆ ಹತಾಶೆ ಭಾವನೆ ವ್ಯಕ್ತಪಡಿಸುತ್ತಾರೆ. 'ಈ ಸಾವಿಗೆ ನಾನೇ ಕಾರಣ, ಕೊಲೆ ಪಾತಕಿ' ಎಂದಾಗ 'ಅಂತಹ ಅನ್ಯಾಯ ನಾನು ನಿಮಗೇನು ಮಾಡಿದೆ,' ಎಂದು ಉತ್ತರೆ ತಲೆ ಬಡೆದುಕೊಳ್ಳುತ್ತಾ ಶಪಿಸುವುದನ್ನು ಕಂಡು 'ಶಾಂತಳಾಗು ದೇವಿ ಶಾಂತಳಾಗು', 'ಹೇಗೆ ಶಾಂತಳಾಗಲಿ ನನ್ನ ಸೌಭಾಗ್ಯ ಮಂದಿರಕ್ಕೆ ಬೆಂಕಿಹಚ್ಚಿ ಕತ್ತಲೆಗೆ ದೂಕಿದೆ. ನೀನು ಮಹಾಪಾಪಿ. ಕೌರವರ ಕಪಟ ಬುದ್ಧಿಗೆ ಸಿಕ್ಕು, ಅವರ ಅನ್ನ ತಿಂದುದರಿಂದ ಈ ದ್ರೋಹವೆಸಗಿದೆ. ನಿನಗೆ ಇದೇ ರೀತಿ ಕಪಟತನದಿಂದ ಘೋರ ಮರಣ ಬರುವುದು. ಪಾಪೀ ರಾಜರ ಸಿಂಹಾಸನ ಮಣ್ಣು ಪಾಲಾಗಲಿ ನಡೆ ಹೊರಟು ಹೋಗೆಂದು ಶಾಪ ಹಾಕುವಳು. 'ಎಂತಹ ಶಾಪಕೊಟ್ಟೆ' ಎಂದು ಹಣೆ ಬಡೆದುಕೊಳ್ಳುವಾಗ ಎಚ್ಚರವಾದ ಉತ್ತರೆ, 'ದ್ರೋಣಾಚಾರ್ಯರೆ ಕ್ಷಮಿಸಿರಿ. ಸಿಟ್ಟಿನಲ್ಲಿ ಏನೇನೊ ಮಾತನಾಡಿ ಬಿಟ್ಟೆ ತಪ್ಪಾಯ್ತು' ಎಂದು ಪರಿತಪಿಸುತ್ತಾಳೆ 'ನನ್ನದೆ ತಪ್ಪಿದೆ' ಎಂದು ದ್ರೋಣಾಚಾರ್ಯರು ಸಮಾಧಾನ ಪಡಿಸುವರು. ಸುಭದ್ರೆಯು ಅಲ್ಲಿಗೆ ಬರುವಳು ಉತ್ತರೆ ಸುಭದ್ರೆ ದಿಕ್ಕಿಲ್ಲದೆ ಬಿದ್ದ ಅಭಿಮನ್ಯುವಿನ ಶವ ಕಂಡು ಮೂರ್ಛಿತರಾಗಿ ಬೀಳುವರು.

'ನನ್ನ ಪ್ರಾಣನಾಥನ ಅಗ್ನಿಶಯ್ಯೆಗೆ ನಾನು ಹೋಗುವೆ ಅತ್ತೆ ತಡೆಯಬೇಡಿ,' ಸುಭದ್ರೆ 'ನೀನೂ ಬಿಟ್ಟು ಹೋಗುವೆಯಾ' ಎಂದು ರೋಧಿಸುತ್ತಾಳೆ. ಪ್ರದಕ್ಷಿಣೆ ಹಾಕಿದ ಉತ್ತರೆ ಚಿತೆಯೇರಲು ಸಿದ್ಧಳಾಗುತ್ತಾಳೆ. ಕೃಷ್ಣನು 'ತಾಳು ಉತ್ತರೆ ಸತಿ ಹೋಗುವುದಕ್ಕೆ ನಿನಗೆ ಅಧಿಕಾರವಿಲ್ಲ. ಇದು ಧರ್ಮಾಜ್ಞೆ ಹಿಂದಿರುಗು. ನೀನು ಗರ್ಭವತಿ, ಸಹಗಮನ ಮಾಡಲು ಧರ್ಮ ಒಪ್ಪುವುದಿಲ್ಲ'ವೆಂದರೂ 'ಒಪ್ಪಲಿ ಬಿಡಲಿ ಸತಿಗೆ ಪತಿಯೇ ದೇವರು' ಎಂದು ತನ್ನ ಧೃಡ ನಿಲುವು ತಿಳಿಸುವಳು. ಆಗ ಅಶರೀರವಾಣಿಯೊಂದು 'ನಿನ್ನಯ ಹೊಟ್ಟೆಯಲ್ಲಿ ಭರತಖಂಡ ಸಾಮ್ರಾಟ ಜನಿಸುವನು' ಎಂಬುದನ್ನು ಕೇಳಿ ಯಾರದು? ಈ ಶರೀರವಾಣಿ?' ಬೆಚ್ಚಿ ಬೀಳುತ್ತಾಳೆ. ಕೃಷ್ಣನು 'ಅಗೋ ನೋಡು ಆ ಸಚ್ಚಿದಾನಂದ ಪರಮಾತ್ಮನ ಸ್ವರೂಪದಲ್ಲಿ ಕಾಣುತ್ತಿದೆ, ಅಭಿಮನ್ಯು ಹೇಗೆ ವೈಕುಂಠಕ್ಕೆ ತೆರಳುವನು' ಎಂದು ತೋರಿಸುತ್ತಾನೆ. ಉತ್ತರೆಯನ್ನು 'ನಿಲ್ಲು ಎಲ್ಲಿ ಹೋಗುವೆ?' ಎಂದು ತಡೆಯುತ್ತಾನೆ 'ಯಾರು ನೀನು? ನಾನೇ ಪತಿಯನ್ನು ಸ್ವರ್ಗಕ್ಕೆ ಅಟ್ಟಿದವನು ಎನ್ನಲು.' 'ದುರಾತ್ಮ ತೊಲಗು ಹೆಂಗಸಿನ ಮೇಲೆ ಶಸ್ತ್ರವೆತ್ತಲು ನಾಚಿಕೆ ಬರುವುದಿಲ್ಲವೇ, ಚಾಂಡಾಲ ನಿನ್ನ ಹೆಸರೇನು ಎನ್ನಲು?' 'ನಾನೇ ಜಯದ್ರಥ' ಎಂದಾಗ 'ಛೀ ನಿನ್ನ ಹೆಸರು ಕೇಳಲು ಆಗುತ್ತಿಲ್ಲ ನಡೆ ಪಾಪಿ' ಎನ್ನಲು ಖಡ್ಗವನ್ನು ಹಿರಿಯಲು ಬರುವನು. ದ್ರೋಣರು 'ಸರಿ, ದುರಾಚಾರಿ ರಾಕ್ಷಸ ಹಿಂದಕ್ಕೆ!' ಎನ್ನುವರು.

ಘಾತವಾಯಿತು ಯಾರದು, ಪಾಪೀ ಇಂತಹ ಪತಿವ್ರತೆಗೆ ಎಂತಹ ಋಷಿಮುನಿಗಳು ತಲೆ ಬಗ್ಗಿಸಿದ್ದಾರೆ, ಧಿಕ್ಕಾರವಿರಲಿ ನಿನ್ನ ಪುರುಷಾರ್ಥಕ್ಕೆ. ಈಕೆಯ ಯೋಗ್ಯತೆ ನಿನಗೆಲ್ಲಿ ತಿಳಿಯುತ್ತದೆ ಹೋಗಿ ಕಾಲಿಗೆ ಬಿದ್ದು ಕ್ಷಮೆ ಕೇಳು' ಎಂದು ಆಜ್ಞಾಪಿಸುವರು.

ಇತ್ತ ಜಯದ್ರಥ, ಅರ್ಜುನ ಯುದ್ಧಕ್ಕೆ ಸನ್ನದ್ಧರಾಗುತ್ತಾರೆ, ಬೇಗನೆ ಸೂರ್ಯಾಸ್ತವಾಗುತ್ತದೆ. ಯುದ್ಧ ನಡೆಯದೇ ಜಯದ್ರಥನನ್ನು ಸೋಲಿಸಲು ಆಗದು. 'ಶ್ರೀಕೃಷ್ಣ ಏನು ನಿನ್ನ ಮಹಿಮೆ ಸಂಜೆಯಾಯಿತು. ಇನ್ನು ಯಾರ ಭೀತಿಯೂ ಇಲ್ಲ. ನನ್ನನ್ನು ಸಂಹರಿಸಲು ಯಾರಿಂದಲೂ ಸಾಧ್ಯವಿಲ್ಲ'. ಎಂದು ಅಹಂಕಾರದಿಂದ ನುಡಿಯುವನು ಆಗ 'ಕೃಷ್ಣನು ಸುದರ್ಶನ ಚಕ್ರ ಹಿಂದಕ್ಕೆ ನಡೆ' ಎಂದ. ಸೂರ್ಯಮಂಡಲ ಮೊದಲಿನ ಹಾಗೇ ಪ್ರಕಾಶಿಸುತ್ತದೆ. ಇದನ್ನು ಕಂಡ ಜಯದ್ರಥ 'ಎಂತಹ ಚಮತ್ಕಾರ!'ಎನ್ನುತ್ತಿರುವಾಗ ಶ್ರೀಕೃಷ್ಣನು 'ಅರ್ಜುನಾ ನೋಡುವಿಯೇನು, ಅಲ್ಲಿ ಜಯದ್ರಥನಿಗೆ ಬಾಣ ಹೊಡೆದು ಈತನ ಶಿರಸ್ಸನ್ನು ಆಕಾಶಕ್ಕೆ ಹಾರಿಸು!' ಎಂದು ಹೇಳಿದ ಕೂಡಲೇ ಅರ್ಜುನ ಬಾಣ ಪ್ರಯೋಗಿಸುತ್ತಾನೆ. ರುಂಡ ಹೋಗುತ್ತದೆ. ದುರ್ಯೋಧನನು ಕೃಷ್ಣನ ಕಾರಸ್ಥಾನದಿಂದ ಘಾತವಾತಯಿತು' ಎಂದು ಓಡಿಹೋಗುತ್ತಾನೆ.

ಪ್ರತಿಜ್ಞೆ ಪೂರ್ಣವಾಯಿತು. ಜಯದ್ರಥನ ಸಂಹಾರ ಮಾಡಿ ಅಭಿಮನ್ಯುವಿನ ವಧೆಯ ಸೇಡು ತೀರಿಸಿಕೊಂಡೆನು. ಆನಂದವಾಯಿತು. ಇದೆಲ್ಲ ತಮ್ಮ ಕೃಪೆ ಎಂದು ಕೃಷ್ಣನಿಗೆ ನಮಸ್ಕರಿಸುತ್ತಾನೆ. ಆದರೇನು 'ಅಭಿಮನ್ಯು ಹೋದನು' ಎಂದು ರೋಧಿಸುತ್ತಾನೆ, 'ಕೇಸರಿ ಪುತ್ರನು ಹೋಗಲಿಲ್ಲ! ಅಭಿಮನ್ಯುವು ಮೃತನಾಗಲಿಲ್ಲ. ಸ್ವರ್ಗದೇವತೆಯ ಉದರದಲ್ಲಿ ದಿನಾಲು ಜನ್ಮಿಸುತ್ತಿರುವನು. ನಿಜವಾಗಿ ಆ ಬಾಲಕನು ಧನ್ಯನು!' ಸುಭದ್ರಾ ಉತ್ತರಾ ಮೊದಲಾದವರು ಬಂದು 'ಎಲ್ಲಿ ನನ್ನ ಕುಮಾರ, ನಾಥಾ ಮನೋಹರ ಮೂರ್ತಿ ಎಲ್ಲಿರುವನು?' ಎಂದಾಗ ಎಲ್ಲರೂ 'ಆ ಕೇಸರಿಪುತ್ರ ನಮ್ಮೆಲ್ಲರ ಪ್ರಾಣ. ಅದೋ ನೋಡಿರಿ ಸ್ವರ್ಗದ ಸಿಂಹಾಸನದ ಮೇಲೆ ಹೇಗೆ ವಿರಾಜಮಾನನಾಗಿದ್ದಾನೆ. ಲೋಕ ಉದ್ಧಾರಕ್ಕಾಗಿ, ಸ್ವಜನರ ಸಲುವಾಗಿ ತನ್ನ ಪ್ರಾಣವನ್ನೇ ಅರ್ಪಿಸಿದ ವೀರ ಇವನು. ಭರತಪುತ್ರ ಪಾರ್ಥ ಮತ್ತೇನಾದರೂ ನಿನ್ನ ಅಪೇಕ್ಷೆ ಇದ್ದರೆ ಹೇಳು' ಎಂದು ಕೃಷ್ಣ ಕೇಳಿದಾಗ ಅರ್ಜುನ 'ನಿನ್ನ ಅಗಾಧ ಲೀಲೆ ಯಾರಿಗೂ ತಿಳಿಯದು!' ಎಂದು ಕೌತುಕ ವ್ಯಕ್ತಪಡಿಸುವನು. ಈ ಸನ್ನಿವೇಶದೊಂದಿಗೆ ನಾಟಕ ಮಂಗಳವಾಗುತ್ತದೆ.

ವೀರ, ಶೃಂಗಾರ, ಹಾಸ್ಯರಸಗಳಿಂದ, ರೋಮಾಂಚನಕಾರಿ ಸನ್ನವೇಶಗಳಿಂದ, ಸೊಗಸಾದ ಪಾತ್ರ ಚಿತ್ರಣಗಳಿಂದ 'ವೀರ ಅಭಿಮನ್ಯು' ನಾಟಕ ಅಗಾಧ ಪರಿಣಾಮ ಬೀರುವಂತಿದೆ. ಸಾಹಿತ್ಯ ರಚನೆಯಲ್ಲಿಯೇ ನಾಟಕೀಯ ಪರಿಣಾಮವು ಅದ್ಭುತವಾಗಿ ಬೆರೆತಿದೆ. ಅಭಿಮನ್ಯುವಿನ ವೀರತ್ವ, ದುರ್ಯೋಧನನ ಛಲ, ದ್ರೋಣನ ಅಸಹಾಯಕತೆ, ಸುಭದ್ರೆಯ ಶೋಕ, ಉತ್ತರೆಯ ವಿರಹವನ್ನು ಈ ನಾಟಕ ಭಾವಪೂರ್ಣ ಸನ್ನಿವೇಶಗಳಿಂದ ಕಟ್ಟಿಕೊಡುವದು. ರಂಗಕೃತಿಯಾಗಿ ಯಶಸ್ವಿಯಾದ ಈ ನಾಟಕ ಸಾಹಿತ್ಯ ಕೃತಿಯಾಗಿಯೂ ಸೊಗಸಾಗಿದೆ.

## ೮: ದ್ರೌಪತಿ ವಸ್ತ್ರಾಪಹರಣ:

ಮೂಲ ಮರಾಠಿ ನಾಟಕ ಬರೆದವರು ರಾಮಲಿಂಗ ನಾರಾಯಣ ಬಾಮಣಗಾಂವಕರ. ಸಂಗೀತ ಮತ್ತು ಸಾಹಿತ್ಯ ಎರಡರ ಶ್ರೇಷ್ಠ ಸಮರಸದಿಂದ ಮರಾಠಿಯ ವ್ಯವಸಾಯಿಕ ರಂಗಭೂಮಿಯಲ್ಲಿ ಪ್ರಸಿದ್ಧವಾಗಿರುವ ನಾಟಕ ಅಲ್ಲಿಯ ಪ್ರೇಕ್ಷಕರು ಇವತ್ತಿಗೂ ನೆನಪಿಸಿಕೊಳ್ಳುವಂತಥ ಮಹತ್ವದ ನಾಟಕ. ವಾಮನರಾಯರು ಇದನ್ನು ೧೯೩೦ ರಲ್ಲಿ ಅನುವಾದಿಸಿದರು ಅದೇ ವರ್ಷ ಕಂಪನಿ ರಾಯಚೂರಿನಲ್ಲಿದ್ದಾಗ ಇದನ್ನು ರಂಗದ ಮೇಲೆ ತಂದರು. ಆಗಲೇ ಕರ್ನಾಟಕದಲ್ಲಿ ಸಂಗೀತ ನಾಟಕಗಳ ಇಳಿಗಾಲ ಪ್ರಾರಂಭವಾಗಿತ್ತು. ಅದರ ಪ್ರತೀಕವೆಂಬಂತೆ ವಾಮನರಾಯರ ಕಂಪನಿಯ ಸ್ಥಿತಿಯೂ ಇಳಿಮುಖಗೊಂಡಿತ್ತು. ಇಂತಹ ಪರಿಸ್ಥಿತಿಯಲ್ಲಿ 'ದ್ರೌಪತಿ ವಸ್ತ್ರಾಪಹರಣ' ನಾಟಕ ಬಹಳ ದಿನ ನಡೆಯಲಿಲ್ಲ ಹೀಗಾಗಿ ಇದುವೆ ವಾಮನರಾಯರು ಅನುವಾದಿಸಿದಂತಹ ಕೊನೆಯ ನಾಟಕವಾಯಿತು.

ಮಹಾಭಾರತದ ಕಥೆಗೆ ಮಹತ್ವದ ತಿರುವುಗಳನ್ನು ತಂದುಕೊಟ್ಟ ಪ್ರಸಂಗಗಳಲ್ಲಿ 'ದ್ರೌಪತಿ ವಸ್ತ್ರಾಪಹರಣ' ಬಹು ಮುಖ್ಯವಾದುದು. ಇದಕ್ಕೆ ಹಿನ್ನಲೆಯಾದುದು ಇಂದ್ರಪ್ರಸ್ತದ ಮಹಾಸಭೆಯಲ್ಲಿ ದುರ್ಯೋಧನನಿಗಾದ ಅವಮಾನ. ಈ ಪ್ರಸಂಗದಿಂದಲೇ ನಾಟಕ ಆರಂಭವಾದುದು. ನಾಟಕದಲ್ಲಿ ಕೌರವರು ಹಸ್ತಿನಾವತಿಯಿಂದ ಪಾಂಡವರ ರಾಜಧಾನಿ ಇಂದ್ರಪ್ರಸ್ತಕ್ಕೆ ಬರುವರು. ದುರ್ಯೋಧನ, ದುಶ್ಯಾಸನ. ಶಕುನಿ, ಭಾನುಮತಿ, ಬುದ್ಧಿಮತಿ ಇವರಿಗೆ ಧರ್ಮನು ಇಂದ್ರಪ್ರಸ್ತದ ನೂತನ ಸೌಂದರ್ಯ ತೋರಿಸುತ್ತಿರುತ್ತಾನೆ. ಭೀಮ, ದ್ರೌಪದಿಯರೂ ಅವರ ಹಿಂದೆ ಇದ್ದಾರೆ. ಅವರೆಲ್ಲ ಮಹಾಸಭೆಗೆ ಬರುತ್ತಿದ್ದಂತೆ ದುರ್ಯೋಧನನಿಗೆ ನೆಲವು ನೀರಿನಂತೆ ಕಂಗೊಳಿಸುತ್ತದೆ. ಆಗ ಉಟ್ಟ ಮಡಿಯನ್ನು ಮೇಲೆತ್ತುವನು. ಇದನ್ನು ನೋಡಿ ದ್ರೌಪತಿ ನಗುವಳು. ಶಕುನಿ, ಭಾನುಮತಿಯರಿಗೆ ಇದು ಗೊತ್ತಾಗುವುದು. ಇದೊಂದು ಘೋರ ಅವಮಾನದ ಪ್ರಸಂಗವೆಂದು ಇದಕ್ಕೆ ತಕ್ಕ ಶಿಕ್ಷೆಯಾಗಬೇಕೆಂದು ಶಕುನಿ ದುರ್ಯೋಧನನ ಕಿವಿ ಊದುತ್ತಾನೆ. ಭಾನುಮತಿಯೂ ಸೇಡಿನ ಕಿಡಿ ಹೊತ್ತಿಸುತ್ತಾಳೆ. ಅಲ್ಲಿಂದ ಅವರು ಹಸ್ತಿನಾವತಿಗೆ ಹೊರಡುವರು. ಇದು ಮೊದಲಂಕದ ವಿಷಯ.

ಅವಮಾನಕ್ಕೆ ಪ್ರತಿಯಾಗಿ ಅವರನ್ನು ಅವಮಾನಗೊಳಿಸುವುದು ಹೇಗೆ ಎಂಬ ಚರ್ಚೆ ಕೌರವರ ಮಧ್ಯೆ ನಡೆದಾಗ ಶಕುನಿ ಒಂದು ಯೋಜನೆಯನ್ನು ದುರ್ಯೋಧನನ ಮುಂದಿಡುತ್ತಾನೆ.

'ನಿನಗೆ, ಪಾಂಡವರ ರಾಜ್ಯಲಕ್ಷ್ಮಿಯನ್ನು ಯಾವ ಯುದ್ಧದ ಶ್ರಮವಿಲ್ಲದೆ ಕೈವಶ ಮಾಡಿಕೊಳ್ಳುವುದು ಬೇಕಾಗಿದ್ದರೆ, ಇಂದು ನಾವು ಹಸ್ತಿನಾವತಿ ತಲುಪಿದ ಕೂಡಲೇ-ನಿಮ್ಮ ತಂದೆಯಿಂದ ಧರ್ಮರಾಜನಿಗೆ ದ್ಯೂತವಾಡುವದಕ್ಕೆ ಆಮಂತ್ರಣ ಕಳಿಸೋಣ ಧರ್ಮರಾಜನಿಗೋ ದ್ಯೂತದ ವ್ಯಸನ ಭಯಂಕರವಾಗಿದೆ. ತಾನೇ ದ್ಯೂತವಿದ್ಯಾ ಪ್ರವೀಣನೆಂದು ಹೆಮ್ಮೆ ಪಡುತ್ತಾನೆ! ಇದೇ ವೈರಿಗಳ

ಮರ್ಮಸ್ಥಾನ. ಇಲ್ಲಿ ನಾವು ಕೈ ಹಾಕದ ವಿನಹ ನಮ್ಮ ಕಾರ್ಯವಾಗುವುದಿಲ್ಲ. ಅಂತೆಯೇ ಮೊದಲು ದೃತರಾಷ್ಟ್ರನಿಂದ ಅಪ್ಪಣೆ ಪಡೆದು ಯಾರನ್ನಾದರೂ ಇಂದ್ರಪ್ರಸ್ಥಕ್ಕೆ ಕಳಿಸೋಣ'.

ಎಂದು ಶಕುನಿ ಹೇಳುತ್ತಾನೆ. ಇದು ದೃತರಾಷ್ಟ್ರನಿಂದಲೇ ಪ್ರೇರಿತವಾಗಬೇಕೆಂದೂ ತಿಳಿಸುತ್ತಾನೆ. ಹಸ್ತಿನಾವತಿಗೆ ಬಂದ ಮೇಲೆ ಈ ಯೋಜನೆ ಕಾರ್ಯರೂಪಕ್ಕೆ ತರಲು ದುರ್ಯೋಧನ ನಾಟಕ ಮಾಡುತ್ತಾನೆ. ಮನಸ್ಸಿಗೆ ಬೇಜಾರಾಗಿರುವುದರಿಂದ ಮನೋರಂಜನೆಗಾಗಿ ಅರಮನೆಯಲ್ಲಿ ದ್ಯೂತದ ಆಟ ನಡೆಸಿಕೊಡಬೇಕೆಂದು, ಧರ್ಮನನ್ನು ಆಮಂತ್ರಿಸಬೇಕೆಂದು ತಂದೆಗೆ ಮನವಿ ಮಾಡಿಕೊಳ್ಳುವನು. ದ್ಯೂತದಾಟದ ಉದ್ದೇಶ ಸರಿಯಾದುದಲ್ಲವೆಂದು ಅರಿತ ವಿದುರ, ಅದನ್ನು ತಪ್ಪಿಸಲು ಪ್ರಯತ್ನಿಸುತ್ತಾನೆ. ದುರ್ಯೋಧನನ ಹಟದ ಎದುರು ವಿದುರನ ನೀತಿ ನಡೆಯುವುದಿಲ್ಲ. ದೃತರಾಷ್ಟ್ರ ಮಗನ ಮೇಲಿನ ಮೋಹದಿಂದಾಗಿ ಅಸಹಾಯಕನಾಗಿ ದ್ಯೂತದಾಟಕ್ಕೆ ಅನುಮತಿ ಕೊಡುವನು.

ಹಸ್ತಿನಾಪುರದ ಅರಮನೆಯ ಸಭೆಯಲ್ಲಿ ದ್ಯೂತದಾಟ ನಡೆಯುತ್ತದೆ. ಪಾಂಡವರು ಸೋಲಿನತ್ತ ಸಾಗುತ್ತಾರೆ. ಕೌರವರು ಅಹಂಕಾರದಿಂದ ಮೆರೆಯುತ್ತಾರೆ. ವಿದುರ ಮಧ್ಯೆ ಪ್ರವೇಶಿಸಿ ಆಟ ನಿಲ್ಲಿಸಲು ಧರ್ಮನಿಗೆ ಒತ್ತಾಯಿಸುತ್ತಾನೆ. 'ಕುಲಕ್ಷಯ'ಕ್ಕಾಗಿ ಶಕುನಿ ಹೂಡಿದ ಆಟ. ಇದರಿಂದ ಪಾಂಡವರಿಗಷ್ಟೆ ಅಲ್ಲ ಕೌರವರಿಗೂ ಭಯಂಕರ ನಷ್ಟವಿದೆ ಎಂದು ವಿದುರ ತಿಳಿಹೇಳಿದರೂ ಪ್ರಸಂಗ ಕೈ ಮೀರಿ ಹೋಗುತ್ತದೆ. ಧರ್ಮರಾಜನು ರಾಜ್ಯವನ್ನು ಪಣಕ್ಕಿಟ್ಟು ಆಡುತ್ತಾನೆ. ಸೋಲಿನ ಮೇಲೆ ಸೋಲು. ಕೌರವರ ಅಹಂಕಾರ, ಅಟ್ಟಹಾಸ ಮಿತಿಮೀರುತ್ತದೆ. ದುಶ್ಯಾಸನನು ದ್ರೌಪದಿಯನ್ನು ದಾಸಿಯೆಂದು ಕರೆದು ಅವಮಾನಿಸುತ್ತಾನೆ. ಅವಳು ಸಭೆಗೆ ಬರಲು ಒಪ್ಪದಿದ್ದಾಗ ಅವಳ ಮುಡಿ ಹಿಡಿದು ಎಳೆದು ತರುತ್ತಾನೆ. ದುರ್ಯೋಧನನ ಆಜ್ಞೆಯ ಮೇರೆಗೆ ಅವಳ ವಸ್ತ್ರಾಪಹರಣಕ್ಕೆ ಕೈ ಹಾಕುತ್ತಾನೆ. ಈ ಸಂದರ್ಭದಲ್ಲಿ ಬುದ್ಧಿಮತಿ ಮತ್ತು ವಿಕರ್ಣ ಇವರಿಬ್ಬರೂ ದ್ರೌಪತಿ ಪರ ನಿಂತು ಅವಳ ಅವಮಾನ ತಪ್ಪಿಸಲು ಪ್ರಯತ್ನಿಸುವರು. ಆದರೆ ದುಶ್ಯಾಸನ, ದುರ್ಯೋಧನ ಯಾರ ಮಾತನ್ನು ಕೇಳುವುದಿಲ್ಲ. ಪಾಂಡವರು ತಮ್ಮ ಸೇವಕರೆಂದು, ದ್ರೌಪತಿ ಸೇವಕಿಯೆಂದು ಮನ ಬಂದಂತೆ ಮಾತಾಡಿ ಅವಮಾನ ಮಾಡುತ್ತಾರೆ. ದ್ರೌಪತಿ ಸಭೆಯಲ್ಲಿರುವ ಹಿರಿಯರಿಗೆಲ್ಲ ತನ್ನ ಮಾನ ರಕ್ಷಿಸಬೇಕೆಂದು ಅಂಗಲಾಚಿ ಬೇಡುತ್ತಾಳೆ. ಯಾರೂ ಮುಂದೆ ಬರದೆ ಇರಲು ಶ್ರೀಕೃಷ್ಣ ಪರಮಾತ್ಮನಲ್ಲಿ ಮೊರೆ ಹೋಗುತ್ತಾಳೆ. ಅವನಿಂದ ದ್ರೌಪತಿಯ ಸೀರೆ ಅಕ್ಷಯಾಂಬರವಾಗಿ, ದುಶ್ಯಾಸನನು ಸೆಳೆದಂತೆ ಅದು ಬೆಳೆಯುತ್ತ ಹೋಗುತ್ತದೆ.

ರಾಜಸಭೆಯ ಗೋಡೆ ಒಡೆದು ಮಹಾವಿಷ್ಣುವಿನ ಬಾಲಮೂರ್ತಿ ಪ್ರತ್ಯಕ್ಷವಾಗುವುದು. ಇದನ್ನು ನೋಡಿ ದುರ್ಯೋಧನ ಮೂರ್ಛೆ ಹೋಗುವವನು. ದೃತರಾಷ್ಟ್ರನು ಸಿಂಹಾಸನದಿಂದ ಎದ್ದು 'ದ್ರೌಪತಿಯು ದಾಸಿಯಲ್ಲ; ಸ್ವತಂತ್ರೆ. ಇದು ನನ್ನ ನಿರ್ಣಯ. ದ್ರೌಪತಿಯ ಪುಣ್ಯದಿಂದ ಭಗವಂತನು ಬಾಲರೂಪದಿಂದ ನನ್ನ ಮಂದಿರದಲ್ಲಿ ಪ್ರಕಟನಾದನು. ಅವಳ ಉಪಕಾರ ನನಗೆ ಬಹಳವಾಗಿದೆ. ನನ್ನಿಂದ ಬೇಕಾದ

ವರವನ್ನು ಬೇಡಿಕೊಳ್ಳಲಿ' ಎಂದು ದ್ರೌಪತಿಗೆ ಕೇಳುವನು. ಆಗ ದ್ರೌಪತಿಯು 'ಪಾಂಡವರನ್ನು ಶಸ್ತ್ರಾಸ್ತ್ರ ಸಹಿತ ಮುಕ್ತ ಮಾಡಿರಿ' ನಾನು ಕೇಳುವುದು ಇದೊಂದೇ ವರವನ್ನು. ಇಷ್ಟು ದಯಪಾಲಿಸಿದರೆ ಇಂದ್ರನ ರಾಜ್ಯ ಕೊಟ್ಟಂತಾಗುವುದು' ಎಂದು ಬೇಡಿಕೊಳ್ಳುವಳು. ಅದಕ್ಕೆ ಧೃತರಾಷ್ಟ್ರನು–'ಯಾವಳು ತನ್ನ ಆತ್ಮತೇಜವಾದ ವಿಶ್ವ ಬಾಲಕನನ್ನು ಪ್ರಸನ್ನೀಕರಿಸಿಕೊಂಡ, ಕೌರವಕುಲದ ಮತ್ತು ಸಿಂಹಾಸನದ ನಾಶವನ್ನು ತಪ್ಪಿಸಿದಳೋ ಅಂಥವಳಿಗೆ ಜಗತ್ತಿನ ರಾಜ್ಯವನ್ನು ಕೊಟ್ಟರೂ ಕಡಿಮೆಯೇ ಹೋಗು ದೇವಿ ನಿನ್ನ ಪತಿಗಳನ್ನು ಅವರವರ ರಾಜ್ಯವೈಭವ ಮತ್ತು ಶಸ್ತ್ರಾಸ್ತ್ರ ಸಹಿತ ಮುಕ್ತ ಮಾಡಿರುವೆನು' ಎಂದು ಘೋಷಿಸುವನು. ಇದನ್ನು ಕೇಳಿ ದುರ್ಯೋಧನ, ಶಕುನಿ ತಮ್ಮ ಪ್ರಯತ್ನವೆಲ್ಲ ವ್ಯರ್ಥವಾಯಿತೆಂದು ಪಶ್ಚಾತಾಪ ಪಡುವರು. ಪಾಂಡವರು ಮಾತ್ರ ಸಂತೋಷದಿಂದ ಇಂದ್ರಪ್ರಸ್ಥಕ್ಕೆ ಹೊರಡುವರು. ಇಲ್ಲಿಗೆ ನಾಟಕಕ್ಕೆ ತೆರೆ ಬೀಳುವುದು.

ದ್ರೌಪತಿಯೇ ನಾಟಕದ ನಾಯಕಿಯಾಗಿದ್ದಾಳೆ. ಭೀಮನ ಬಲವನ್ನು ನಿಯಂತ್ರಿಸುತ್ತ, ಧರ್ಮನ ನೀತಿಯನ್ನು ಬೆಂಬಲಿಸುತ್ತಾಳೆ. ಭಾನುಮತಿಯಿಂದಾಗುವ ಅವಮಾನಗಳನ್ನು ಸಹಿಸಿ, ತನ್ನ ಪತಿಗಳನ್ನು ಮತ್ತು ಕುಲದ ಕ್ಷೇಮವನ್ನು ಆಶಿಸುತ್ತಾಳೆ. ಭೀಮ ಅವಳ ನೆರಳಾಗಿ ಹಿಂಬಾಲಿಸುತ್ತಾನೆ. ಧೃತರಾಷ್ಟ್ರನ ಮಗನಾದರೂ ವಿಕರ್ಣ ಮತ್ತು ದುಶ್ಯಾಸನನ ಪತ್ನಿಯಾದ ಬುದ್ಧಿಮತಿ ದ್ರೌಪತಿಯ ಪಕ್ಷದಲ್ಲಿ ನಿಂತು ಅವಳ ಹಿತೈಷಿಗಳಾಗುತ್ತಾರೆ. ನಾಟಕದುದ್ದಕ್ಕೂ ವಿದುರನ ನೀತಿ ಅಂತಃಸೂತ್ರವಾಗಿ ಈ ನಾಟಕವನ್ನು ಕಟ್ಟುತ್ತ ಹೋಗುತ್ತದೆ. ಸೂಕ್ಷ್ಮವಾಗಿ ನೋಡಿದರೆ ಧರ್ಮರಾಯ, ಗಾಂಧೀಜಿಯವರ ಹಾಗೆ, ಭೀಮ ಸುಭಾಷಚಂದ್ರ ಬೋಸರ ಹಾಗೆ ಕಾಣಿಸುವರು. ಶಕುನಿ, ದುರ್ಯೋಧನ, ದುಶ್ಯಾಸನರು ಬ್ರಿಟಿಷರಂತೆಯೂ ಕಾಣಿಸುವರು. ಸಮಕಾಲೀನ ಸ್ವಾತಂತ್ರ್ಯ ಸಂಗ್ರಾಮದ ಸಂಗತಿಯನ್ನು ನಾಟಕ ಅತ್ಯಂತ ಸೂಕ್ಷ್ಮವಾಗಿ ಧ್ವನಿಸುತ್ತದೆ.

ನಾಟಕೀಯತೆಯನ್ನು ಸ್ಫುಟಗೊಳಿಸುವ ಹಲವಾರು ಸನ್ನಿವೇಶಗಳು ಎರಕಗೊಂಡಿವೆ. ಮಯ ಸಭೆಯಲ್ಲಿ ದುರ್ಯೋಧನ ನೆಲವನ್ನೇ ಜಲವೆಂದು ಭಾವಿಸಿ ವರ್ತಿಸಿದ ಘಟನೆ. ಭಾನುಮತಿ ದ್ರೌಪತಿಯ ಮೈಮೇಲಿನ ಆಭರಣಗಳನ್ನು ತೆಗೆದುಕೊಳ್ಳುವುದು. ದುಶ್ಯಾಸನ ದೌರ್ಜನ್ಯಕ್ಕೆ ಭಾನುಮತಿ ಅಡ್ಡ ಬರುವುದು, ದ್ರೌಪತಿಗೆ ಸೀರೆ ಅಕ್ಷಯಾಂಬರವಾಗಿ ಕರುಣಿಸೆಂದು ಕೃಷ್ಣನು ಬಾಲಕನಾಗಿ ಪ್ರಸನ್ನನಾಗುವುದು–ಹೀಗೆ ನಾಟಕೀಯ ಪರಿಣಾಮಕ್ಕಾಗಿ ಕೆಲವು ಪ್ರಸಂಗಗಳು ಬಣ್ಣ ಪಡೆದುಕೊಂಡಿವೆ.

**ನಾಟಕ ಕುರಿತು:**

ನಾಟಕದ ಸಾಹಿತ್ಯ–ಸಂಭಾಷಣೆ ಕೂಡ ಪ್ರೌಢವಾಗಿದೆ ದ್ಯೂತ ಆಟದ ಕೆಟ್ಟ ಪರಿಣಾಮಗಳನ್ನು ಧೃತರಾಷ್ಟ್ರ, ದುರ್ಯೋಧನನಿಗೆ ತಿಳಿಸಿ ಹೇಳುವಾಗ ವಿದುರನಾಡುವ ಮಾತುಗಳು ಪರಿಣಾಮಕಾರಿ ಆಗಿವೆ. "ಅಲ್ಪಬುದ್ಧಿ ದುರಾಶೆ, ಚಾಂಚಲ್ಯ– ಈ ತ್ರಿದೋಷಗಳಿಂದ ಯಾವನ ಬುದ್ಧಿ ಕೆಡುವುದಿಲ್ಲವೋ ಅಂಥವನೇ

ಯಾವಾಗಲು ತನ್ನ ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಳ್ಳುವನು ವಿವೇಕದಿಂದ ನಡೆಯುವನು. ಅವನು ದ್ಯೂತದಂತಹ ನಿಂದ್ಯವಾದ ಕ್ರೀಡೆಯಿಂದ ದೂರವಿರುವನು"

"ಶಬ್ದಗಳಿಗೆ ಅರ್ಥವನ್ನು ವ್ಯಕ್ತಪಡಿಸುವ ಶಕ್ತಿಯಿರುವಂತೆ ಅವುಗಳನ್ನಾಡುವವನ ಅಂತಃಕರಣವನ್ನು ವ್ಯಕ್ತಮಾಡುವ ಶಕ್ತಿಯೂ ಇರುತ್ತಿದ್ದರೆ ಪಾಪಿ ಅಂತಃಕರಣವೂ ಯಾವುದೆಂಬುದು ಈಗಲೇ ಸ್ಪಷ್ಟವಾಗಿ ಹೋಗುತ್ತಿತ್ತು!" ಶಕುನಿ "ದುರ್ಯೋಧನಾದಿ ಕೌರವರು ಸಿಂಹಾಸನದ ಕಳ್ಳರೆ ಹೇಗೆ?" ಎಂದು ಕೇಳಿದಾಗ ವಿದುರ;

"ಈಚೆಗೆ ಶಬ್ದಗಳೇ ಕಳ್ಳತನ ಮಾಡಹತ್ತಿವೆ. ಅದು ಹೇಗೆಂದರೆ. ಇತ್ತೀಚೀಗೆ ಅವುಗಳಿಗೆ ಅರ್ಥವನ್ನು ಮುಚ್ಚಿಡುವ ಗುಣವು ಪ್ರಾಪ್ತವಾಗಿದೆ".

ವಸ್ತ್ರಾಪಹರಣ ಸನ್ನಿವೇಶದಲ್ಲಿ ದ್ರೌಪತಿ ದುರ್ಯೋಧನನಿಗೆ "ಬರಿಯ ಸ್ಥಳಾಂತರದಿಂದ ಮರ್ಕಟವು ಮನುಷ್ಯನಾದೀತೆ? ಧರ್ಮವೆಂಬ ವಜ್ರವು ಹೀನಸ್ಥಿತಿಯ ತಿಪ್ಪೆಯಲ್ಲಿರಲಿ ಇಲ್ಲವೇ ಮಹೋನ್ನತೆಯ ಮುಕುಟದಲ್ಲಿರಲಿ ಅದು ವಜ್ರ, ವಜ್ರವೇ".

ನಾಟಕಕ್ಕೆ ನಾಟಕೀಯ ಗುಣವಿರುವಂತೆ ಹಾಡುಗಳಿಗೂ ಅಂತಹ ಸ್ಪರ್ಶವಿರುವುದನ್ನು ಗಮನಿಸಬೇಕು. ವಸ್ತ್ರಾಪಹರಣಕ್ಕೆ ದುಶ್ಯಾಸನ ಕೈ ಹಾಕಿದಾಗ ದ್ರೌಪತಿ ಕೃಷ್ಣನಲ್ಲಿ ಪ್ರಾರ್ಥಿಸುವ ಮಾಲಕಂಸರಾಗದ ಹಾಡು

**"ಹೇ ವಾಮನಾ ಕರುಣಾಘನಾ**

**ಹೇ ಪದ್ಮನಾಭ ಮುಕುಂದ ಮುರ ಮರ್ದನ........**

**ಮತ್ತು ಕವಾಲಿ ರಾಗದಲ್ಲಿ**

**"ಓಡಿ ಬಾರೋ ಭಕ್ತರ ದೊರೆಯೇ ।**

**ನಾನು ಅನಾಥೆ ಹರಿಯೇ ।**

**ನೋಡು ನಿನ್ನ ಪ್ರಿಯ ಭಗಿನಿಯಾ ।**

**ಮಾನವ ಕಾಯೋ ಹರಿಯೆ ।**

ಎಂದು ಕೃಷ್ಣಪರಮಾತ್ಮನಲ್ಲಿ ಮೊರೆಯಿಡುವ ಹಾಡಿನ ಪರಿಣಾಮವು ಕೂಡ ಚೇತೋಹಾರಿಯಾದುದು.

ಹೀಗೆ "ದ್ರೌಪತಿ ವಸ್ತ್ರಾಪಹರಣ" ವು ಪಾತ್ರ, ಸನ್ನಿವೇಶ, ಕಥಾಸಂದರ್ಭ, ಸಂಭಾಷಣೆ, ಸಂಗೀತಾದಿ ಗುಣಗಳಿಂದ ರಂಗಕೃತಿಯಾಗಿಯೂ ಮತ್ತು ಸಾಹಿತ್ಯ ಕೃತಿಯಾಗಿಯೂ ನಿಲ್ಲುವಂಥ ಹಿರಿಮೆ ಪಡೆದಿದೆ.

**ಆ: ಮೂಲ ಮರಾಠಿ ಮತ್ತು ಅನುವಾದ:**

ನಮ್ಮ ರಂಗಭೂಮಿಯ ಚರಿತ್ರೆಯನ್ನು ಹೇಳುವಾಗ ಸಾಮಾನ್ಯವಾಗಿ ಅನುವಾದ, ರೂಪಾಂತರಗಳ ಮೂಲಕವೇ ನಮ್ಮ ನಾಟಕ, ಸಾಹಿತ್ಯ ರಚನೆಯಾಯಿತು ಎಂದು ಹೇಳುವುದು ಉಂಟು. ಆದರೆ ಕರ್ನಾಟಕದ ಸಂದರ್ಭದಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಈ ಕಂಪನಿ ಸ್ವರೂಪದ ಆಧುನಿಕ ರಂಗಭೂಮಿಯು ಮಾತ್ರ ದೇಸಿಯ ನೆಲೆಯಿಂದಲೇ ತೊಡಗಿಸಿಕೊಂಡಿತ್ತೆಂಬುದು ಗಮನಾರ್ಹ. ಇದಕ್ಕೆ ಈ ಪ್ರದೇಶದ ರಾಜಕೀಯ ಹಾಗೂ ಸಾಂಸ್ಕೃತಿಕ ವಾತಾವರಣವೇ ಕಾರಣವೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ಗಮನಿಸಲಾಗಿದೆ.

ಪೌರಾಣಿಕ ನಾಟಕಗಳಿಂದಲೇ ಕಂಪನಿ ನಾಟಕಗಳ ಇತಿಹಾಸ ಆರಂಭವಾಗುವುದು. ಅಷ್ಟೇ ಅಲ್ಲ 'ಕಂಪನಿ ನಾಟಕಗಳೆಂದರೆ ಪೌರಾಣಿಕ ನಾಟಕಗಳೇ' ಎಂದು ಹೇಳುವಷ್ಟು ಪೌರಾಣಿಕ ನಾಟಕಗಳ ರಚನೆ ಸಮೃದ್ಧಿಯಾಗಿದೆ. ಈ ನಾಟಕಗಳು ಇಂಗ್ಲೀಷ ನಾಟಕಗಳಿಂದ ಪ್ರಭಾವಿತವಾಗಿದ್ದವು ಅನಂತರದಲ್ಲಿ ಸಂಸ್ಕೃತ ನಾಟಕಗಳು, ಬಂಗಾಲಿ ನಾಟಕಗಳು, ಮರಾಠಿ ನಾಟಕಗಳು ಅನುವಾದವಾಗಿ, ರೂಪಾಂತರವಾಗಿ ಆಧುನಿಕ ರಂಗಭೂಮಿಯ ನಡೆಯನ್ನು ಸಮೃದ್ಧಗೊಳಿಸಿದವು.

ಇಂಗ್ಲೀಷ ನಾಟಕಗಳ ಅನುವಾದದ ಸ್ವರೂಪ ಕುರಿತು ಶ್ರೀರಂಗರು ಹೇಳುವುದು ಏನೆಂದರೆ 'ಪ್ರಾರಂಭದಲ್ಲಿ ಮೂಲ ನಾಟಕಗಳನ್ನು ನಮ್ಮ ನಾಟ್ಯ ಸಂಪ್ರದಾಯಕ್ಕಾಗಿ, ನಮ್ಮ ಪ್ರೇಕ್ಷಕರಿಗಾಗಿ ಅನುವಾದಿಸಲ್ಪಟ್ಟವು ಪಾರ್ಸಿ ಕಂಪನಿಗಳು ಪ್ರೇಕ್ಷಕರ ರಂಜನೆಗಾಗಿ ನಾಟಕಗಳಲ್ಲಿ ನೃತ್ಯ, ಸಂಗೀತಗಳನ್ನು ಸೇರಿಸಿದವು. ಸಂಪ್ರದಾಯದ ದೃಷ್ಟಿಯಿಂದ ಮೂಲ ನಾಟಕ ಟ್ರಾಜಡಿ ಆಗಿದ್ದರೂ ಅದಕ್ಕೆ ಅದ್ಭುತ ರಮ್ಯ (melodramatic) ಕಳೆಯನ್ನು ಕೊಟ್ಟು ಸುಖಾಂತ ನಾಟಕವನ್ನಾಗಿಯೇ ಬದಲಾಯಿಸಲಾಯಿತು. ಸಾಮಾನ್ಯವಾಗಿ ಮೂಲದ ಗದ್ಯ ನಾಟಕಗಳು ಪೂರ್ತಿಯಾಗಿ ಗದ್ಯದಲ್ಲಿಯೇ ಅನುವಾದಿಸಲ್ಪಟ್ಟವು...[೧] ಈ ಅನುವಾದಗಳ ವೈಶಿಷ್ಟ್ಯ ಎಂದರೆ ನಾಟಕದೊಳಗಿನ ಸಂಭಾಷಣೆಯ ಶೈಲಿ ಗ್ರಂಥಸ್ಥವಾಗಿತ್ತು. ಅತ್ಯಂತ ಕೃತಕವಾಗಿತ್ತು. ಇನ್ನೊಂದು ವಿಶೇಷತೆ ಎಂದರೆ ಎಲ್ಲ ಅನುವಾದಕರು ಸಂಭಾಷಣೆಗಳನ್ನು, ಸಂದರ್ಭಗಳನ್ನು ಚಾಚೂ ತಪ್ಪದೆ ಅನುವಾದಿಸುತ್ತಿದ್ದರೂ ಪಾತ್ರಗಳ ಹೆಸರುಗಳನ್ನು ನಮ್ಮಲ್ಲಿ ರೂಢವಿದ್ದ ಹೆಸರುಗಳಿಗೆ ಬದಲಾಯಿಸುತ್ತಿದ್ದರು. ಉದಾಹರಣೆ ರೋಮಿಯೊ-ರಮೇಶ, ಜ್ಯೂಲಿಯೆಟ್-ಲಲಿತಾ ಮುಂತಾಗಿ.

ಇಂಗ್ಲೀಷ ಭಾಷೆಯ ನಾಟಕಗಳ ಅನುವಾದದಿಂದ ನಮ್ಮ ಆಧುನಿಕ ರಂಗಭೂಮಿಯ ಬೆಳವಣಿಗೆಯ ಮೇಲೆ ತೀವ್ರ ಪರಿಣಾಮವಾಯಿತು. ಅದೇ ಕಾಲಕ್ಕೆ ಸಂಸ್ಕೃತ ನಾಟಕಗಳ ಅನುವಾದವೂ ನಡೆಯಿತು. ಇದರ ಕಾರಣ ಸ್ಪಷ್ಟವಿಲ್ಲ ಆದರೂ ಊಹಿಸಬಹುದಾಗಿದೆ ಆಂಗ್ಲ ಶಿಕ್ಷಣದ ಅಭಿಮಾನಿಗಳಂತೆ ಅದಕ್ಕೆ ವಿರೋಧಿಗಳೂ ಇದ್ದರು. ಒಂದು ಕಡೆ ಇಂಗ್ಲೀಷ ಜನ. ಇಂಗ್ಲೀಷ ಭಾಷೆ ಇವುಗಳ ಅಭಿಮಾನ

ಹೆಚ್ಚಿದಂತೆ ಅದಕ್ಕೆ ಪ್ರತಿಯಾಗಿ ನಮ್ಮ ಸಂಪ್ರದಾಯದ ಅಭಿಮಾನ ಇನ್ನೊಂದು ಕಡೆ ಸಿಡಿದೆದ್ದಿತು, ಅಲ್ಲದೆ ನಾಟಕಕ್ಕೂ ಸಂಸ್ಕೃತಿಗೂ ಸಂಬಂಧವಿದ್ದುದರಿಂದ ಇನ್ನೊಂದು ಸಂಸ್ಕೃತಿಯ ನಾಟಕಗಳಿಗಿಂತ ನಮ್ಮ ಸಂಸ್ಕೃತಿಯ ನಾಟಕಗಳೇ ನಾವು ಆಡಲೂ ನೋಡಲೂ ಹೆಚ್ಚು ಯೋಗ್ಯ ಎಂದು ಕೆಲವರಿಗನ್ನಿಸಿರಬಹುದು.

ಇನ್ನೊಂದು ವಿಷಯ ಆಧುನಿಕ ಭಾರತೀಯ ರಂಗಭೂಮಿಯ ಮುನ್ನಡೆಯಲ್ಲಿ ಬಂಗಾಲಿ ಮತ್ತು ಮರಾಠೀ ರಂಗಭೂಮಿಗಳು ಮಾರ್ಗದರ್ಶಕವಾಗಿದ್ದವು. ಬಂಗಾಲ ನಮಗೆ ದೂರ; ಅಲ್ಲಿ ರಾಜಕೀಯ ಜಾಗೃತಿ ಚಳವಳಿ ಉಗ್ರವಾದ ಸಂದರ್ಭದಲ್ಲಿ ಕೆಲ ಕಾಲ ನಮಗೆ ಬಂಗಾಲೀ ನಾಟಕಗಳ ಮತ್ತು ನಾಟಕಕಾರರ ಪರಿಚಯವಾಯಿತು. ಆದರೆ ಮರಾಠಿಯು ನಮ್ಮ ನೆರೆಹೊರೆಯ ಭಾಷೆ. ಅಲ್ಲಿ ಅಣ್ಣಾಸಾಹೇಬ ಕಿರ್ಲೋಸ್ಕರರ ಶಾಕುಂತಲ, ಸೌಭದ್ರ ನಾಟಕಗಳಿಂದ ಬೆಳೆಯುತ್ತಿದ್ದ ರಂಗಭೂಮಿ ಸಹಜವಾಗಿಯೇ ನಮ್ಮ ಮೇಲೆ ಪ್ರಭಾವವನ್ನು ಬೀರಿತು. ಉತ್ತರ ಕರ್ನಾಟಕ ಪ್ರದೇಶದಲ್ಲಂತೂ ಮೇಲಿಂದ ಮೇಲೆ ಮರಾಠಿ ನಾಟಕ ಕಂಪನಿಗಳು ಬಂದು ನಾಟಕಗಳನ್ನಾಡಿ ಜನರ ಮೆಚ್ಚುಗೆಯನ್ನು ಪಡೆಯುತ್ತಿದ್ದವು ಮುಂದೆ ನಮ್ಮಲ್ಲಿ ಸ್ಥಾಪಿತವಾದ ಕಂಪನಿಗಳು ಪ್ರೇಕ್ಷಕರನ್ನು ಆಕರ್ಷಿಸುವುದಕ್ಕಾಗಿ ನೇರವಾಗಿ ಮರಾಠೀ ನಾಟಕಗಳನ್ನು ಎತ್ತಿಕೊಳ್ಳುತ್ತಿದ್ದವು. ಅನುವಾದವೂ ಅಲ್ಲ, ರೂಪಾಂತರವೂ ಅಲ್ಲ. ಇದಲ್ಲದೇ ಕ್ಯಾಪಿರೈಟ್ ಮೊದಲಾದ ಯಾವ ಜಂಜಾಟವೂ ಇಲ್ಲದ ಪರಿಸ್ಥಿತಿಯಲ್ಲಿ ಅನೇಕ ಸಲ ಹೆಸರನ್ನು ಬದಲಾಯಿಸದೆ 'ಕನ್ನಡೀಕರಿಸಿ' ಆಡುತ್ತಿದ್ದರು.[೨]

ಶ್ರೀರಂಗರು ಆರಂಭಕಾಲದ ಕಂಪನಿ ನಾಟಕಗಳ ಅನುವಾದ ಪ್ರಕ್ರಿಯೆಯನ್ನು ಸರಿಯಾಗಿಯೇ ಗುರುತಿಸಿರುವರು. ಇದೇ ಸಂದರ್ಭದಲ್ಲಿ ಮೂಲಕೃತಿಗೂ, ಅನುವಾದಕೃತಿಗೂ ಅನಿವಾರ್ಯವಾಗಿ ಸಂಭವಿಸುವ 'ದೂರ'ದ ಬಗೆಗೆ ಆಂದ್ರೆ ಲೇಫಿಯರ್ ಹೇಳುವ "ವಕ್ರೀಕರಣ" ಪರಿಕಲ್ಪನೆ ಗಮನಿಸುವಂತಹದ್ದು.

"ಮೂಲ-ಅನುವಾದಗಳ ನಡುವಿನ ದೂರಕ್ಕೆ ಎರಡು ಭಾಷೆಗಳ ಭಿನ್ನಭಿನ್ನ ವ್ಯವಸ್ಥೆಗಳು ಮತ್ತು ಒಂದು ಭಾಷೆಯ ಹೋಲಿಕೆಯಲ್ಲಿ ಇನ್ನೊಂದು ಭಾಷೆಯ ಇತಿಮಿತಿಗಳು ಮಾತ್ರ ಕಾರಣಗಳಲ್ಲ. ಅನುವಾದಕಾರನು ಎರಡು ಭಾಷೆಗಳಲ್ಲಿಯೂ ಸಾಮರ್ಥ್ಯವನ್ನು ಹೊಂದಿದ್ದರೂ ಮತ್ತು ಎರಡು ಭಾಷೆಗಳೂ ಶ್ರೀಮಂತವಾಗಿದ್ದರೂ ಮೂಲ ಹಾಗೂ ಅದರ ಅನುವಾದ ಸಮಾನವಾಗಿರಲು ಸಾಧ್ಯವೇ ಇಲ್ಲ. ಏಕೆಂದರೆ ಅನುವಾದ ಕೇವಲ 'ಭಾಷಾಂತರ'ವಲ್ಲ. ಮೂಲತಃ ಅದೊಂದು ಗ್ರಹಿಕೆಯ ಕ್ರಮ. ಒಂದು ವಿಶಿಷ್ಟ ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಿಕ ವ್ಯವಸ್ಥೆಯಿಂದ ರೂಪಿಸಲ್ಪಟ್ಟ ವ್ಯಕ್ತಿ (ಅನುವಾದಕ) ಮತ್ತೊಂದು ಭಿನ್ನ ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಿಕ ವ್ಯವಸ್ಥೆಯಿಂದ ರೂಪಿಸಲ್ಪಟ್ಟ ಕೃತಿಯನ್ನು ಸಂಪೂರ್ಣವಾಗಿ ಗ್ರಹಿಸಲು ಸಾಧ್ಯವೇ ಇಲ್ಲ. ಎಂದರೆ ಅನುವಾದಕ ಅನುವಾದಿತ ಕೃತಿಯ "ಇಂಪ್ಲೈಡ್

ರೀಡರ್' ಅಥವಾ 'ನಿರೀಕ್ಷಿತ ಓದುಗ'ನಾಗಲು ಅಸಾಧ್ಯ. ಅನುವಾದಕನು ತಾನು ಏನನ್ನು ಗ್ರಹಿಸಲು ಸಮರ್ಥನಿದ್ದಾನೋ ಹಾಗೂ ಸಿದ್ಧನಿದ್ದಾನೋ ಅಷ್ಟನ್ನು ಮಾತ್ರ ಗ್ರಹಿಸುತ್ತಾನೆ. ಈ ಬಗೆಯ ಗ್ರಹಿಕೆಯ ವ್ಯತ್ಯಾಸಗಳಿಂದ ಮೂಲ ಅನುವಾದಗಳ ನಡುವೆ ಉದ್ಭವಿಸುವ ಸ್ಥಿತಿಯನ್ನು ಲೆಫೆವಿಯರ್ 'ರಿಫ್ರ್ಯಾಕ್ಷನ್' (ವಕ್ರೀಕರಣ) ಎಂದು ಕರೆಯುತ್ತಾನೆ.[೩] ಮರಾಠಿಯ ಜನಪ್ರಿಯ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸುವಾಗ ವಾಮನರಾಯರು ಅಂಥ ಸಮಸ್ಯೆಯನ್ನು ಎದುರಿಸಲಿಲ್ಲ. ಪ್ರೇಕ್ಷಕಸಮುದಾಯ ಒಪ್ಪಿಕೊಂಡ ಕೃತಿಗಳನ್ನು ಮತ್ತೊಂದು ಭಾಷೆಯ ಪ್ರೇಕ್ಷಕಸಮುದಾಯಕ್ಕೆ ತಲುಪಿಸುವುದಕ್ಕಾಗಿ ಅನುವಾದ ಮಾಡಿದರು. ಕಾಲ, ದೇಶ ಒಂದೇ ಆಗಿದ್ದು ಭಾಷೆ ಮಾತ್ರ ಬೇರೆ. ಹೀಗಾಗಿ ಅವರಿಗೆ ಭಾಷಾಂತರ ಮುಖ್ಯವಾಯಿತು. ವ್ಯಯುಕ್ತಿಕ ಗ್ರಹಿಕೆ ಅವರಿಗೆ ತೊಡಕಾಗಲಿಲ್ಲ.

ವಾಮನರಾವ ಮಾಸ್ತರರು ಮರಾಠಿಯಿಂದ ಭಾಷಾಂತರಿಸಿದ ನಾಟಕಗಳಿಗೆ 'ಭಾವಾನುವಾದ ನಾಟಕಗಳು' ಎಂದು ತಾವೇ ಕರೆದಿದ್ದಾರೆ. ೧೯೧೦ ರಿಂದ ೧೯೩೦ ರ ಅವಧಿಯಲ್ಲಿ ಅವರು ಮರಾಠಿ ನಾಟಕಗಳನ್ನು ಅನುವಾದಿಸಿದ್ದಾರೆ. ಶಿರಹಟ್ಟಿ ಕಂಪನಿಯಲ್ಲಿದ್ದಾಗಲೇ ಅವರು 'ಬಲಸಿಂಹತಾರಾ' 'ಇಂದಿರಾ' ನಾಟಕಗಳನ್ನು ಬರೆದರೆಂಬ ಉಲ್ಲೇಖಗಳಿವೆ. ಆದರೆ ಅವುಗಳ ಬಗೆಗೆ ಸ್ಪಷ್ಟತೆ ಇಲ್ಲ. ಅವರ ಹೆಸರಿನಿಂದ ಆ ಕೃತಿಗಳು ಪ್ರಕಟವಾಗಿರುವುದಿಲ್ಲ. ಹೀಗಾಗಿ ಅವು ಸ್ವತಂತ್ರ ನಾಟಕಗಳೋ, ಅನುವಾದಿತ ನಾಟಕಗಳೋ ಎಂದು ಖಚಿತವಾಗಿ ಹೇಳಲಾಗದು. ಆದರೆ 'ವಿದ್ಯಾಸಾಧನೆ' ಎಂಬ ನಾಟಕವನ್ನು ೧೯೧೭ ರ ಹೊತ್ತಿಗೆ ಅನುವಾದಸಿದರೆಂಬುದು ಸ್ಪಷ್ಟವಾಗಿದೆ. ಇದರ ಹಸ್ತಪ್ರತಿ ಕಳೆದುಹೋಗಿರುವುದರಿಂದ ಪುಸ್ತಕರೂಪದಲ್ಲಿ ಪ್ರಕಟವಾಗಿಲ್ಲ.

ವಾಮನರಾವ ಮಾಸ್ತರ ಸವಣೂರ ಅವರು ಮರಾಠಿಯಿಂದ ಕನ್ನಡಕ್ಕೆ ಅನುವಾದಿಸಿದ ನಾಟಕಗಳು.

೧. ವಿದ್ಯಾಸಾಧನೆ – ೧೯೧೭ (ವಿದ್ಯಾಹರಣ – ಕೆ. ಪಿ. ಖಾಡಿಲ್ಕರ.)

೨. ಸಾಧ್ವಿ ಸಖೂಬಾಯಿ – ೧೯೧೮ (ಸಂತ ಸಖೂಬಾಯಿ – ಹರಿನಾರಾಯಣ ಅಪ್ಟೆ)

೩. ಪಾರ್ವತೀ ಸತ್ವಪರೀಕ್ಷಾ – ೧೯೧೯ (ಮಹಾನಂದಾ – ನೀಲಕಂಠ ಆಗಟೆ)

೪. ಭಕ್ತ ಪುಂಡಲೀಕ – ೧೯೨೯ (ಭಕ್ತ ಪುಂಡಲೀಕ – ಬಾಬಾಜಿ ರಾಣೆ)

೫. ಸಂದೇಹ ಸಾಮ್ರಾಜ್ಯ – ೧೯೨೧ (ಸಂಶಯ ಕಲ್ಲೋಳ–ಗೋವಿಂದ ಬಲ್ಲಾಳ, ದೇವಳ)

೬. ಶ್ರೀ ಕೃಷ್ಣಾರ್ಜುನರ ಯುದ್ಧ – ೧೯೨೩ (ಶ್ರೀ ಕೃಷ್ಣಾರ್ಜುನ ಯುದ್ಧ–ನ. ಚಿಂ. ಕೇಳಕರ)

೭. ಎರಡನೇಯ ಬಾಜೀರಾವ ಪೇಶವೆ – ೧೯೨೪ (ದುಸರಾ ಬಾಜೀರಾವ ಪೇಶವೆ)

೮. ವೀರ ಅಭಿಮನ್ಯು – ೧೯೨೮ (ಸಿಂಹಚಾ ಭಾವಾ – ಶುಕ್ಲ)

ಸುಮಾರು ಹತ್ತು ವರುಷದ ಅವಧಿಯಲ್ಲಿ ಎಂಟು ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದರು. ಅವುಗಳನ್ನು ರಂಗದ ಮೇಲೆ ಪ್ರಯೋಗಿಸಿ ಯಶಸ್ವಿಯಾದರು. ಮರಾಠಿಯಿಂದ ಕನ್ನಡಕ್ಕೆ ಇತರ ನಾಟಕಕಾರರೂ ಅನುವಾದಿಸಿದ್ದಾರೆ. ಅವರಲ್ಲಿ ವಾಮನರಾಯರ ಅನುವಾದಗಳು ಶ್ರೇಷ್ಠ ದರ್ಜೆಯ ಅನುವಾದಗಳೆನಿಸಿವೆ. ವಾಮನರಾಯರಿಗೆ ಮರಾಠಿ ಭಾಷೆಯ ನಿಟಕ ಸಂಬಂಧವಿತ್ತು. ಮರಾಠಿ ಪರಿಸರದಲ್ಲಿಯೇ ಅವರ ವಿದ್ಯಾಭ್ಯಾಸವಾಗಿತ್ತು. ಮರಾಠೀ ನಟರ, ನಾಟಕಕಾರರ ಸ್ನೇಹವಿತ್ತು. ಮರಾಠಿ ಭಾಷೆಯಲ್ಲಿ ಅವರು ಮಾತನಾಡುತ್ತಿದ್ದರಲ್ಲದೆ ಬರೆಯುತ್ತಿದ್ದರು ಕೂಡ. ಮರಾಠಿ ಭಾಷೆಯ ಜೊತೆಗಿನ ಹೊಕ್ಕು ಬಳಕೆ ಸಂಬಂಧದಿಂದ ವಾಮನರಾಯರು ನಾಟಕಗಳನ್ನು ಮರಾಠಿಯಿಂದ ಕನ್ನಡಕ್ಕೆ ಸೊಗಸಾಗಿ ಅನುವಾದಿಸಿದ್ದಾರೆ. ಅನುವಾದಕ್ಕಾಗಿ ನಾಟಕಗಳನ್ನು ಆಯ್ಕೆ ಮಾಡಿಕೊಳ್ಳುವಲ್ಲಿಯೂ ರಾಯರ ಜಾಣ್ಮೆ ಎದ್ದು ಕಾಣುತ್ತದೆ. ತಮ್ಮ ಅನುವಾದಕಾರ್ಯಕ್ಕೆ ಮತ್ತು ತಮ್ಮ ಕಂಪನಿಯ ಪ್ರಯೋಗಕ್ಕೆ ಸೂಕ್ತವಾಗಬಲ್ಲ ನಾಟಕಗಳನ್ನು ಅವರು ಅನುವಾದಕ್ಕೆ ಎತ್ತಿಕೊಳ್ಳುತ್ತಿದ್ದರು.

ಮಾಸ್ತರರಿಗೆ ತಮ್ಮ ಸತ್ವ ಮತ್ತು ಮತಿಗಳೆರಡರ ಕಲ್ಪನೆಯೂ ಚೆನ್ನಾಗಿತ್ತು. ಕೆ. ಪಿ. ಖಾಡಿಲ್ಕರ ಅವರ 'ಮಾನಾಪಮಾನ' ಮರಾಠಿ ನಾಟಕವು ಕನ್ನಡ ರಂಗಭೂಮಿಯ ಮೇಲೆ ರಂಗಾಯಿಸೀತು ಎನಿಸಿದಾಗ, ತಮ್ಮ ಲೇಖನಿಗೆ ಖಾಡಿಲ್ಕರ ಕೆಚ್ಚಿನ ಶೈಲಿಯನ್ನು ಕನ್ನಡಿಸುವುದು ಸಾಧ್ಯವಾಗಲಿಕ್ಕಿಲ್ಲವೆಂಬ ಸಂದೇಹವೂ ಹುಟ್ಟಿ ನುರಿತ ಸಾಹಿತಿ ಕೆರೂರ ವಾಸುದೇವಾಚಾರ್ಯರು ಮಾತ್ರ ಅದನ್ನು ಮಾಡಬಲ್ಲರು ಎನಿಸಿತು. ಆಗ ಅವರಿಂದ ಅದನ್ನು ಅನುವಾದಿಸಲು ಕಾರಣರಾದರು. ಬಾಮಣಗಾಂವಕರ ಅವರ 'ಆತ್ಮತೇಜ' ವನ್ನು ಸ್ವತಃ ಮಾಸ್ತರರೇ ಕನ್ನಡಿಸಲು ತೊಡಗಿದರು. ಮಾಸ್ತರರ ಮಿತ್ರ ಅಡಬಡ್ಡಿ ಸುಬ್ಬಣಾಚಾರ್ಯರು ಖ್ಯಾತ ಮರಾಠೀ ನಾಟಕಕಾರ ಮಾಮಾ ವರೇರಕರ ಅವರ 'ಹಾಚ ಮೂಲಾಚಾ ಬಾಪ' ಎಂಬ ನಾಟಕವನ್ನು ಕನ್ನಡಿಸತೊಡಗಿದರು'.[೬] ಆದರೆ ಈ ನಾಟಕಗಳು ರಂಗದ ಮೇಲೆ ಯಶಸ್ವಿಯಾಗಲಿಲ್ಲ.

ವಾಮನರಾಯರು ಒಂದು ಕ್ಯಾಂಪಿನಿಂದ ಮತ್ತೊಂದು ಕ್ಯಾಂಪಿಗೆ ಹೋಗುವಾಗ ಹೊಸ ನಾಟಕವೊಂದರ ಹೊಳಹು ಹಾಕುತ್ತಲೇ ಇರುತ್ತಿದ್ದರು. ಹೊಸ ನಾಟಕದ ಜೊತೆಗೆ ಹೊಸ ಹಾಡುಗಳಿಗಾಗಿ ಧಾಟಿಗಳನ್ನು ಸಂಗ್ರಹಿಸುತ್ತಿದ್ದರು. ಮರಾಠೀ ರಂಗಗೀತೆಗಳನ್ನು ಸುಲಲಿತವಾಗಿ ಕನ್ನಡಕ್ಕೆ ಅನುವಾದಿಸುತ್ತಿದ್ದರು. ವಾಮನರಾಯರು ಭಾಷೆಯನ್ನು ಹಿತಮಿತವಾಗಿ ರಂಗಭೂಮಿಗೆ ಹೊಂದುವ ಹಾಗೆ ಬಳಸಿರುವರು. ಮೂಲ ಮರಾಠಿ ನಾಟಕವನ್ನು ಅವರು ಕನ್ನಡಕ್ಕೆ ಹೇಗೆ ಅನುವಾದಿಸಿರುವರು ಎಂಬುದನ್ನು ನೋಡಲು ಕೆಲವು ಮಾದರಿಗಳನ್ನು ಪರಿಶೀಲಿಸಬಹುದು.

**ವಾಮನರಾವ ಮಾಸ್ತರರ ಅನುವಾದ ಮಾದರಿ:**

ಉಹಾದರಣೆಗೆ ಗೋವಿಂದ ಬಲ್ಲಾಳ ದೇವಳರ 'ಸಂಶಯ ಕಲ್ಲೋಳ' ನಾಟಕವನ್ನು ರಾಯರು 'ಸಂದೇಹ ಸಾಮ್ರಾಜ್ಯ' ಹೆಸರಿನಿಂದ ಕನ್ನಡಕ್ಕೆ ಅನುವಾದಿಸಿರುವರು. ಪರಸ್ಪರ ಅವೆರಡನ್ನು ಹೋಲಿಸಿದರೆ ಅವರ ಅನುವಾದದ ಮಾದರಿ ಗೊತ್ತಾಗುವುದು.

'ಸಂಶಯ ಕಲ್ಲೋಳ' ನಾಟಕದೊಳಗಿನ ಕೆಲವು ಪಾತ್ರಗಳು ಹೆಸರುಗಳನ್ನು ಬದಲಿಸಿಕೊಂಡಿರುವುದನ್ನು ಬಿಟ್ಟರೆ ಉಳಿದಂತೆ ನಾಟಕದ ಅಂಕಗಳು, ಪ್ರವೇಶಗಳು, ಪಾತ್ರಧಾರಿಗಳ ಸಂಭಾಷಣೆ ಮತ್ತು ರಂಗಗೀತೆಗಳನ್ನು ಯಥಾರೀತಿ ಅನುವಾದಿಸಿದ್ದನ್ನು ನೋಡಬಹುದು.

'ಸಂಶಯ ಕಲ್ಲೋಳ' ನಾಟಕದ ಮೊದಲನೆಯ ಅಂಕ, ಮೊದಲನೆಯ ಪ್ರವೇಶದಲ್ಲಿ ರಂಗಗೀತೆಗಳು ೪, ಸಾಧುವಿನ ಮಾತುಗಳು ೩, ಫಾಲ್ಗುನರಾವನ ಮಾತುಗಳು ೧೫, ಭಾದವ್ಯಾನ ಮಾತುಗಳು ೧೨:

ಸಂದೇಹ ಸಾಮ್ರಾಜ್ಯ ನಾಟಕದ ಮೊದಲನೆ ಅಂಕದ ಮೊದಲನೆಯ ಪ್ರವೇಶದಲ್ಲಿ ಕೂಡಾ ರಂಗಗೀತೆಗಳು ೪, ಸಾಧುವಿನ ಮಾತುಗಳು ೩, ವಿಜಯನ ಮಾತುಗಳು ೧೫, ವೃಶ್ಚಿಕ ಮಾತುಗಳು ೧೨, ಇದೇ ರೀತಿ ಎರಡನೆಯ ಪ್ರವೇಶ, ಎರಡನೆಯ ಅಂಕ, ಐದನೆಯ ಅಂಕ, ಅವುಗಳಲ್ಲಿಯ ಪಾತ್ರಗಳು, ಪ್ರವೇಶಗಳು ರಂಗಗೀತೆಗಳು, ಮಾತುಗಳನ್ನು ತೌಲನಿಕವಾಗಿ ನೋಡಿದರೆ ವ್ಯತ್ಯಾಸವೇ ಕಾಣುವುದಿಲ್ಲ ಅನುವಾದಕರು ತಮ್ಮದು 'ಭಾವಾನುವಾದದ' ಎಂದು ಹೇಳಿಕೊಂಡರೂ ಮರಾಠಿ ನಾಟಕವು ಯಥಾರೀತಿ ಸಮಗ್ರವಾಗಿ ಕನ್ನಡಕ್ಕೆ ಅನುವಾದವಾಗಿರುವುದು ಗೊತ್ತಾಗುವುದು. ವಾಮನರಾಯರು ಇತರ ಮೂಲ ನಾಟಕಗಳಿಗೆ ಇದೇ ನಿಷ್ಠೆ ತೋರಿರಬಹುದು. ಕಾರಣ ಆಗ ಪ್ರೇಕ್ಷಕರು ಮರಾಠಿ ನಾಟಕ ಹಾಗೂ ಕನ್ನಡ ನಾಟಕ ಎರಡನ್ನೂ ನೋಡುತ್ತಿದ್ದರು ಪರಸ್ಪರ ಹೋಲಿಸಿ ಗುಣಾವಗುಣಗಳನ್ನು ಚರ್ಚಿಸುತ್ತಿದ್ದರು. ಮರಾಠೀ ನಟರು, ನಾಟಕಕಾರರು ಕನ್ನಡ ನಾಟಕಗಳನ್ನು ನೋಡುವುದು, ಕನ್ನಡ ನಟ, ನಾಟಕಕಾರರು ಮರಾಠಿ ನಾಟಕಗಳನ್ನು ನೋಡುವುದು ಸಾಮಾನ್ಯವಾಗಿತ್ತು. ಹೀಗಾಗಿ ಮೂಲಕ್ಕೆ ನಿಷ್ಠವಾದ ಕಲಾಕೃತಿಯ ಬಗ್ಗೆ ಪ್ರಶಂಸೆಗಳೂ ವ್ಯಕ್ತವಾಗುತ್ತಿದ್ದವು.

ಕನ್ನಡದ 'ಸಂದೇಹ ಸಾಮ್ರಾಜ್ಯ' ನಾಟಕವು ಮರಾಠಿಯ 'ಸಂಶಯ ಕಲ್ಲೋಳ'[೨] ನಾಟಕಕ್ಕೆ ಎಷ್ಟು ನಿಷ್ಠವಾಗಿದೆ ಎಂಬುದನ್ನು ಒಂದು ಸನ್ನಿವೇಶದ ಪರಿಶೀಲನೆಯಿಂದ ಮನಗಾಣಬಹುದು. ಮೊದಲ ಅಂಕಿನ ಮೊದಲ ಪ್ರವೇಶದ ಮೂಲ ಮತ್ತು ಅನುವಾದ ಈ ಕೆಳಗಿನಂತೆ ಇದೆ.

# ಮೂಲ ಮತ್ತು ಅನುವಾದ

ಸಂಶಯ ಕಲ್ಲೋಳ – ಸಂದೇಹ ಸಾಮ್ರಾಜ್ಯ

ಅಂಕ : ೧ ಪ್ರವೇಶ : ೧

**ಮೂಲ** ಸಾಧು: ಆಮಚ್ಯಾ ಕಾರ್ತಿಕನಾಥಾಚ್ಯಾ ದೀಪೋತ್ಸವವಾಕರಿತಾ ಬಾಯೀಸಾಹೇಬಾನಿ ಏಕ ಮಣ ತೇಲ ದೇಣ್ಯಾಚ ಕಬೂಲ ಕೇಲ.

**ಅನುವಾದ:** ಇಂದು ನಮ್ಮ ಕಾರ್ತಿಕನಾಥನ ದೀಪೋತ್ಸವಕ್ಕಾಗಿ ದೇವಿಯರು ಒಂದು ಮಣ ಎಣ್ಣೆಯನ್ನು ಕೊಡಲು ಒಪ್ಪಿರುತ್ತಾರೆ.

**ಮೂಲ** ಪಾಲ್ಗುನರಾವ: (ಪಡದ್ಯಾತ) ಜಾ ಯೇಥೂನ ತುಲಾ ಕಾಹೀ ಮಿಳಣಾರ ನಾಹೀ

**ಅನುವಾದ** ವಿಜಯ: (ಒಳಗಿನಿಂದ) ಹೋಗು ಹೋಗೋ, ನಿನಗೆ ಇಲ್ಲಿ ಏನೂ ದೊರೆಯಲಾರದು.

**ಮೂಲ** ಸಾಧು: ಅಹೋ ಅಸೇ ಉಗೀಚ ಅಂಗಾವರ ಕಾ ಯೇತಾ ಬಾಯೀ ಸಾಹೇಬಾನೀ ಕಬೂಲ ಕೇಲ ಮ್ಹಣೂನ ಮೀ ಮಾಗಾಯಾ ಅಲೋ.

**ಅನುವಾದ** ವಿಜಯ: (ಒಳಗಿನಿಂದ) ಹೋಗು ಹೋಗೋ ನಿನಗೆ ಇಲ್ಲಿ ಏನೋ ದೊರೆಯಲಾರದು.

**ಮೂಲ** ಪಾಲ್ಗುನರಾವ: (ಪಡಧ್ಯಾತ) ನುಸತೆ ಡೋಂಗೀ

**ಅನುವಾದ** ವಿಜಯ: ಎಲೋ ಡಾಂಭಿಕಾ ಸಾಧುವೇ ನೀನು?

**ಮೂಲ** ಸಾಧು : ತುಮ್ಹಾಲಾ ಧರ್ಮ ದಯಾ ಕರಾಯಚಾ ನಸೇಲ ತರ ಕರು ನಕಾ. ಉಗೀಚ ಸಂಶಯ ಕಾ ಘೇತಾ? ಹೀ ಸಂಶಯಾಚೀ ವೃತ್ತಿ ದಾನಧರ್ಮಾಚ್ಯಾ ಆಡ ಯೇವೂನ ಪುಣ್ಯಕ್ಷಯ ಕರತೇ, ಇಚಕಚ ನವ್ಹೆ ತರ ಸಂಸಾರಾತೀಲ ರೋಜಚ್ಯಾ ಕೃತ್ಯಾಂತಸಿ ಹೇ ಸಂಶಯಚ ಪಿಶಾಚ ಸುಖಾಂತ ಮಾತೀ ಕಾಲವತ. ನಕಾ ಕರು ದಾನ ಧರ್ಮ, ಮಿ ಜಾತೋ ಪಣ ತುಮಚೆಹಿ ಸ್ವತಃಚೇ ಕಲ್ಯಾಣಸಾಠೀ ಮಾಝಾ ಬೋಧ ಧ್ಯಾನಾತ ಠೇವಾ.

ಹೃದಯಿ ಧರಾ ಹಾ ಬೋಧ ಖರಾ ॥

**ಅನುವಾದ** ಸಾಧು: ಸ್ವಾಮೀ ! ಇದೋ ತಮಗೆ ಧರ್ಮ ಮಾಡುವುದು ಬೇಡವಾಗಿದ್ದರೆ ಬಿಡಿ. ಆದರೆ ಸುಮ್ಮನೆ ಸಂಶಯಕ್ಕೆ ಒಳಗಾಗಬೇಡಿ. ಈ ಸಂಶಯ ವೃತ್ತಿಯು ದಾನಧರ್ಮಕ್ಕೆ ಅಡ್ಡವಾಗಿ ಬಂದು ಪುಣ್ಯ ಕ್ಷಯ ಮಾಡುವುದು. ಇಷ್ಟೇ ಅಲ್ಲ ಒಮ್ಮೊಮ್ಮೆ ಸಂಸಾರದ ನಿತ್ಯ ವ್ಯವಹಾರದಲ್ಲಿಯೂ ಈ ಸಂಶಯ ಪಿಶಾಚಿಯು ಅಡ್ಡ ಬಂದು ಸುಖದಲ್ಲಿ ಮಣ್ಣು ಬೆರಿಸುವುದು. ಧರ್ಮ ಮಾಡಬೇಡಿರಿ ನಾನು

ಹೋಗುವೆನು, ಆದರೆ ನಿಮ್ಮ ಸ್ವಂತ ಕಲ್ಯಾಣಕ್ಕಾಗಿ ನಾನು ಹೇಳುವ ಈ ಉಪದೇಶವನ್ನು ಮಾತ್ರ ಮರೆಯಬೇಡಿ.

**ಮೂಲ** ಪಾಲ್ಗುನರಾವ: (ಬಾಹೇರ ಯೇವೂನ) ಅರೇ ಡ್ಯೋಂಗ್ಯಾ

**ಪದ:**

ಶಿಣವು ನಕೋ ಕಂಠ ಅಸಾ ॥

ತೃಷಿತ ನ ಮೀ ಬೋಧರಸಾ

ಢ್ಯೋಂಗ್ಯಾ ರಾಹಿ, ಉಭಾಹಿ, ಜರಸಾ ॥ ಧ್ಯ ॥

ಸಾಧು ನ ತುಮ್ಹಿ, ಭೋಂದು ಚೋರ ॥ ದೂರ್ತ ಕಪಟಿ ಶಠ

ಕಠೋರ ॥ ಪಾಡಿತಸಾ ವ್ಯಸನಿ ಥೋರ ॥ ದೇವಖುಳ್ಯಾ

ಸ್ತ್ರೀ ಪುರುಷಾ ॥ ೧ ॥

**ಅನುವಾದ:** ರಾಗ – ಶಂಕರಾ, ತಾಳ – ತ್ರಿವಟಿ

ಎಲೋ ಸಾಧುವೇ ಖಲನಿನ್ನ ಬೋಧ ॥ ನೆಲೆಯನಾ ।

ಬಲ್ಲೆ । ಬಲುಜವದಿ ಪೋಗೈ ॥ ೧ ॥ ದುರುಳ

ವಿದ್ಯೆತೋರಿ ಪುರುಷ ಸ್ತ್ರೀಯರನ್ನು ॥ ಸರಸನುಡಿಯ

ನಾಡಿ ॥ ಮರುಳುಗೊಳಿಪೆ ನೀಚಾ ॥ ೨ ॥

**ಮೂಲ:** ಚಲ ನಿಘ.......................

**ಅನುವಾದ:** ನಡೆ ಹೊರಡು.............

**ಮೂಲ:** ಭಾದವ್ಯಾ – ಮಾಗಲ್ಯಾ ದಾರಾನ ಕಾರ್ತಿಕನಾಥಾ ಚಾ ದೇವಳಾಕಡೆ ಗೇಲ್ಯಾ ಧನೀಸಾಹೇಬ.

ಅನುವಾದ: ವೃಶ್ಚಿಕ ಬುದ್ಧೀ ಅವರು ಹಿತ್ತಲಬಾಗಿಲಿನಿಂದ ಕಾರ್ತಿಕನಾಥನ ದೇವಾಲಯದ ಕಡೆ ಹೋದರು.

**ಮೂಲ:** ಪಾಲ್ಗುಣ – ಮಾಗಲ್ಯಾ ದಾರಾನ । ಭಾದವ್ಯಾ ಜಾ ಆಧಿ, ಆತಾಚಾ ಆತಾ ಗವಡ್ಯಾಲಾ ಬೋಲಾವುನ ಘೇವೂನ ಎ, ಆಣಿ ತೋ ದರವಾಜಾ ಆಧಿ ಬಂದ ಕರೂನ ಟಾಕ, ಆಜಪಾಸೂನ ನಿಯಮ; ದೋನ ದರವಾಜಾಚಾ ಘರಾತ ಮ್ಹಣೂನ ರಹಾವಯಾಚ ನಾಹಿ, ಯಾ ದರವಾಜಾವರ ಬಸಲೋ ತರ ತ್ಯಾ ದರವಾಜಾನ ಗೇಲಿ । ಅಶಾ ಸತರಾ ದಾರ ಆಣಿ ತೆಹತೀಸ ಖಿಡಕ್ಯಾಂಚಾ ಘರಾತ

ನವರ್ಯಾಲಾ ಶಂಭರ ಡೋಳೆ ಅಸಲೆ ತರಿ ಕಸೆ ಪುರಣಾರ ? ತೂ ಕಾಯ ಮ್ಹಟಲಸ ? ಕಾರ್ತಿಕನಾಥಾಚಾ ದೇವಳಾಂತಗೇಲಿ?

**ಅನುವಾದ:** ವಿಜಯ – (ಗಾಬರಿಯಿಂದ) ಏನು! ಹಿತ್ತಲಬಾಗಿಲಿನಿಂದ ಹೋದಳೇ! ವೃಶ್ಚಿಕಾ, ಈಗಿಂದೀಗಲೇ ಹೋಗಿ ಆ ಮರಗೆಲಸದವನನ್ನು ಕರೆದುಕೊಂಡು ಬಾ, ಮತ್ತು ಆ ಹಿತ್ತಲಬಾಗಿಲು ಮುಚ್ಚಿಸಿಬಿಡು. ಇನ್ನು ಮೇಲೆ ಇನ್ನು ಮೇಲೆ ಇದೇ ನಿಶ್ಚಯ! ಎರಡು ಬಾಗಿಲುಗಳುಳ್ಳ ಮನೆಯಲ್ಲಿ ನಾನು ಎಂದೂ ವಾಸಮಾಡುವುದಿಲ್ಲ! ನಾನು ಅವಳನ್ನು ಕಾಯುತ್ತ ಮುಂಚೇ ಬಾಗಿಲಿನಲ್ಲಿ ಕುಳಿತರೆ ಹಿತ್ತಲ ಬಾಗಿಲಿನಿಂದ ಹೋಗುತ್ತಾಳೆ. ಹಿತ್ತಲ ಬಾಗಿಲಲ್ಲಿ ಕುಳಿತರೆ ಮುಂಚೆಯ ಬಾಗಿಲಿನಿಂದ ಹೋಗುತ್ತಾಳೆ. ಹೀಗೆ ಹದಿನೇಳು ಬಾಗಿಲು, ಮುವತ್ತಮೂರು ಗವಾಕ್ಷಗಳುಳ್ಳ ಮನೆಯಲ್ಲಿ ಗಂಡನಿಗೆ ಎಷ್ಟು ಕಣ್ಣಿದ್ದರೂ ಏನು ಪ್ರಯೋಜನ! ಏನು ಹೇಳಿದೆ? ಕಾರ್ತಿಕನಾಥನ ದೇವಾಲಯಕ್ಕೆ ಹೋದಳೇ?

**ಮೂಲ:** ಭಾದವ್ಯಾ – ಹೋಯ್ ಧನಿ ಸಾಹೇಬ.

**ಅನುವಾದ:** ವೃಶ್ಚಿಕ– ಹೌದು ಧಣಿಯರೇ !

**ಮೂಲ:** ಪಾಲ್ಗುಣ – ಅಗದಿ ನಟೂನ ಸಜೂನ ಗೇಲಿ ಕಾರೆ ?

**ಅನುವಾದ:** ವಿಜಯ – ಚೆನ್ನಾಗಿ ಅಟಿಸಿಕೊಂಡು ಹೋದಳೆ ಹೇಗೆ?

**ಮೂಲ:** ಭಾದವ್ಯಾ – ಮ್ಹಣಜೆ ಕಶಾ ಧಣಿಸಾಹೇಬ? ರೋಜಚಾ – ಪ್ರಮಾಣೆ ಗೇಲ್ಯಾ

**ಅನುವಾದ:** ವೃಶ್ಚಿಕ – ಇದೇನು ಬುದ್ಧಿ! ಹೀಗೆ ಕೇಳುವಿರಿ? ದಿನಾಲು ಹೋಗುವಂತೆಯೇ ಹೋದರು!

**ಮೂಲ:** ಫಾಲ್ಗುಣ – ಅಂಗಾವರ – ಸಗಳೇ ದಾಗೀನೆಹೋತೆ ಕಾ ? ತೊಬುಟ್ಟಿಚಾಶಾಲೂ ನೇಸಲೀ ಹೋತಿಕಾ? ನಾಕಾತ ನವಿ ನತ ಹೋತೀ ಕಾ ? ಅಂಗಾವರ ತೋ ಬಾದಲಿ ಶೇಲಾ ಹೋತಾ?

**ಅನುವಾದ:** ವಿಜಯ – ಮೈಮೇಲೆ ಯಾವತ್ತೂ ಒಡವೆಗಳಿದ್ದವೋ? ಮತ್ತು ಆ ಬುಟಾದಾರೀ ಪಿತಾಂಬರ ಉಟ್ಟಿದ್ದಳೋ? ಮೈಮೇಲೆ ಆ ಕಲಾಬತ್ತಿನ ಶಾಲಿ ಹೊದ್ದಿದ್ದಳೋ?

**ಮೂಲ:** ಭಾದವ್ಯಾ ಹೊಯ್, ಹೋತಾ ಧಣಿಸಾಹೇಬ

**ಅನುವಾದ:** ವೃಶ್ಚಿಕ – (ಯೋಚಿಸುತ್ತಾ) ಹೌದು, ಹೌದು ಧಣಿಯರೇ ತಾವು ಹೇಳಿದಂತೆ ಎಲ್ಲವೂ ಇದ್ದವು.

**ಮೂಲ:** ಫಾಲ್ಗುಣ – ಝೂಲ ತರ ಆಣಕಿ ಕಾಯ ಪಾಯಿಜ?

**ಅನುವಾದ:** ವಿಜಯ – ಸರಿ ಮತ್ತೇ ಇದಕ್ಕೂ ಹೆಚ್ಚಿಗೆ ಏನುಬೇಕು

**ಮೂಲ:** ಭಾದವ್ಯಾ – ಯಾ ಅಪಲ್ಯಾ ಬೋಳಣ್ಯಾಚಾ ರೋಖ ನಿರಾಳಾ ದಿಸತೊಯ್ ಉರ್ಮಟ ಮ್ಹಣೂನ ದೋನ ತೊಂಡಾತ ಮಾರಾ, ಪಣ ಬಾಯಿಸಾಹೇಬಾವಿಷಯಿ ಇತಕಿ ಬಾರೀಕ ಚೌಕಾಶಿ ಕರಣ ಬರ ನವ್ಹೆ ಸರಕಾರ ಮೀ ಚಾಕರ ಮಾಣೂಸ, ಪಣ ಅಲಿಕಡೆ ಆಪಲಿ ಬಾಯಿಸಾಹೇಬಾವ ಇತರಾಜಿ ಝಾಲ್ಯಾ ಸಾರಖೀ ದಿಸತೆ.

**ಅನುವಾದ:** ವೃಶ್ಚಿಕ – ಧಣಿಯರೇ ನನಗೆ ಯಾಕೋ ತಾವು ಮಾತನಾಡುವ ರೀತಿಯೂ ಬೇರೆ ಕಾಣುವುದು. ಅತಿಪ್ರಸಂಗಿ ಎಂದು ತಾವೂ ಹೊಡೆದರೂ ಚಿಂತೆಯಿಲ್ಲ. ಆದರೆ ಅಮ್ಮನವರ ವಿಷಯವಾಗಿ ತಾವು ಹೀಗೆ ವಿಚಾರಿಸುವುದು ಸರಿಯಲ್ಲ ನಾನು ತಮ್ಮ ಸೇವಕನು. ಆದರೆ ಈಚೀಚಿಗೆ ತಮ್ಮದು ಅಮ್ಮನವರ ಮೇಲೆ ಮೊದಲಿನಂತೆ ಮಮತೆಯೇ ಕಾಣುವುದಿಲ್ಲ.

**ಮೂಲ:** ಫಾಲ್ಗುಣ – ಇತರಾಜಿ ಝಾಲಿ ಅಸತೀತ ತಿನೆ ಇತಕೆ ದೇವಾರೆ ಕಶಲಾ ಮಾಜವಿಲೇ ಅಸತೇ? ಮಿ ಚಾಯಲ್ಯಾ ಹೋವೂಣ, ಭ್ಯುಂಗ್ಯಾ ಪ್ರಮಾಣ ತಿಚ್ಯಾ ಭೋವತಿ ಪಿಂಗಾ ಘಾಲಾಯಲಾ ಲಾಗಲೋ. ಅಸತೀಚಾ ಲಕ್ಷಾತ ಏತಾಚ ತಿನ ಮರ್ಯಾದೆಚಾ ಬುರಖಾ ದಿಲಾನ ಝುಗಾರೂನ ಅಣಿ ಲಾಗಲಿ ನಾಚಾಯಿಲಾ ಹವೀತಶಿ! ಮೀಚ ಜರ ಪ್ರಥಮ ತಿಲಾ ಕರಡ್ಯಾ ನಜರೇನ ಉಟತಾ ಲಾತ ಆಣಿ ಬಸತಾ ಬುಕ್ಕೀಚಾ ಖುರಾಖ ಚಾಲೂಕೇಲಾ ಅಸತಾ, ತರ ಮಾಜಾ ಕರಣ್ಯಾ ಘೋಟಪ್ರಮಾಣ ತೀ ಕಕ್ಷಾತ ರಾಹಲಿ ಅಸತೀ. ಪಣ ಮ್ಹಣಲಾ ಶಿಕಲಿ ಸವರಲೇಲಿ ಆಹ್ಯೇ ಘರ ದಾರಾಂಚಿ ಆಹೇ. ತೆವ್ಹಾ ಭಲತೀಚ ಘೋಡ ಅಸಾಯಚಿ ನಾಹೀ. ಪಣ ಶಿಕಣ್ಯಾವರ ಕಾಯ ಆಹೇ? ವರ್ಚಾ ರಂಗಾನ ಆತಲರೂಪ ಥೋಡಚ ಪಾಲಟತ? ಖಾಪರಿ ತೀ ಖಾಪರೀಚ.

**ಅನುವಾದ:** ವಿಜಯ – ಮಮತೆಯಿಲ್ಲದಿದ್ದರೆ ಅವಳು ಹೀಗೆ ಮೋಸವನ್ನೇ ಮಾಡುತ್ತಿರಲಿಲ್ಲ. ನಾನು ಮಂಗನಾಗಿ ಗುಂಗೀ ಹುಳದಂತೆ ಅವಳ ಸುತ್ತಲೂ ಪ್ರದಕ್ಷಣೆ ಹಾಕುವುದಕ್ಕೆ ಪ್ರಾರಂಭಿಸಿದೆನೆಂದೇ ಅವಳು ಮರ್ಯಾದೆಯ ಮುಸುಕನ್ನು ಬಿಸಾಕಿ ಮನಬಂದಂತೆ ಕುಣಿಯಲಾರಂಭಿಸಿದಳು. ನನ್ನದೆ ತಪ್ಪು ಯಾಕೆಂದರೆ ಮೊದಲಿನಿಂದ ನಾನೇ ಅವಳ ಕೂಡ ವಕ್ರವಾಗಿದ್ದು ಮೇಲಿಂದ ಮೇಲೆ ಒದೆಗಳನ್ನು ಹಾಕುತ್ತ ಬಂದಿದ್ದರೆ ಸಾಕಿದ ನಾಯಿಯಂತೆ ನನ್ನ ಅಪ್ಪಣೆಯಲ್ಲಿಯೇ ಬಿದ್ದುಕೊಂಡಿರುತ್ತಿದ್ದಳು. ಆದರೆ ದೊಡ್ಡ ಮನೆತನದವಳು ಮತ್ತು ಚೆನ್ನಾಗಿ ವಿದ್ಯೆ ಕಲಿತವಳೆಂದು ನಾನು ಮಮತೆ ಮಾಡಿದರೆ ಅದು ತಲೆಗೇರಿ ಈ ರೀತಿಯಾಗಿ ಪರಿಣಮಿಸಿತು.

**ಮೂಲ:** ಭಾದವ್ಯಾ – ಗುನ್ಹಾ ಮಾಪ ಅಸಾವಾ ಧಣಿಸಾಹೇಬ ಬಾಯಿಸಾಹೇಬಾನಾ ನಾವ ಠೇವಾಯಲಾ ಏಕ ತಿಳಾಯವಡೀ ಜಾಗಾ ದಿಸತ ನಾಹಿ ಮಗ ಅಪಣ ಭಲತೀಚ ಖೋಡ, ಕೋಣತಿ ಮ್ಹಣತಾ ತೀ ಭಗವಾನಾಲಾ ಠಾವೂಕ.

**ಅನುವಾದ:** ವೃಶ್ಚಿಕ – ಧಣಿಯರೇ ಕ್ಷಮಿಸಿರಿ. ಅಮ್ಮನವರ ಮೇಲೆ ದೋಷ ಹೊರಿಸುವುದಕ್ಕೆ, ನನಗೆ ಒಂದು ಎಳ್ಳು ಕಾಳಷ್ಟು ಕೂಡ ಸ್ಥಳವೂ ಕಾಣಿಸುವುದಿಲ್ಲ. ಆದರೆ ತಮಗೇನು ಕಂಡುಬಂದಿರುವುದೋ ಅದು ಆ ಭಗವಂತನೇ ಬಲ್ಲ.

**ಮೂಲ:** ಪಾಲ್ಗುಣ – ತಿಲಾ ನಾವ ಠೇವಾಯಲಾ ತುಲಾ ತಿಲಾಯವಡಿ ಜಾಗಾ ದಿಸತ ನಾಹಿ. ಪಣ ಮಲಾ ಭೋಪಳ್ಯಾಯವಡಿ ದಿಸತೆ. ತ್ಯಾಲಾ ಕಾಯಕರ್ತೋಸ? ಹ್ಯಾ ಗೋಷ್ಟಿ ಕೋಣಾಪಾಸಿ ಬೋಲಾಯಚಾ ನಾಹಿತ. ಕಾರಣ ಗ್ರಹಚ್ಛಿದ್ರ ಆಹೇತ ಹಾ. ಪಣ ತೂ ಮಾಝಾ ಜುನಾ. ಇನಾಮಿ ವಿಶ್ವಾಸಾತಲಾ ನೋಕರ ಮ್ಹಣೂನ ತುಲಾ ಮಸಲತೀತ ಘೇತೊ ಹೇ ಬಗ ತೀನಮಾಝಾ ಕಾಳಜ್ಯಾಲಾ ಘರೇ ಪಾಡಲಿ ಆಹೇತ. ತೀನ ಮಾಝಾ ತೋಂಡಾಲಾ ಕಾಝುಳ ಫಾಸಾಯಚಾ ಘಾಟ ಘಾತಲಾ ಆಹೇ.

**ಅನುವಾದ:** ವಿಜಯ: ಏನೂ? ನಿನಗೆ ಅವಳ ಮೇಲೆ ದೋಷಹೊರಿಸಲಿಕ್ಕೆ ಒಂದು ಎಳ್ಳು ಕಾಳಷ್ಟೂ ಸ್ಥಳವೂ ಕಾಣಿಸುವುದಿಲ್ಲವೆ? ಹಾಗಾದರೆ ನನಗೆ ಒಂದು ಕುಂಬಳಕಾಯಿಯಷ್ಟು ಕಾಣಿಸುವುದಲ್ಲ ಅದಕ್ಕೇನನ್ನುವೆ? ಎಲೋ ಇವು ಗ್ರಹಛಿದ್ರಗಳು, ಇಂತಹ ವಿಷಯಗಳನ್ನು ಮತ್ತೊಬ್ಬರ ಮುಂದೆ ಮಾತಾಡಕೂಡದು ಆದರೆ ನೀನು ಪೂರ್ವದಿಂದಲೂ ಇದ್ದವನು ನಿಯತುಗಾರನು, ವಿಶ್ವಾಸಿಕನು ಎಂದು ನಿನಗೆ ನನ್ನ ಗುಟ್ಟನ್ನು ತಿಳಿಸುತ್ತೇನೆ. ಇದೋ ನೋಡು ಇಂದು ಅವಳು ನನ್ನ ಮುಖಕ್ಕೆ ಕಪ್ಪು ಹಚ್ಚುವ ವಿಚಾರ ನಡೆಸಿದ್ದಾಳೆ ಕಪ್ಪು! (ವೃಶ್ಚಿಕನು ಬೆಚ್ಚುವನು)

**ಮೂಲ:** ಭಾದವ್ಯಾ – ಛೇ ಛೇ ಛೇ ಛೇ । ಧನಿಸಾಹೇಬ ಆಪಲ್ಯಾ ಮನಾತ ಜೆವ್ಹಾ ಆಶಾ ವಿಪರೀತ ಕಲ್ಪನಾ ಯೇತಾತ ತೆವ್ಹಾ ತ್ಯಾಚಾವರ ಖಾಸ ದೇವಚಾ ಕೋಪ ಝಾಲಾ ಆಪಣ ಕಶಾವರೂನ ಮ್ಹಣತಾ ತೇ ಮ್ಹಣಾ, ಪಣ ಮೀ ತಕ ಫೂಲ ಉಚಲೂನ ಸಾಂಗತೋ ಕೀ ಆಪಲ್ಯಾ ಸಂಶಯ ಅಗದೀ ಪೋಕಳ–ಪೋಲ ಟರಫಲ ಆಹೇ ತ್ಯಾತ ಕಾಹೀ ಖರ ನಾಹಿ.

**ಅನುವಾದ:** ವೃಶ್ಚಿಕ – ಧಣಿಯರೇ ಅಮ್ಮನವರ ವಿಷಯವಾಗಿ ತಮ್ಮ ಮನಸ್ಸಿನಲ್ಲಿ ಇಂಥ ಕೆಟ್ಟ ಪಲ್ಪನೆಗಳು ಜನಿಸಿದ ಮೇಲೆ ನಿಶ್ಚಯವಾಗಿಯೂ ಅವರ ಮೇಲೆ ಭಗವಂತನ ಕೋಪವಾಯಿತೆಂತಲೇ ನಾನು ತಿಳಿಯುತ್ತೇನೆ. ತಾವು ಹೇಗೆ ಅವರ ಮೇಲೆ ತಪ್ಪು ಹೊರಿಸುವಿರೋ ಹೊರಿಸಿರಿ ಆದರೆ ನಾನು ಪ್ರಮಾಣ ಮಾಡಿ ಹೇಳುವುದೇನಂದರೆ ತಮ್ಮ ಸಂಶಯವು ಪೊಳ್ಳು, ಅರ್ಥವಿಲ್ಲದ್ದು. ನಾನಿದನ್ನು ಖಂಡಿತವಾಗಿ ಹೇಳುತ್ತೇನೆ.

**ಮೂಲ:** ಫಾಲ್ಗುಣ – ಪೋಕಳ ಸಂಶಯ ಮ್ಹಣತೋಸ? ಆರೆ? ಪರವಾ ಜೇಷ್ಠಾಂಚಾ ಲಗ್ನಾತ ವರಾತೀಚ್ಯಾ ದಿವಶೀತಿಚ್ಯಾ ಕಾಯ ಚೇಷ್ಟಾ ಚಾಲ್ಯಾ ಹೋತ್ಯಾ ತ್ಯಾ ಮೀ ಯಾ ಡೊಳ್ಯಾನಿ ಪಾಹಿಲ್ಯಾ

ಅಹೇತ ಕಾಹೀತರಿ ಕಾರಣ ಕಾಡೂಣ ಹಸಾಯಚ ಮಾಝ್ಯಾಕಡೆ ಬಘೂನ ನಾಕ ಮುರಡಾಯಚ ಮೋಠ್ಯಾ ನಕರ್ಯಾನಾ ಇಕಡೆ ತಿಕಡೆ ಮಿರದಾಯಚ, ಪುರುಷಾಂಚ್ಯಾ ಅಂಗಾಲಾ ಮುದ್ದಾಂ ಲಗಟೂನ ಜಾಯಚ. ಅರೆ ಅಶಾ ಎಕ ಕಾ ಹಜಾರಗೋಷ್ಟಿ । ಲಗ್ನ ಝಾಲ್ಯಾವರ ಕಾಹಿ ದಿವಸ ಅಶೀ ಚೋಕಬಾಗಲಿ ಕೀ ಪಿಂಜಾರವೇಲ್ಯಾ ಮೋರಪಂಖ್ಯಾಚಾ ಡೋಳ್ಯಾಪ್ರಮಾಣ ಪರಪುರುಷಾಂಚ್ಯಾ ಡೋಳ್ಯಾಲಾ ಡೋಳಾ ಟರಾಯಚಾ ನಾಹಿ । ಪಣ ಅಲೀಕಡೆ ತೋ ಸಭ್ಯಪಣ ತೀ ಮರ್ಯಾದಾ ತೀ ಲಜ್ಜಾ ಸಾರಿ ನಾಹೀಚ ಝಾಲಿ ಇತಕ ಕಶಾಲಾ ? ಅತಾ ತೀ ಮಲಾ ವಿಚಾರಲ್ಯಾಶಿವಾಯ ಕಾರ್ತಿಕನಾಥಾಲಾ ಕಾ ಗೇಲಿ ।

**ಅನುವಾದ:** ವಿಜಯ – ಏನು ನನ್ನದು ಪೊಳ್ಳು ಸಂಶಯವೇ? ಎಲವೋ ಮೊನ್ನೆ ಆ ಯಾದವರಾಯರ ಮನೆಯ ಮದುವೆಯ ಮೆರವಣಿಗೆಯ ದಿವಸ ಅವಳು ನಡೆಸಿದ ಚೇಷ್ಟೆಗಳನ್ನು ಇವೇ ಕಣ್ಣುಗಳಿಂದಲೇ ನೋಡಿದ್ದೇನೆ. (ಅಣಕಿಸುವಂತೆ) ಏನಾಸರೂ ಕಾರಣವನ್ನು ತೋರಿಸಿ ಮಧ್ಯದಲ್ಲಿ ನಗೋಣ, ನನ್ನ ಕಡೆಗೆ ನೋಡಿ ಮೂಗು ಮುರಿಯೋಣ, ಒಳ್ಳೆ ಬಡಿವಾರದಿಂದ ಈಚೆಯಿಂದ ಆಚೆಗೆ ಹೋಗೋಣ! ಬೇಕೇಂತಲೇ ಪುರುಷರ ಅಂಗಕ್ಕೆ ತಾಕಲಾಡೋಣ ಇಷ್ಟೇ ಏಕೆ? ಇನ್ನು ಸಹಸ್ರ ವಿಷಯಗಳು. ಲಗ್ನವಾದ ಮೊದಮೊದಲು ಕೆಲವು ದಿವಸ ಚೆನ್ನಾಗಿಯೇ ವರ್ತಿಸಿದಳು. ಆದರೆ ಈಚೀಚೆಗೆ ಆ ಮರ್ಯಾದೆ, ಆ ಸಭ್ಯತನ, ಆ ಲಜ್ಜೆಯೆಲ್ಲಿ ಹೋಯಿತೋ ಕಾಣೇ ಅದೂ ಹೋಗಲಿ ಈ ದಿವಸ ಅವಳು ನನ್ನನ್ನು ವಿಚಾರಿಸದೆ ಕಾರ್ತಿನಾಥನ ದರ್ಶನಕ್ಕೆ ಹೇಗೆ ಹೋದಳು?

**ಮೂಲ:** ಭಾದವ್ಯಾ – ಫಾರ ದಿವಸಾತ ಜಾಯಲಾ ಝಾಲಾ ನಾಹಿ ಮ್ಹಣೂನ ಗೇಲ್ಯಾ ಅಸತೀಲ ತ್ಯಾತ ಕಾಯ ಆಹೆ ?

**ಅನುವಾದ:** ವೃಶ್ಚಿಕ – ಬಹಳ ದಿವಸಗಳಿಂದ ಹೋಗಲು ಸಮಯ ದೊರೆಯಲಿಲ್ಲವೆಂದು ಈ ದಿವಸ ಹೋಗಿರಬಹುದು. ಅದರಲ್ಲಿ ವಿಶೇಷವೇನು?

**ಮೂಲ:** ಫಾಲ್ಗುಣ – ತ್ಯಾತ ಕಾಯ ? ತೂ ಪಾಗಲ ಅಹೀಸ ? ತುಲಾ ಕಳತ ನಾಹಿ? ದೇವಾಚ ದರ್ಶನ ಘ್ಯಾಯಲಾ ನವ್ಹೆ, ತರ ಯಾ ವೇಳೀ ದೇವಳಾತ ಧಿರಟ್ಯಾ ಫಾಲಣಾರ್ಯಾ ಸೋಫಾನಾ ಅಪಲೇ ದರ್ಶನ ಘ್ಯಾಯಲಾ ಗೇಲಿ ಆಹೆ. ದೇವಘರಾತ ನವ್ಯತೆ ಕಾ? ಪಣ ಅಶಾ ಬಾಯಕಾನಾ ನಟ್ಟಾಪಟ್ಟಾ ಕರೂನ ದೇವಳಾತಚ ಗೇಲಪಾಯಿಜೆ ಸಾರಿ ಸಫಂಗಿ ಮಂಡಳಿ ಯಾ ವೇಳೇಲಾ ತಿಥೆ ಜಮಾಯಿಚಿ.

**ಅನುವಾದ:** ವಿಜಯ : ವಿಶೇಷವೇನು? ಎಲೋ ನೀನು ಬೆಪ್ಪನೋ ಬೆಪ್ಪ ನಿನಗೆ ಏನೂ ತಿಳಿಯುವುದಿಲ್ಲ, ಹೊಳೆಯುವುದಿಲ್ಲ. ಅವಳು ಈಗ ದೇವರ ದರ್ಶನಕ್ಕೆ ಹೋಗಿಲ್ಲ. ಈ ವೇಳೆ ದೇವಾಲಯದಲ್ಲಿ ಸುಳಿದಾಡುವಂತ ಜಾರ ಪುರುಷರಿಗೆ ತನ್ನ ಮುಖವನ್ನು ತೋರಿಸುವುದಕ್ಕೆ ಹೋಗಿದ್ದಾಳೆ. ಇಂತ

ಹೆಂಗಸರು ನಟಿಸಿಕೊಂಡು ಹೀಗೆ ವಯ್ಯಾರ ಮಾಡುತ್ತ ಹೋಗುವ ಸ್ಥಳವು ಅದಲ್ಲದೆ ಮತ್ತಾವುದು? ಏಕೆಂದರೆ ಜಾರಪುರುಷರ ಸಮೂದಾಯವು ಈ ವೇಳೆಯಲ್ಲಿ ಸೇರುವುದು ಅಲ್ಲಿಯೇ.

**ಮೂಲ:** ಭಾದವ್ಯಾ: ಅನ್ಯಾಯ! ಅನ್ಯಾಯ! ಅನ್ಯಾಯ! ಧಣಿಸಾಹೇಬ ಅನ್ಯಾಯ ಕರತಾ. ಅಹಾ ಹೀಚ ಬಾಯಿಸಾಹೇಬಾಂಚಿ ನಿಂದಾ ದುಸರ್‍ಯಾನಿ ಕುಣಿ ಕೇಲಿ ಅಸತೀ ತರ ಖೂನ ಪಾಡಲಾ ಅಸತಾ ಇಥೆ ಖೂನ.

**ಅನುವಾದ:** ವೃಶ್ಚಿಕ: ಅನ್ಯಾಯ! ಅನ್ಯಾಯವು! ಅನ್ಯಾಯವು! ಧಣಿಯರೇ ಖಂಡಿತವಾಗಿಯೂ ಅನ್ಯಾಯವು. ಅಮ್ಮನವರ ಇದೇ ನಿಂದೆಯನ್ನು ಮತ್ತೊಬ್ಬರು ಮಾಡಿದ್ದರೆ ಈ ಸ್ಥಳದಲ್ಲಿ ಖೂನಿಯಾಗುತ್ತಿತ್ತು ಖೂನಿ.

**ಮೂಲ:** ಪಾಲ್ಗುಣ: ಅರೆ ಚೋರಾ, ಮಿಲಾಫ್ಯಾ, ತ್ಯಾ ಲಬಾಡ ಟಕಡ್ಯಾ ಬಾಯಿಕೋಚಿ ತರಫದಾರಿ ಕರತೋಸಕಾಯ? ಮಾಝೂ ಪಗಾರ ಆಣಿ ತಿಚೀ ನೌಕರಿ.

**ಅನುವಾದ:** ವಿಜಯ: ಎಲಾ ಕಳ್ಳಾ ಒಳಸಂಚುಕಾರ. ಮೋಸಗಾರತಿಯಾದ ನನ್ನ ಹೆಂಡತಿಯನ್ನು ವರ್ಣಿಸುವೆಯಾ ನನ್ನ ಸಂಬಳ ತಿಂದು ಅವಳ ಚಾಕರಿ ಮಾಡುವೆಯಾ?

**ಮೂಲ:** ಭಾದವ್ಯಾ: ಸರ್ಕಾರ ಹಾ ಮಾಝೂ ರಾಮರಾಮ ನೌಕರಿಲಾ ಘ್ಯಾ ಮಲಾ ಹುಕುಮ. ಕುಠೇಹಿ ರಾಬೂನ ಪೋಠ ಭರೀನ. ಪಣ ಬಾಯಿಸಾಹೇಬಾ ಸಾರಖ್ಯಾ ಶುದ್ಧ, ನಿರ್ಮಲ ಬಾಯಿಕೋಲಾ ಲಬಾಡ ಮ್ಹಣ್ಯಾಂಚ್ಯಾ ಧನ್ಯಾಚಿ ಭಾಕರಿ ನಾಹಿ ಖಾಯಚಾ. ಕರಾ ಮಾಝೂ ಪಗಾರ ಚುಕ್ತಾ. ಹಾಂ ಮಿ ಚಾಲಲೋ (ಪಥಾರಿ, ತಾಂಬ್ಯಾ, ಕಾಂಬಳೆ, ಧೋತರ ಕರೂ ಲಗತೋ)

**ಅನುವಾದ:** ವೃಶ್ಚಿಕ: ಮಹಾಸ್ವಾಮಿ, ತಮ್ಮ ಚಾಕರಿಗೆ ಇಂದೇ ನಮಸ್ಕಾರ. ಅಪ್ಪಣೆಯಾಗಲಿ ಬಡವನು ಎಲ್ಲಿಯಾದರು ದುಡಿದು ಹೊಟ್ಟೆ ತುಂಬಿಕೊಳ್ಳುವನು ಆದರೆ ಅಮ್ಮನವರಂತಹ ನಿರ್ಮಲವಾದ ಮತ್ತು ಪವಿತ್ರವಾದ ಹೆಂಡತಿಯನ್ನು ಮೋಸಗಾರ್ತಿ ಎಂದು ಅನ್ನುವ ಯಜಮಾನರ ಅನ್ನವು ನನಗೆ ಬೇಡವೇ ಬೇಡ. ನನ್ನ ಸಂಬಳ ತೀರಿಸಿರಿ ನಾನು ಹೋಗುವೆನು. (ತನ್ನ ಸಾಮಾನುಗಳನ್ನು ಸಾವರಿಸಿಕೊಳ್ಳುವನು)

**ಮೂಲ:** ಪಾಲ್ಗುಣ: (ಅಪಲ್ಯಾ ಮಣಾಸಿ)ಯಾ ಗುಲಮಾಲಾ ಇತಕ್ಯಾತ ಬುಜಾವೂನ ಉಪಯೋಗ ನಾಹೀ ಜರಾ ಚುಚಕಾರೂಣ ಗೇತಲಾ ಪಾಯಿಜೆ ಕಾರಣ ಖೋಟಿ ಅಸಲ್ಯಾಶಿವಾಯ ಹಾ ನೌಕರಿ ಚೋಡಾಯಿಲಾ ತಯಾರ ವ್ಹ್ಯಾಯಚಾ ನಾಹಿ? ಅಣೀ ಮೀ ತರೀ ಪ್ರತ್ಯಕ್ಷ ಕಾಯ ಪಾಹಿಲೆ ಆಹೆ। ಅಸೂನ ಹೇ ಮಾಝೂ ಕದಾಚಿತ್ ತರ್ಕಟಹಿ ಅಸೆಲ (ಉಘಡ) ತಶೀ ಮೀ ತಿಲಾ ಅಜೂನ ಲಬಾಡ ಠರವೀತ ನಾಹೀ ರೆ। ಪಣ ಹೀ ಲಕ್ಷಣ ವಾಯಿಟ ಕೀ ನಾಹಿತ? ಬಾಯಿಕಾಂಚಿ ಜಾತ ಲಗಾಮ ಢೀಲಾ ಸೋಡೂನ ಉಪಯೋಗಿ ನಾಹಿ. ಇತಕಚ ಮ್ಹಣಣ ಮಾಝು. ಠೇವ ತೇ ಸಗಳ ಜಿಥಲ್ಯಾ ತಿಥ.

**ಅನುವಾದ:** ವಿಜಯ: (ಸ್ವಗತ) ಇಷ್ಟರಲ್ಲಿಯೇ ಇವನನ್ನು ಹೀಗೆ ಭಯಪಡಿಸುವುದು ಸರಿಯಲ್ಲ ಇವನನ್ನು ಮೊದಲು ಸಮಾಧಾನ ಪಡಿಸೋಣ. ಸತ್ಯವೋ ಮಿತ್ಯವೋ ಎಂಬುದನ್ನು ಚೆನ್ನಾಗಿ ತಿಳಿಯದ ವಿನಹ ಇವನು ಚಾಕರಿಯನ್ನು ಬಿಟ್ಟು ಹೋಗುವುದಕ್ಕೆ ಒಪ್ಪತಕ್ಕವನಲ್ಲ ಮತ್ತು ಇದುವರೆಗೂ ನಾನದರು ಅವಳ ದುಷ್ಟವರ್ತನೆಯನ್ನು ಎಂದು ಕಣ್ಣಿನಿಂದ ಪ್ರತ್ಯಕ್ಷ ನೋಡಿದವನೇ ಅಲ್ಲ ಕದಾಚಿತ ನಾನು ಮಾಡುವುದೆಲ್ಲವೂ ತರ್ಕವಿದ್ದರೂ ಇರಬಹುದು (ಪ್ರಕಾಶ) ಎಲವೋ ಇದುವರೆಗೂ ನಾನಾದರೂ ಅವಳನ್ನು ಪಕ್ಕಾ ಮೋಸಗಾರಳೆಂದು ಎಲ್ಲಿ ಅಂದಿದ್ದೇನೆ? ಅನ್ನುವುದು ಇಲ್ಲ ಆದರೆ ಹೀಗೆ ಮಾಡುವುದು ಸ್ತ್ರೀಯರಿಗೆ ಸರಿಯಾದ್ದಲ್ಲ. ಸ್ತ್ರೀ ಜಾತಿಯನ್ನು ಕಟ್ಟಿರುವ, ಕಡಿವಾಣವನ್ನು ಸಡಿಲವಾಗಿ ಬಿಟ್ಟರೆ ಏನು ಉಪಯೋಗವಿಲ್ಲ ಇಷ್ಟೇ ನನ್ನ ಅಭಿಪ್ರಾಯ ತಿಳಿಯತೇ? ಇಡು ಇಡು ನಿನ್ನ ಸಾಮಾನುಗಳನ್ನು ಕೆಳಗೆ ಇಡು.

**ಮೂಲ:** ಭಾದವ್ಯಾ – (ಠೇವಿತ) ಹ್ಞ , ಹೇ ಅಪಲ ಮ್ಹಣಣ ರಾಸ್ತ ದಿಸತ. ಧನಿಸಾಹೇಬಾ, ಮಾಝೀ ಅಕ್ಕಲ ಕೀಥಿ? ಪಣ ಕಾಹೀ ಪಾಹಿಲ್ಯಾವಾಚೂನ ಅಸಾ ಸಂಶಯ ಧರಣ ಅಪಲ್ಯಾಸಾರಖ್ಯಾ ಥೋರಾನಾ ಜರಾ................

**ಅನುವಾದ:** ವೃಶ್ಚಿಕ: ಧಣಿಯರೇ ತನ್ನ ಅಭಿಪ್ರಾಯವು ಸರಿಯಾದುದಲ್ಲ ನಾನು ಮಂದಮತಿಯೂ ನಾನು ತಮಗೆ ಹೇಳಬೇಕೆ? ಆದರೆ ಪ್ರತ್ಯಕ್ಷವಾಗಿ ಕಂಡು ಹಿಡಿಯದೇ ಹೀಗೆ ಸಂಶಯ ತಕ್ಕೊಳ್ಳುವುದು ತಮ್ಮಂಥ ದೊಡ್ಡ ಮನುಷ್ಯರಿಗೆ ಗೌರವವಲ್ಲ.

**ಮೂಲ:** ಫಾಲ್ಗುಣ – (ಲಟಿಕೆ ಹಸತ) ಹಾ ಬಾವಕಟಾ ! ಹೇ ಸಗಳ ಖರ. ಸಮಜಲಾಸ ವಾಟತ? ಇತಕಾ ವೇಳ ಮೀ ತುರುಝ ಮನ ಬಗಣ್ಯಾಸಾಠಿ ತಸ ಬೋಲತ ಹೋತೋ ಬರೇ ತೂ ಜಾ ಅತಾ. ಅಣಖೀ ಕುತ್ರ್ಯಾಲಾ ಫಿರವೂನ ಆಣ. ಜಾವೂನ ಆಲಾಸ ಮ್ಹಣಜೆ ತುಲಾ ದುಸರ ಕಾಹೀ ಜರೂರಿಚೆ ಕಾಮ ಸಾಂಗಾಯಚ ಆಹೆ.

**ಅನುವಾದ:** ವಿಜಯ: ವೃಶ್ಚಿಕಾ ನಾನು ಮಾತನಾಡುವುದನ್ನು ನೀನು ನಿಜವೆಂದು ತಿಳಿದೆಯಾ? ಇದುವರೆಗೂ ನಾನು ನಿನ್ನ ಮನಸ್ಸು ಪರೀಕ್ಷಿಸುವುದಕ್ಕೋಸ್ಕರ ಹಾಗೆ ಮಾತಾನಾಡಿದೇನು. ಒಳ್ಳೇಯದು ನೀನಿನ್ನು ನಾಯಿಯನ್ನು ಅಡ್ಡಾಡಿಸಿಕೊಂಡು ಬರಲು ಹೋಗು. ನೀನು ಹೋಗಿ ಬಂದ ನಂತರ ನಿನಗೆ ಮಹತ್ವದ ಕೆಲಸವನ್ನು ಹೇಳತಕ್ಕದ್ದಿರುವುದು.

**ಮೂಲ:** ಭಾದವ್ಯಾ – ಬರ ತರ ಕುತ್ರ್ಯಾಲಾ ಫಿರವೂನ ಹಾ ಆಲೋಚ ಬಘಾ ಧನಿಸಾಹೇಬ (ಜಾತೋ)

ಅನುವಾದ:ವೃಶ್ಚಿಕ: ಸರಿ ನಾಯಿಯನ್ನು ಅಡ್ಡಾಡಿಸಿಕೊಂಡು ಈಗಲೇ ಬರುವೆನು. (ಹೋಗುವನು)

**ಮೂಲ:** ಪಾಲ್ಗುಣ: (ಗೇಲಾ ಅಸೇ ಪಾವೂನ) ಖಾತ್ರಿಸಿ ಸಾಂಗತೋ. ಮಾಝಾ ಬಾಯಕೋನ ಯಾಲಾ ಪೈಸಾ ದಾಖವಿಲಾ. ಆಣಿ ತ್ಯಾಲಾ ಹಾ ಲಾಲಚಾವಲಾ, ಬರ ಆಹೆ ಮ್ಹಣಾವ। ಕುಠ ಗೇಲಿ ಮ್ಹಣಾಲಾ ಹಾ? ಕಾರ್ತಿಕನಾಥಾಚ್ಯಾ ದೇವಳಾಕಡೆ ಕಾಯ? ಆಸಾಚ ಜಾತೋ ಆಣಿ ಅಸೇಲ ತಶೀ ಪಕಡೂನ ಆಣತೋ. ತಿಲಾ ಖಾಂಬಾಶಿ ಜಡವೂನ ಟಾಕಲ ನಾಹಿತರ ನಾವ ದುಸರ । ಪಣ ಫಾಲ್ಗುಣರಾವ. ಆಶಾ ಅವಧಸೇಶಿ ಲಗ್ನಚ ಕೇಲ ನಸಲಕರ?

**ಅನುವಾದ:** ವಿಜಯ: ನಿಶ್ಚಯವಾಗಿ ನನ್ನ ಹೆಂಡತಿಯು ಇವನಿಗೆ ದ್ರವ್ಯದ ಆಸೆಯನ್ನೇ ತೋರಿಸಿರಬಹುದು. ಅಂತೆಯೇ ಇವನು ಅವಳ ಪಕ್ಷವನ್ನು ವಹಿಸಿ ಮಾತಾಡುವನು. ಇರಲಿ ಸಮಯ ಬಂದಾಗ ತೋರಿಸೋಣ ಕೈ. ಸರಿ ಈಗ ಅವಳು ಎಲ್ಲಿ ಹೋದಳು? ಕಾರ್ತಿಕನಾಥನ ದೇವಾಲಯಕ್ಕೆ ಹೋದಳೇ? ಈಗಲೇ ಅವಳನ್ನು ಮನೆಗೆ ಸೆಳೆದು ತಂದು ಕಂಬಕ್ಕೆ ಕಟ್ಟಿ ಹಾಕುವೆನು. ಆದರೆ ನಾನೇ ಮೊದಲು ಇಂತ ಸ್ತ್ರೀಯಳ ಕೂಡ ಮದುವೆಯನ್ನೇ ಬೆಳಿಸದೇ ಇದ್ದಿದ್ದರೆ ಲೇಸಾಗುತ್ತಿತ್ತು.

**ಪದ**

(ಶಂಕಾ ಘೋಸಿ ಘೋರ)

ಖೋಟಿ ಬುದ್ಧಿ ಕೆವಿ ಝಾಲಿ ॥ ಭಟೀ ಲಗ್ನಫಟಿ ಖೋಟೀ ಧರೀಲಿ ॥

ವರಿಲೀ ಸ್ತ್ರೀ ತೀ ಖೋಟಿ ನಿಘಾಲಿ ॥ ಧೃಂ ॥

ಥೋರ ಕುಳಾವರಿ ಭಾಳುನಿ ಗೇಲೋ ॥ ಬಾಹ್ಯ

ಸುಶಿಕ್ಷಣ ರೂಪಾ ದಿಸಲೋ ॥ ಪಾಯ ಪೂಜುನಿ ಧರಿ

ಕೃತ್ಯಾ ಆಣಿಲಿ ॥ ೩ ॥

**ಅನುವಾದ:** ರಾಗ – ಹವಿಣರ, ತಾಳ– ತ್ರಿವಟಿ

ಇಂತಹ ದುರುಳ ಸತಿಯ ವರಸೀ । ಅಂತರ್ಯದಿ ಬಹು ನೊಂದೆನಕಟಾ ॥ ಪ ॥

ಬಾಹ್ಯ ಶುಶಿಕ್ಷಣ ರೂಪವನೋಡಿ ಮೋಹಿಸಿದೆ ಬರಿ ।

ಶ್ರೇಷ್ಠವಂಶಕೇ । ತಾಪ ಪೊಂದುದೆ ॥ ೧ ॥

ಮೂಲ ಮತ್ತು ಅನುವಾದ ಎರಡನ್ನೂ ತೌಲನಿಕವಾಗಿ ನೋಡುವುದರ ಉದ್ದೇಶ ಇಷ್ಟೆ. ಆ ಕಾಲದ ಕಂಪನಿಗಳು ಪ್ರೇಕ್ಷಕರ ಒತ್ತಾಸೆಗೆ ಕಟ್ಟು ಬಿದ್ದು, ಅವರನ್ನು ಆಕರ್ಷಿಸುವದಕ್ಕಾಗಿ ಅವಸರದಲ್ಲಿ ಅನುವಾದ ಮಾಡುತ್ತಿದ್ದರು. ಅವರ ಮೂಲಕ್ಕೆ ನಿಷ್ಠರಾಗುತ್ತಿರಲಿಲ್ಲ. ಅದು ಅವರಿಗೆ ಅವಶ್ಯವೂ ಇರಲಿಲ್ಲ. ಕಾಪಿರೈಟ ಪದ್ಧತಿಯೂ ಆಗ ಇರಲಿಲ್ಲ ಹೀಗಾಗಿ ಅನುವಾದ ಕ್ರಿಯೆಯು ಸಾಕಷ್ಟು ಸ್ವಾತಂತ್ರ್ಯ ವಹಿಸಿತ್ತು.

ಆಕಾಲದ ಅನುವಾಗಳು ಎಂದರೆ ರೂಪಾಂತರಗಳಾಗಿರುತ್ತಿದ್ದವು. ಹೆಸರಿಗೊಂದು ನಾಟಕ ಇಟ್ಟುಕೊಂಡು, ಕಥೆಯ ಹಂದರ ಮಾತ್ರ ಸ್ವೀಕರಿಸಿ, ಉಳಿದಂತೆ ಸ್ವತಂತ್ರವಾಗಿ ಅನುವಾದ ನಡೆಯುತ್ತಿತ್ತು. ಈ ರೀತಿಯ ಅನುವಾದ ವಾಮನರಾವ್ ಮಾಸ್ತರ ಅವರ 'ನಿಷ್ಠ' ಅನುವಾದಗಳಿಗೆ ನ್ಯಾಯ ಸಿಗುವುದೇ ಇಲ್ಲ.

ಇಂಗ್ಲೀಷಿನಿಂದ ಕನ್ನಡಕ್ಕೆ ಬರುವ ಕೃತಿಗಳಿಗೂ ನೆರೆ ಭಾಷೆಯಿಂದ ಕನ್ನಡಕ್ಕೆ ಬರುವ ಕೃತಿಗಳಿಗೂ ವ್ಯತ್ಯಾಸ ಇರುವುದು ಸಹಜ. ಇಂಗ್ಲೀಷ ಬೇರೆ ಪ್ರದೇಶ, ಬೇರೆ ಪರಿಸರ, ಬೇರೆ ಸಂಸ್ಕೃತಿಯ ಭಾಷೆ ಅದನ್ನು ಕನ್ನಡಕ್ಕೆ ತರುವಾಗ ಲೇಫಿಯರ್ ಹೇಳುವ 'ವಕ್ರೀಕರಣ' ಪ್ರಕ್ರಿಯೆಗೆ ಒಳಗಾಗುವುದು ಸಹಜ ಸಾಂಸ್ಕೃತಿಕ ನಿಯಂತ್ರಣದಿಂದಾಗಿ ಅನುವಾದ ಕೃತಿ ಮೂಲದಿಂದ ದೂರ ಸರಿಯುವುದು ಅನಿವಾರ್ಯ. ಆದರೆ ಪ್ರಾದೇಶಿಕ ಸಾಮ್ಯತೆ, ಸಂಸ್ಕೃತಿ ಸಾಮ್ಯತೆ ಇರುವ ನೆರೆಹೊರೆ ಭಾಷೆಗಳಲ್ಲಿ ಅನುವಾದದಲ್ಲಿ 'ವಕ್ರೀಕರಣ' ಪ್ರಕ್ರಿಯೆ ಕಡಿಮೆ. ಪ್ರದೇಶ, ಪರಿಸರ ಜೀವನಶೈಲಿ ಹೆಚ್ಚು ಕಡಿಮೆ ಒಂದೇ ಭಾಷೆ ಮಾತ್ರ ಭಿನ್ನವಾಗಿದ್ದರೆ ಅವುಗಳ ನಡುವಿನ ಅನುವಾದ ಕ್ರಿಯೆ ಹೆಚ್ಚು 'ದೂರ'ನ್ನು ನಿರ್ಮಿಸಲಾರದು. ಕನ್ನಡ ಮರಾಠಿ ನೆರೆಹೊರೆಯ ಭಾಷೆಗಳು ಎರಡರ ಭೂಗೋಳ, ಪರಿಸರ, ಸಂಸ್ಕೃತಿಯಲ್ಲಿ ಸಮಾನ ಅಂಶಗಳು ಹೆಚ್ಚು. ಭಿನ್ನತೆಗಳಿದ್ದರೂ ಕಡಿಮೆ. ಹೀಗಾಗಿ ವಾಮನರಾವ ಮಾಸ್ತರರಿಂದ ನಡೆದ ಅನುವಾದ ಕ್ರಿಯೆ ಮೂಲಕ್ಕೆ ಹೆಚ್ಚು ನಿಷ್ಠವಾಗಿರುವಂತಹದ್ದು. ಅನುವಾದಕ್ಕೆ ಆಯ್ದುಕೊಂಡಿರುವ ನಾಟಕಗಳು, ಅನುವಾದದ ಉದ್ದೇಶ ಮೂಲಕ್ಕಿಂತ ಭಿನ್ನವಾದುದಲ್ಲ. ಅದರಲ್ಲಿಯೂ ವಾಮನರಾಯರು ಸಂವೇದನಾಶೀಲ ಕಲಾವಿದರು, ಎರಡೂ ಭಾಷೆಗಳಲ್ಲಿ ಪರಿಣಿತರು ಹೀಗಾಗಿ ಅವರ ಅನುವಾದವು ಮೂಲವನ್ನೇ ಅನುಸರಿಸಿದೆ. ನೆರೆಹೊರೆ ಭಾಷೆಗಳ ಅನುವಾದಕ್ರಿಯೆ ಇದೇ ಮಾದರಿಯದಾಗಿರುವುದೆಂದು ನಿರ್ಧಿಷ್ಟವಾಗಿ ಹೇಳಲಾಗದು. ಅನುವಾದಕನ ಭಾಷಾಜ್ಞಾನ, ಗ್ರಹಿಕೆಯ ಮಟ್ಟ ದುರ್ಬಲವಾಗಿದ್ದರೆ. ಅಲ್ಲಿಯೂ 'ದೂರ'ಗಳು ಮೂಲ ಮತ್ತು ಅನುವಾದದ ಮಧ್ಯೆ ನಿರ್ಮಾಣವಾಗುತ್ತದೆ.

ವಾಮನರಾಯರ ಅನುವಾದ ಸೊಗಸಾದುದು. ಅವರ ಅನುವಾದ ಕೃತಿಗಳು ಕನ್ನಡದ ಸ್ವತಂತ್ರ ಕೃತಿಗಳೇ ಎಂಬ ಭಾವನೆ ಹುಟ್ಟುತ್ತದೆ. ಅವರ ನಾಟಕಗಳನ್ನು ಓದಿ ಇಲ್ಲವೆ ರಂಗದ ಮೇಲೆ ನೋಡಿದವರು ಅವರ ಸಾಹಿತ್ಯವನ್ನು ಅನುಭವಿಸಿ ಆನಂದಿಸಿದ್ದಾರೆ. ಈಗಾಗಲೇ ಒಂದು ಸನ್ನಿವೇಶದ ಅನುವಾದ ಶೈಲಿಯನ್ನಯ ಮಾದರಿಯಾಗಿ ನೋಡಲಾಗಿದೆ. ರಂಗಗೀತೆಯ ಒಂದು ಸುಂದರ ಅನುವಾದವನ್ನು ಈ ಕೆಳಗಿನ ವಿವರಣೆಯಿಂದ ಪರಿಶೀಲಿಸಬಹುದು.

'ಸಂದೇಹ ಸಮ್ರಾಜ್ಯ' ನಾಟಕದ ನಾಲ್ಕನೆಯ ಅಂಕ. ಮೊದಲನೆಯ ಪ್ರವೇಶ. ಆನಂದಶೇಟನು ಸಂತೋಷದಿಂದ ಸ್ವಗತವಾಗಿ ಹಾಡಿರುವುದು. ಬೇರೆ ಕಡೆಗೆ ಶತತಾರೆಯ ಭಾವಚಿತ್ರ ನೋಡಿ ಆನಂದಶೇಟ ಅವಳ ಬಗ್ಗೆ ಸಂಶಯ ತಾಳುತ್ತಾನೆ. ಅವಳ ಬೇರೆ ಸಂಬಂಧಗಳಿರಬಹುದೆಂದು, ಪತ್ತೆ

ಹಚ್ಚಲು ಹೋಗಿ ವಿಫಲನಾಗುತ್ತಾನೆ. ಆಗ ಅವನಿಗೆ ಅವಳ ಬಗೆಗೆ ಅಭಿಮಾನವೆನಿಸುತ್ತದೆ. ಅವಳು ಹೆಚ್ಚು ಸುಂದರಿಯಾಗಿ, ಮೋಹಕವಾಗಿ ಅವನಿಗೆ ಕಾಣುವಳು. ಆಗ ಹಾಡುತ್ತಾನೆ.

**ಮರಾಠಿ**

ಮೃಗನಯನಾ ರಸಿಕ ಮೋಹಿನೀ ॥

ಕಾಮಿನೀ ಹೀತಿ ತೀ ಮಂಜುಳ ಮಧುರಾಲಾಪಿನೀ ॥

ನವಯೌವನ ಸಂಪನ್ನ ರಮ್ಯಗತಿ ವಿಲಾಸಿನಿ ॥ ಧೃ ॥

ಆಹ್ಲಾದಕ ಮುಖಚಂದ್ರಂತಿ ಹೋತಾ

ಹೋತೋ ದೃಷ್ಟೀ ತೀ ಪ್ರೇಮ ರಸ ವಾಹಿನೀ ॥

(ಚಂಚಲ ಕಣ್ಣುಗಳ, ಮಧುರ ಮಾತಿನ, ಸುಂದರಿ ನೀನು. ಕಾಂತಿ ಚೆಲ್ಲುವ ಮುಖಚಂದ್ರ ನಿನ್ನದು ಪ್ರೀತಿರಸ ಉಕ್ಕಿಸುವ ಕಣ್ಣುನೋಟ ನಿನ್ನದು ರಸಿಕರ ಮನಸೆಳೆಯುವ ಮೋಹಿನಿ ನೀನು)

**ಕನ್ನಡ**

ಶಶಿವದನಾ ಸುಖವಿಲಾಸಿನೀ ।

ಭಾಸುರವೇಣೀ । ಮೋಹಕ ಮೃದುಗಜಗಾಮಿನೀ ॥ ಪ ॥

ರಸಿಕ ಮಧುರ ಸಂಗೀತ ರಮ್ಯರಸವಾಹಿನೀ ॥ ಅನು ಪಲ್ಲ ॥

ಪ್ರಣಯೋತ್ಸಾಹ ಚಂಚಲನಯನಾ ।

ವಿನಯಶೀಲ ಸಂಪನ್ನ ಸುಖದವನ ಮೋಹಿನೀ ॥ ೧ ॥

(ಮರಾಠಿ ಹಾಡಿನಲ್ಲಿ ಬರುವ ಸೌಂದರ್ಯ ರೂಪಕಗಳು ಕನ್ನಡದಲ್ಲಿ ಯಥಾರೀತಿಯಾಗಿ ಬಂದಿರುವುದನ್ನು ಗಮನಿಸಬೇಕು)

| ಮರಾಠಿ | ಕನ್ನಡ |
|---|---|
| ಮೃಗನಯನಾ | ಚಂಚಲನಯನಾ |
| ರಮ್ಯಗತಿ ವಿಲಾಸಿನಿ | ಮೋಹಕ ಮೃದು ಗಜಗಾಮಿಣೆ |
| ಮುಖಚಂದ್ರಂತಿ | ಶಶಿವದನೆ |
| ಮಂಜುಳಮಧುರಾಲಾಪಿನಿ | ಮಧುರ ಸಂಗೀತ ರಮ್ಯರಸವಾಹಿನೀ |
| ಕಾಮಿನಿ | ಪ್ರಣಯೋತ್ಸಾಹಿ |

ವೃತ್ತಿರಂಗಭೂಮಿಯ ಪರಂಪರೆ ನಿರ್ಮಾಣದಲ್ಲಿ ಇವರು ಕೆಲವು ಜನಪ್ರಿಯ ಮರಾಠಿ ನಾಟಕಗಳನ್ನು ಅನುವಾದಿಸಿ ಕೊಡುವ ಮೂಲಕ ಅಂದಿನ ರಂಗಾಸಕ್ತಿ ಬತ್ತದಂತೆ ಪ್ರಯತ್ನಿಸಿದರು. ವಾಮನರಾಯರ ಅನುವಾದಗಳು ಮೂಲದ ಯಥಾಪ್ರತಿಗಳು. ಸರಳವಾದ ರಂಗ ನಿರೂಪಣೆಗೆ ಅನುಕೂಲವಾಗುವಂತೆ ಮರಾಠೀ ನಾಟಕಗಳ ಕಥೆಯನ್ನು, ಸನ್ನಿವೇಶ, ಸಂಭಾಷಣೆ, ಸಂಗೀತದಲ್ಲಿ ಕನ್ನಡಿಗರ ಅಭಿರುಚಿಗನುಗುಣವಾಗಿ ಮುರಿದು ಕಟ್ಟುತ್ತ, ನಟರ ಅಭಿನಯಕ್ಕೆ ಪೂರ್ಣ ಪ್ರಮಾಣದ ಅವಕಾಶ ಸಿಗುವಂತೆ ನಾಟಕಗಳನ್ನು ರಚಿಸಿದ್ದು ಇವರ 'ರಂಗತಂತ್ರ, ಪ್ರಯೋಗಶೀಲತೆ' ಯ ವೈಶಿಷ್ಟ್ಯವಾಗಿದೆ. ವಾಮನರಾಯರ ಅನುವಾದ ಕೃತಿಗಳನ್ನು ಮೂಲದ ಜೊತೆಗೆ ಹೋಲಿಸಿ ನೋಡಿದಾಗ ಮೇಲಿನ ಅಭಿಪ್ರಾಯ ಮನವರಿಕೆಯಾಗುವುದು.

ಮರಾಠೀ ನಾಟಕಗಳ ಮೋಹ ಶಾಂತಕವಿಗಳ ಕಾಲದಿಂದಲೂ ಉಳಿದುಕೊಂಡು ಬಂದಿತ್ತು. ಶಾಂತಕವಿಗಳು ಮರಾಠೀ ನಾಟಕಗಳು ಕನ್ನಡ ಬಯಲಾಟಗಳಿಗಿಂತ ಅಷ್ಟೇನೂ ಭಿನ್ನವಾದವುಗಳಾಗಿರಲಿಲ್ಲ ಎಂದು ತೋರಿಸಿಕೊಡಲು ಪ್ರಯತ್ನಿಸಿದರು, ಕನ್ನಡ ಭಾಷಾಭಿಮಾನ ಅವರಿಗೆ ಮುಖ್ಯವಾಗಿತ್ತು.

ವಾಮನರಾಯರ ಕಾಲಕ್ಕೆ ಪರಿಸ್ಥಿತಿ ಬದಲಾಗಿತ್ತು. ಮರಾಠಿ ನಾಟಕಗಳು ಮತ್ತಷ್ಟು ಸಂಗೀತದ ಸೊಗಸುತನ ತುಂಬಿಕೊಂಡಿದ್ದವು. ಬಾಲಗಂಧರ್ವರ ಕಾಲದಲ್ಲಿ ನಾಟಕಗಳು ಸಂಗೀತ ಸಾಹಿತ್ಯದ ಸುವರ್ಣಯುಗವನ್ನು ಕಂಡಿದ್ದವು. ರಂಗಸಂಗೀತವು ಹಿಂದೆಂದಿಗಿಂತಲೂ ವೈಭವದ ಶಿಖರ ತಲುಪಿತ್ತು. ಮಹಾರಾಷ್ಟ್ರ, ಕರ್ನಾಟಕ, ಆಂಧ್ರದಲ್ಲಿ ಕೂಡ ಗಂಧರ್ವರ ಸಂಗೀತ, ಗಂಧರ್ವರ ಪಾತ್ರಗಳ ವೇಷಭೂಷಣಗಳು ಅನುಕರಣೆಯಾಗುತ್ತಿದ್ದವು. ವಾಮನರಾಯರಿಗೆ ಕನ್ನಡದಲ್ಲಿ 'ಗಂಧರ್ವಯುಗ' ನಿರ್ಮಿಸಬೇಕಾಗಿತ್ತು. ಅದಕ್ಕೆ ಅವರು ಮಾದರಿಯಾಗಿ ಮರಾಠಿ ನಾಟಕ, ಮರಾಠಿ ನಾಟ್ಯಗೀತೆಗಳನ್ನು ಕನ್ನಡಕ್ಕೆ ಅನುವಾದಿಸಿದರು. ಮರಾಠಿ ರಂಗಭೂಮಿಯ ಸಂಭ್ರಮವನ್ನು ಸಂಗೀತ ನಾಟಕಗಳ ಮೂಲಕ ಕನ್ನಡ ರಂಗದ ಮೇಲೆ ಸೃಷ್ಟಿಸಲು ಪ್ರಯತ್ನಿಸಿದರು.

ವಾಮನರಾಯರ ರಂಗಚಟುವಟಿಕೆಗಳ ಹಿಂದಿನ ಒತ್ತಾಸೆ, ಅವುಗಳ ಸ್ವರೂಪವನ್ನು ಗಮನಿಸಿದರೆ ಅವರೊಬ್ಬ ಅಪ್ಪಟ ರಂಗಕರ್ಮಿ ಎನಿಸುತ್ತಾರೆ. ಅವರಿಗೆ ಸಮಕಾಲೀನ ಚಳವಳಿ, ಭಾಷೆಯ ಸಮಸ್ಯೆ, ಸಮಾಜಿಕ ಸಮಸ್ಯೆಗಳು ಅಷ್ಟಾಗಿ ಮುಖ್ಯವೆನಿಸಲಿಲ್ಲ. ಸಮಸ್ಯೆಗಳಿಗೆ ಸ್ಪಂದಿಸಲು ರಂಗಭೂಮಿಯನ್ನು ಮಾಧ್ಯಮ ಮಾಡಿಕೊಳ್ಳಲಿಲ್ಲ. ಒಂದು ವೇಳೆ ಇಂಥ ಸಂಗತಿಗಳು ಅವರ ಕೃತಿಗಳಲ್ಲಿ ಸೂಕ್ಷ್ಮವಾಗಿ ಬಂದರೂ ಅವು ಆನುಷಂಗಿಕವಾಗಿ ಬಂದುವುಗಳೇ ವಿನಃ ಪ್ರಧಾನವಾಗಿ, ಮುಖ್ಯ ಉದ್ದೇಶವಾಗಿ ಬಂದವು ಅಲ್ಲ. ರಂಗಭೂಮಿ ಅವರಿಗೆ ಶುದ್ಧವಾದ ಕಲೆಯ ಕ್ಷೇತ್ರ. ಅದು ಬದುಕನ್ನು ತಿದ್ದಬೇಕು, ಮನರಂಜನೆ ನೀಡಬೇಕು. ಮನೋವಿಕಾಸ ಸಾಧಿಸಬೇಕು. ಅವರಿಗೆ ರಂಗಭೂಮಿ ಎಂಬುದು ಆದರ್ಶ ಕಲೆ. ಅದಕ್ಕಾಗಿ ಒಳ್ಳೇಯದೆಂಬುದನ್ನು ಹುಡುಕಿ ಅದನ್ನು ಕಲಾತ್ಮಕವಾಗಿ ಪ್ರೇಕ್ಷಕರ ಎದುರು

ಪ್ರದರ್ಶಿಸುತ್ತಿದ್ದರು. ವಾಮನರಾಯರಿಗೆ ಭಾಷಾಭಿಮಾನ ಕಾಡುತ್ತಿದ್ದರೆ ಅವರು ಬಹುಶಃ ಮರಾಠೀ ನಾಟಕಗಳನ್ನು ಅನುವಾದಿಸುತ್ತಿದ್ದರೋ ಇಲ್ಲೋ ಹೇಳಲಿಕ್ಕೆ ಬರುವುದಿಲ್ಲ. ಕಲೆಯನ್ನು ಶುದ್ಧಾಂಗವಾಗಿ ಪ್ರೀತಿಸುವವನು ಕಲೆಯ ಏಳಿಗೆಯನ್ನೇ ಯೋಚಿಸುತ್ತಿರುತ್ತಾನೆ. ಮರಾಠಿಯಿಂದ ಸ್ವೀಕರಿಸಿದರೆ ಕನ್ನಡ ರಂಗಭೂಮಿಗೆ ಮೆರಗು ಬರುತ್ತಿದ್ದರೆ ಮರಾಠಿಯಿಂದ ಧಾರಾಳವಾಗಿ ಸ್ವೀಕರಿಸಲು ಸಿದ್ಧನಾಗುವನು. ಅದನ್ನು ವಾಮನರಾಯರಲ್ಲಿ ಕಾಣುತ್ತೇವೆ.

ವಾಮನರಾಯರ ಅನುವಾದಗಳು ಮರಾಠಿಗೆ ನಿಷ್ಠವಾಗಿದ್ದವು ಮೂಲದಲ್ಲಿ ಇದ್ದಂತೆಯೇ ಕನ್ನಡಕ್ಕೆ ಸಾಗಿ ಬಂದವು. ಅವರು ಅನುವಾದದಲ್ಲಿ ಸ್ವಾತಂತ್ರ್ಯ ಉಪಯೋಗಿಸಿದ್ದುದು ರಂಗಗೀತೆಗಳ ಸಂದರ್ಭದಲ್ಲಿ ಮಾತ್ರ. ಮೊದಲು ಧಾಟಿಗಳನ್ನು ಆಯ್ದುಕೊಂಡು ಅದಕ್ಕೆ ತಕ್ಕಂಥ ಹಾಡುಗಳನ್ನು ರಚಿಸಿದರು. ರಂಗಗೀತೆಗಳು ಎಂದರೆ ಸಂಗೀತಕ್ಕೆ ತಕ್ಕಂತೆ ಸಾಹಿತ್ಯ ರಚನೆಗಳು. ಆಗ ಮೂಲಕೃತಿಯ ಮಾಪನ ಸಡಿಲು ಮಾಡಿಕೊಳ್ಳಬೇಕಾದುದು ಅನಿವಾರ್ಯ.

ವಾಮನರಾಯರು ರಂಗಗೀತೆಗಳನ್ನು ಹೊರತು ಪಡಿಸಿ ಉಳಿದಂತೆ ನಾಟಕದ ಪಾತ್ರ ಸನ್ನವೇಶ, ಸಂಭಾಷಣೆಯನ್ನು ಯಥಾರೀತಿ ಕನ್ನಡಕ್ಕೆ ಅನುವಾದಿಸಿರುವರು.ಮೂಲದ ಜೊತೆಗೆ ಅವರ ಅನುವಾದಗಳನ್ನು ಹೋಲಿಸಿದಾಗ ಆ ಸೊಗಸು ಮೇಲ್ನೋಟಕ್ಕೆ ಪ್ರೇಕ್ಷಣೀಯವಾಗಿ ಕಂಗೊಳಿಸುತ್ತವೆ. ಮೂಲವನ್ನು ತಾಜಾತನದಿಂದ ಕನ್ನಡೀಕರಿಸಿದಾಗ ಮಾತ್ರ ಅದು ಪ್ರೇಕ್ಷಣೀಯವಾಗಿ ತೋರುವುದು. ಈ ನೆಲೆಯಲ್ಲಿ ವಾಮನರಾಯರ ಅನುವಾದಗಳು ಮಾದರಿಯೆನಿಸುತ್ತವೆ ಮತ್ತು ಕನ್ನಡ–ಮರಾಠಿ ಎರಡರಲ್ಲಿಯ ಅವರ ವಿದ್ವತ್ತು, ಭಾಷಿಕ ಸಂಪತ್ತು, ಅನುವಾದಕ್ಕೆ ವರವಾಗಿ ಪರಿಣಮಿಸಿತೆನ್ನಬೇಕು.

**ಇ: ನಾಟಕಗಳ ಭಾಷೆ ಶೈಲಿ:**

**ಇದಂ ಅಂಧತಮಮಂ ಕೃತ್ನಂ ಭುವನತ್ರಯಾ**

**ಯದಿ ಶಬ್ದಾಹ್ವಯಂ ಜ್ಯೋತಿರಾವ್ ಸಂನಾರಾವ್ ನ ದೀಪ್ಯತೇ**

ಭಾಷೆ ಎಂಬ ಜ್ಯೋತಿ ಬೆಳಗದಿದ್ದರೆ, ಮೂರು ಲೋಕಗಳೆಲ್ಲವೂ ಅಜ್ಞಾನದ ಅಂಧಃಕಾರದಲ್ಲಿ ಮುಳುಗಿ ಹೋಗುತ್ತಿದ್ದವೆಂದು ದಂಡಿ ಕಾವ್ಯಾದರ್ಶದಲ್ಲಿ ಹೇಳಿದ್ದಾನೆ. ಮನುಷ್ಯನ ಭಾವನೆಗಳ ಪರಿಣಾಮಕಾರಿ ಅಭಿವೃದ್ಧಿಗೆ ಇರುವ ಪ್ರಮುಖ ಮಾಧ್ಯಮವೆಂದರೆ ಭಾಷೆ. ನಿತ್ಯ ಜೀವನದಲ್ಲಿ ಹೇಗೋ ಸಾಹಿತ್ಯ ಕಲೆಗಳಲ್ಲಿ ಕೂಡ ಭಾಷೆಯ ಪಾತ್ರ. ಅಮೋಘವಾಗಿದೆ. ವ್ಯವಹಾರದಲ್ಲಿ ಭಾಷೆ ಬಳಕೆಯಾಗಿ ಯಾಂತ್ರಿಕವಾದರೆ, ಸಾಹಿತ್ಯದಲ್ಲಿ ಭಾಷೆ ಲಾವಣ್ಯ ಪಡೆದು ಚೈತನ್ಯಶಾಲಿಯಾಗುತ್ತದೆ. ಭಾಷೆಯ ಪ್ರಪಂಚ ಅದ್ಭುತವಾಗಿದೆ. ನಾಟಕದಲ್ಲಿ ಪಾಲ್ಗೊಳ್ಳುವ ರಂಗಾಂಶಗಳಲ್ಲಿ ಈ ಭಾಷೆ ಕೂಡ ಪ್ರಮುಖವಾದ ಅಂಶ. ಭರತ ಮುನ ಹೇಳುವ ನಾಲ್ಕು ಬಗೆಯ ಅಭಿನಯಗಳಲ್ಲಿ ವಾಚಿಕವೂ ಒಂದು. ಆಂಗಿಕ ಭಾಷೆಗೆ ಸಮರ್ಥನೆ, ಸ್ಪಷ್ಟೀಕರಣ ದೊರೆಯುವುದೇ ವಾಚಿಕದಲ್ಲಿ. ಕಾವ್ಯವೇ ಇರಲಿ ನಾಟಕವೇ ಇರಲಿ ಅದರ ಭಾಷೆ ನಿಜಜೀವನದ ಭಾಷೆಗಿಂತ ವಿಶಿಷ್ಟವಾಗಿರುತ್ತದೆ. ಕಾವ್ಯದಲ್ಲಿ ಭಾಷೆ ಸೃಜನಶೀಲವಾಗಿರುತ್ತದೆ. ನಾಟಕದಲ್ಲಿ ಭಾಷೆ ಕತೆಗೆ ಬದ್ಧವಾಗಿರುತ್ತದೆ. ನಾಟಕದ ಭಾಷೆ ಎಂದರೆ ಅದು ಪ್ರಸಂಗ ಸಾಹಿತ್ಯ. ನಾಟಕಕಾರನಿಗೆ ಆಯ್ದುಕೊಂಡ ಘಟನೆ ಅಥವಾ ಕಥೆಗೆ ತಕ್ಕಂತೆ ಭಾಷೆಯನ್ನು ಸೃಷ್ಟಿಸಬೇಕಾಗುತ್ತದೆ. ಅಲ್ಲಿ ಅವನಿಗೆ ಭಾಷಾ ಪ್ರಯೋಗದಲ್ಲಿ ಅಷ್ಟು ಸ್ವಾತಂತ್ರ್ಯವಿಲ್ಲ. ಸಾಹಿತ್ಯಕೃತಿಯಲ್ಲಿಯ ಭಾಷೆಯನ್ನು ಅಧ್ಯಯನ ಮಾಡುವುದೇ ಶೈಲಿಶಾಸ್ತ್ರ. ಕಲಾಕೃತಿಯೊಂದರ ನಿರ್ಮಾಣ, ನಿರ್ವಚನ ಹಾಗೂ ಪರಿಣಾಮದಲ್ಲಿ ಭಾಷೆಯ ಪ್ರಯೋಗ, ತಂತ್ರ ತಿಳಿದುಕೊಳ್ಳುವುದಕ್ಕೆ ಶೈಲಿಶಾಸ್ತ್ರವು ತುಂಬ ಉಪಯೋಗಕ್ಕೆ ಬರುತ್ತದೆ. ಶೈಲಿಶಾಸ್ತ್ರವು ಭಾಷೆಯನ್ನು ಗದ್ಯ ಮತ್ತು ಪದ್ಯ ಎಂದು ಸರಳವಾಗಿ ವಿಭಜಿಸುತ್ತದೆ. ನಾಟಕದ ಭಾಷೆ ಗದ್ಯವೇ ಇರಲಿ, ಪದ್ಯವೇ ಇರಲಿ ಅದು ಸಂವಾದಯೋಗ್ಯವಾಗಿರಬೇಕು. ಸಂವಾದಯೋಗ್ಯವಾದಷ್ಟು ಅದರ ಪರಿಣಾಮ ಹೆಚ್ಚು.

ನಾಟಕದಲ್ಲಿ ಬಳಕೆ ಆಗುವ ಭಾಷೆಯ ಬಗ್ಗೆ ಸಾಕಷ್ಟು ಚರ್ಚೆಗಳಿವೆ. ನಾಟಕದಲ್ಲಿ ಜೀವಂತ ಭಾಷೆಯ ಬಳಕೆಯಾಗಬೇಕು ಎಂಬ ವಾದವಿದೆ. ಜೀವಂತ ಭಾಷೆ ಎಂದರೆ ಆಡುಮಾತು. ನಾಟಕದಲ್ಲಿ ಆಡುಮಾತು ಸಂವಾದರೂಪದಲ್ಲಿ ಬಳಕೆಯಾಗಬೇಕು. ಲಿಂಗದೇವರು ಹಳೆಮನೆ ಅವರು ನಾಟಕದ ಭಾಷೆಗೆ ಎರಡು ರೀತಿಯ ಜವಾಬ್ದಾರಿಗಳಿವೆ ಎನ್ನುತ್ತಾರೆ.[೬] ಒಂದು, ತತ್‌ಕ್ಷಣದ ಸಂವಹನ, ಎರಡು ನೋಡುವ ಭಾವನೆಗಳನ್ನು ಉದ್ದೀಪನಗೊಳಿಸುವುದು. ಇವೆರಡನ್ನು ನಾಟಕಕಾರ ಭಾಷೆಯ ನೆರವಿನಿಂದ ಸಾಧಿಸಲು ಪ್ರಯತ್ನಿಸುತ್ತಾನೆ. ನಾಟಕದ ಭಾಷೆ ಪರಿಣಾಮಕಾರಿಯಾಗಬೇಕಾದರೆ ಅದರ ಶೈಲಿ ಹೇಗಿರಬೇಕು. ಎಂಬುದರ ಬಗ್ಗೆ ಡಾ. ಎಂ. ಎಂ. ಕಲಬುರ್ಗಿ ಅವರ ವಿವರಣೆ ಹೀಗಿದೆ.:

"ನಾಟಕದ ಭಾಷೆ ಏಕಕಾಲಕ್ಕೆ ಎರಡು ಸಾಧ್ಯತೆಗಳಲ್ಲಿ ದುಡಿಯಬೇಕಾಗುತ್ತದೆ. ಪಾತ್ರೋಚಿತ "ಸಂವಾದಯೋಗ್ಯ ಭಾಷಾಶೈಲಿ" ಇದರ ಮೊದಲ ಲಕ್ಷಣ. ಮುಂದುವರಿದು ಪ್ರದರ್ಶನ ಯೋಗ್ಯವಾಗಬೇಕಾದರೆ, ಸಹೃದಯರಿಗೆ ತಲುಪಲು "ಸಂವಹನಯೋಗ್ಯ ಭಾಷಾಶೈಲಿ" ಯನ್ನೊಳಗೊಳ್ಳುವುದು ಅದರ ಎರಡನೆಯ ಲಕ್ಷಣ, ಅಂದರೆ ಇಲ್ಲಿ ಸಂವಾದಯೋಗ್ಯ, ಭಾಷೆ, ಪಾತ್ರ ಶ್ರೋತೃಗಳ ನಡುವೆ ಸಂವಾದಯೋಗ್ಯ ಭಾಷೆ ಅವಶ್ಯವಿದೆ. ಎಂಬ ಎಚ್ಚರ ನಾಟಕ ಕರ್ತೃವಿಗೆ ಇರಬೇಕಾಗುತ್ತದೆ. ಭಾಷೆಯ ಈ ಎರಡೂ ಹೊಣೆಗಳು ತುಂಬಾ ಸೂಕ್ಷ್ಮವಾದವು. ಏಕೆಂದರೆ ಸಂವಾದಯೋಗ್ಯ ಭಾಷಾಶೈಲಿಯನ್ನು ಮರೆತರೆ ನಾಟಕವು "ನಾಟಕಕೃತಿಯಾಗಿ ಉಳಿಯುವುದಿಲ್ಲ. ಸಂವಹನಯೋಗ್ಯವಾಗದಿದ್ದರೆ ನಾಟಕವು "ಪ್ರಯೋಗಕೃತಿ"ಯಾಗಿ ಬೆಳೆಯುವುದಿಲ್ಲ.

ಯಾವುದೇ ಉತ್ತಮ ನಾಟಕದಲ್ಲಿ ಕಿವಿಗೆ ಕೇಳಿಸುವ ಸಂವಾದ+ಸಂವಹನಯೋಗ್ಯ ಭಾಷೆಗೆ ಸರಿತೂಕವಾಗಿ, ಕಣ್ಣಿಗೆ ಕಾಣಿಸುವ ಕ್ರಿಯಾಚಟುವಕೆಯ ದೃಶ್ಯಗಳು ಅದರಲ್ಲಿ ಉದ್ದಕ್ಕೂ ಸೇರಿಕೊಂಡಿರಬೇಕು. ಆಗ ನಾಟಕ 'ದೃಶ್ಯಕಾವ್ಯ' ಎಂಬ ಸಾರ್ಥಕತೆ ಪಡೆಯುತ್ತದೆ.

ಇಲ್ಲಿ ನಟರ ವೈಯಕ್ತಿಕ ಭಾಷಾಭಿವ್ಯಕ್ತಿ' ಯನ್ನು ಕೇಳುವ ಪ್ರೇಕ್ಷಕ, ಅವರ "ಆಂಗಿಕಕ್ರಿಯೆ"ಗಳನ್ನು ನೋಡಿ ಸುಖಿಸುತ್ತಾನೆ. ಈ ಕ್ರಿಯೆಗಳು ಕೇವಲ ಕ್ರಿಯೆಗಳಾಗಿ ಘಟಿಸುವುದೂ, ಕೆಲವೊಮ್ಮೆ ಏನನ್ನಾದರೂ ಸಂಕೇತಿಸುವುದೂ ಇಲ್ಲಿ ನಡೆಯಬೇಕಾಗುತ್ತದೆ. ಹೀಗೆ ಭಾಷೆ ಮತ್ತು ಕ್ರಿಯೆಗಳು ಬೆಸೆದುಕೊಂಡು ಮುನ್ನಡೆದಾಗ ಮಾತ್ರ ನಾಟಕದ ಪ್ರದರ್ಶನಕ್ಕೆ ಉಕ್ಕು ಬರುತ್ತದೆ".[೭]

ರಂಗದ ಮೇಲಿನ ಪ್ರಯೋಗದಲ್ಲೂ ರಂಗಕ್ರಿಯೆಯಲ್ಲಿ ಭಾಷೆ ಹೇಗೆ ಪಾಲ್ಗೊಳ್ಳಬೇಕು? ಎಂಬುದನ್ನು ಮೇಲಿನ ವಿವರಣೆ ಸೂತ್ರರೂಪದಲ್ಲಿ ನಿರೂಪಿಸಿದೆ. ರಂಗಪ್ರಯೋಗದ ದೃಷ್ಟಿಯಿಂದ ಕಂಪನಿ ನಾಟಕಗಳ ಭಾಷೆಯನ್ನು ಎರಡು ಪ್ರಕಾರವಾಗಿ ವರ್ಗೀಕರಿಸಹುದು. ಮೊದಲನೆಯದು ನಾಟಕದ ಹಸ್ತಪ್ರತಿಗೆ ಬದ್ಧವಾಗಿರುತ್ತದೆ. ಅಂದರೆ, ನಾಟಕಗ್ರಂಥದಲ್ಲಿರುವ ಭಾಷೆಯನ್ನು ಹಾಗೆಯೇ ಕಂಠಪಾಠ ಮಾಡಿ ಒಪ್ಪಿಸುವುದು. ಎರಡನೇಯ ಪ್ರಕಾರದಲ್ಲಿ, ನಾಟಕದ ಹಸ್ತಪ್ರತಿಗೆ ರಂಗ ಪ್ರಯೋಗದ ಭಾಷೆ ಬದ್ಧವಾಗಿರದೆ ಕಾಲ ಸನ್ನಿವೇಶ, ಪಾತ್ರಕ್ಕೆ ತಕ್ಕಂತೆ ಮಾರ್ಪಾಡನ್ನು ಮಾಡಿಕೊಂಡು ಭಾಷೆ ಬದಲಾವಣೆ ಆಗುತ್ತಿರುತ್ತದೆ. ಈ ರೀತಿಯ ಮಾರ್ಪಾಡಿನ ಸ್ವಾತಂತ್ರ್ಯ ಪೌರಾಣಿಕ ಹಾಗೂ ಐತಿಹಾಸಿಕ ನಾಟಕಗಳಲ್ಲಿ ಅಷ್ಟಾಗಿ ಇರದೆ ಸಾಮಾಜಿಕ ನಾಟಕಗಳಲ್ಲಿ ಹೆಚ್ಚಾಗಿರುತ್ತದೆ.[೮] ನಾಟಕದ ಸಾಹಿತ್ಯಕೃತಿ, ರಂಗಕೃತಿಗಳ ನಡುವೆ ವ್ಯತ್ಯಾಸ ನಿರ್ಮಾಣವಾಗುವುದೇ ಭಾಷೆಯ ಪ್ರಯೋಗದಿಂದ.

ಇದಿಷ್ಟು ಚರ್ಚೆಯ ಹಿನ್ನೆಲೆಯಲ್ಲಿ ವಾಮನರಾವ ಮಾಸ್ತರರ ಪ್ರಕಟಿತ ನಾಟಕಗಳ ಭಾಷೆಯನ್ನು ಪರಿಶೀಲಿಸಬಹುದು. ವಾಮನರಾಯರು ನಾಟಕ ಕಂಪನಿಗಾಗಿ ನಾಟಕಗಳನ್ನು ಬರೆದರು. ಅವರ ನಾಟಕಗಳು ಮರಾಠಿಯ ಅನುವಾದಗಳಾಗಿವೆ. ೧೯೧೭ ರಿಂದ ೧೯೨೮ ಈ ಅವಧಿಯಲ್ಲಿ ಮರಾಠಿ

ರಂಗಭೂಮಿಯ ಮೇಲೆ ಯಶಸ್ವಿಯಾದ ನಾಟಕಗಳನ್ನು ಅನುವಾದಿಸಿದರು. ಅವರು ಅನುವಾದ ಮಾಡುವ ಕಾಲದಲ್ಲಿ ಬಳ್ಳಾವೆ ನರಹರಿ ಶಾಸ್ತ್ರಿಗಳು, ಬಿ. ವೆಂಕಟಾಚಾರ್, ಗರುಡ ಸದಾಶಿವರಾಯರು, ಚಿಕ್ಕೋಡಿ ಶಿವಲಿಂಗಸ್ವಾಮಿಗಳು ಕಂಪನಿಗಳಿಗಾಗಿ ನಾಟಕಗಳನ್ನು ಬರೆಯುತ್ತಿದ್ದರು. ಕಂಪನಿ ನಾಟಕ ಸಾಹಿತ್ಯಕ್ಕೆ ಒಂದು ಖಚಿತತೆ ಪ್ರಾಪ್ತವಾಗಿತ್ತು. ನಾಟಕದ ಮೂಲಕ ಧರ್ಮ ಹೇಳುವುದು, ನೀತಿ ಹೇಳುವುದು, ಭಕ್ತಿಯ ಪ್ರತಿಪಾದನೆ, ದುಷ್ಟರಿಗೆ ಶಿಕ್ಷೆ, ಶಿಷ್ಟರಿಗೆ ರಕ್ಷಣೆಯಂತಹ ಸರಳ ಮೌಲ್ಯ ಪ್ರತಿಪಾದಿಸುವುದು ನಾಟಕಗಳ ಉದ್ದೇಶವಾಗಿತ್ತು. ತೆಲುಗಿನಿಂದ ಎರಡು ನಾಟಕಗಳನ್ನು ಅನುವಾದಿಸಿದ್ದಾರೆ. ಲಂಕಾದಹನ ಮತ್ತು ರಾವಣವಧೆ ತೆಲುಗು ಮತ್ತು ಕನ್ನಡ ಭಾಷೆಗಳನ್ನು ಬಲ್ಲ, ಆಂಧ್ರದ ಗೋವಿಂದಸ್ವಾಮಿ ನಾಯ್ಕರ್ ಅವರ ನಾಟಕ ಕಂಪನಿಯಲ್ಲಿ ಪೇಂಟರ್ ಆಗಿದ್ದ ಅಳಗಿರಿಸ್ವಾಮಿ ಅವರ ನೆರವಿನಿಂದ ತೆಲಗು ನಾಟಕಗಳನ್ನು ಅನುವಾದಿಸಿದರು. ಅವೆರಡೂ ನಾಟಕಗಳು ಪ್ರಕಟವಾಗಿಲ್ಲ. ಆದರೆ ವಿಶ್ವಗುಣಾದರ್ಶ ಕಂಪನಿಯ ಆರಂಭದಲ್ಲಿ ಈ ನಾಟಕಗಳು ತುಂಬ ಜನಪ್ರಿಯವಾಗಿದ್ದವೆಂದು ಗೊತ್ತಾಗುತ್ತದೆ. ಅನಂತರದಲ್ಲಿ ರಾಯರು ಮರಾಠಿ ನಾಟಕಗಳನ್ನು ಒಂದರ ಮೇಲೊಂದು ಅನುವಾದಿಸಿ ಆಡಿದರು. ಮರಾಠಿ ನಾಟಕಗಳು ಹೆಚ್ಚಾಗಿ ಧಾರವಾಡದಲ್ಲಿಯೇ ಅನುವಾದಿಸುತ್ತಿದ್ದರು. ಕನ್ನಡ ಮರಾಠಿ ಚೆನ್ನಾಗಿ ಬಲ್ಲ ಧಾರವಾಡ ಗೆಳೆಯರ ಜೊತೆಗೆ ಚರ್ಚಿಸಿ, ನಾಟಕದ ಅನುವಾದ ಮಾಡುತ್ತಿದ್ದರು. ಪೌರಾಣಿಕ ಭಕ್ತಿಪ್ರಧಾನ, ಐತಿಹಾಸಿಕ ಹಾಗೂ ಸಾಮಾಜಿಕ ನಾಲ್ಕೂ ಪ್ರಕಾರದ ಸಂಗೀತ ನಾಟಕಗಳನ್ನು ಅನುವಾದಿಸಿರುವರು. ಅವರ ನಾಟಕಗಳ ಭಾಷಾಶೈಲಿಗೆ ಕೆಲವು ನಿದರ್ಶನ ನೋಡೋಣ. ಪಾರ್ವತೀ ಸತ್ವಪರೀಕ್ಷಾ ನಾಟಕದ ಒಂದು ಸನ್ನಿವೇಶ. ಅಂಕ. ೨ ಪ್ರವೇಶ ೪ ಮಹಾನಂದೆಯ ಶಾಪದಿಂದ ಇಂದ್ರನ ಕಣ್ಣುಗಳು ಸುಟ್ಟು ಹೋಗಿವೆ. ಆಗ ನಾರದ ಮತ್ತು ಇಂದ್ರನ ಮಧ್ಯೆ ನಡೆಯುವ ಸಂಭಾಷಣೆ:

**ನಾರದ:...** ಮಹಾಸ್ವಾಮಿ ಮೃತ್ಯುಲೋಕದಲ್ಲಿ ವೇಶ್ಯಾಜನರು ಕೂಡಾ ವಿಲಾಸ ಮಾಡಿ, ಜಗತ್ತಿಗೆ ಜ್ಞಾನೋಪದೇಶ ಮಾಡುವಂಥ ದೇವತೆಗಳು ನೀನ್ಯಾರು? ಅದಾದರೂ ತಿಳಿಯಲಿ. ನನ್ನ ಕೇಳಿಕೆಯಲ್ಲಿ ಇಂತಹ ನೀಚ ಕೃತ್ಯಗಳನ್ನು ಮಾಡತಕ್ಕ ದೇವನು ಒಬ್ಬನೇ ತೋರುವನು.

**ಇಂದ್ರ:** ಅವನಾರು?

**ನಾರದ:** ಸ್ವರ್ಗಲೋಕದ ಅಧಿಪತಿಯಾದ ಸಹಸ್ರಾಕ್ಷನು.

**ಇಂದ್ರ:** ಸ್ವರ್ಗಲೋಕದ ರಾಜನು! ನಾನೇ ಆ ಇಂದ್ರನು.

**ನಾರದಾ:** ನಿಜವೇನು? ಹಾಗಾದರೆ ನಿಮ್ಮ ಕಣ್ಣುಗಳೇನಾದವು?

**ಇಂದ್ರ:** ಮಹಾನಂದೆಯ ಕ್ರೋಧಾಗ್ನಿಯಿಂದ ದಗ್ಧವಾದವು.

**ನಾರದಾ:** ಒಂದೆರಡಾಗ್ಗಬಹುದು, ಆದರೆ ನಿಮಗೆ ಸಾವಿರ ನೇತ್ರಗಳಿಲ್ಲವೇ?

**ಇಂದ್ರ:** ಮೊದಲು ಎರಡು ಕಣ್ಣಗಳು ಸುಟ್ಟು ಹೋದವು. ಅದರ ಬಗ್ಗೆ ಕೋಪದಿಂದ ಉಳಿದ ಕಣ್ಣುಗಳು ತೆರೆದವು. ಅವು ಕೂಡ ದಹಿಸಿ ಹೋದವು.

**ನಾರದ:** ಅಹಹ ಆಕಳು ಹುಣ್ಣಿಗೆ ತನ್ನ ಚೊಂಚು ಪುಟವನ್ನು ಚುಚ್ಚುವುದಕ್ಕೆ ಜಪ್ಪಿಸಿಕೊಂಡು ಕುಳಿತ ಕಾಗೆಗೆ, ಹೇಗೆ ಅದರ ಬಾಲದ ಹೊಡೆತವು ಬಿದ್ದ ಕೂಡಲೇ ಕಣ್ಣುಗಳು ಒಡೆದು, ಪಕ್ಕಗಳನ್ನು ಹೊಡೆದುಕೊಳ್ಳುತ್ತ ಪ್ರಾಣಗಳನ್ನು ಬಿಡುವ ಪ್ರಸಂಗ ಬರುವುದೋ ಅದರಂತೆ ನಿಮ್ಮ ಸ್ಥಿತಿಯು ಆಯಿತೋ? ಒಳ್ಳೇದು, ನೀವು ಸ್ವರ್ಗದ ರಾಜ್ಯವನ್ನು ಬಿಟ್ಟು ಮೃತ್ಯುಲೋಕಕ್ಕೆ ಬಂದ ಕಾರಣವೇನು?

**ಇಂದ್ರ:** ಮಹಾನಂದೆಯ ಸತ್ವವನ್ನು ಹರಣ ಮಾಡುವುದಕ್ಕೆ

ಇಲ್ಲಿಯ ವಾಚಿಕ ಸಂವಹನ ಅತ್ಯಂತ ಪರಿಣಾಮಕಾರಿಯಾಗಿದೆ. ಆಂಗಿಕ ಸಂವಹನಕ್ಕೆ ಅವಕಾಶವಿಲ್ಲದಂತೆ ಮಾತಿಗೆ ಮಾತು ಬೆಳೆಯುತ್ತದೆ. ಮಾತಿನ ತೀವ್ರಗತಿ, ಅದರ ಮಾರ್ಮಿಕ ಅರ್ಥದಿಂದ ನಾರದನ ಮಾತಿಗೆ ಇಂದ್ರನ ವ್ಯಕ್ತಿತ್ವದ ಹಿರಿತನ ಕರಗಿ ಹೋಗುತ್ತದೆ. ಮೈಮೇಲಿನ ಬಟ್ಟೆಗಳನ್ನು ಒಂದೊಂದಾಗಿ ಕಳಚುವಂತೆ ತನ್ನ ಮುಖವಾಡವನ್ನು ತಾನೇ ಕಳಚಿಕೊಳ್ಳುತ್ತಾನೆ ಇಂದ್ರ. ಬಯಲಾಟದ ಸಾರಥಿ ಖಳಪಾತ್ರಧಾರಿಯನ್ನು ಮಾತನಾಡಿಸುವ ಪರಿಯಲ್ಲಿಯೇ ಇಲ್ಲಿಯ ಸಂವಾದ ನಡೆಯುತ್ತದೆ. ನಾಟಕಕಾರ ತನಗೆ ಅರಿವಿಲ್ಲದಂತೆ ಬಯಲಾಟದೊಳಗಿನ ಸಂವಾದಶೈಲಿ ಇಲ್ಲಿ ಅನುಸರಿಸಿರುವನು.

ನಾಟಕದ ಭಾಷೆ ಕ್ರಿಯಾತ್ಮಕವಾದುದು. ರಂಗದ ಮೇಲಿನ ಒಂದು ಘಟನೆಯನ್ನು ಭಾಷೆಯೇ ನಿರ್ವಹಿಸುವಂತೆ ನಾಟಕಕಾರ ಭಾಷೆಯನ್ನು ಬಳಸುತ್ತಾನೆ. 'ಶ್ರೀಕೃಷ್ಣಾರ್ಜುನ ಯುದ್ಧ' ನಾಟಕದ ಕೊನೆಯ ಸನ್ನಿವೇಶ: ಪ್ರತಿಜ್ಞಾಬದ್ಧರಾದ ಕೃಷ್ಣ–ಅರ್ಜುನರ ಯುದ್ಧ ಮಾಡಲೇಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ರಂಗದ ಮೇಲಿನ ಯುದ್ಧದ ಕ್ರಿಯೆ ಅತ್ಯಲ್ಪವಾದುದು. ಕೃಷ್ಣನ ಒಂದು ಬಾಣಕ್ಕೆ ಅರ್ಜುನ ಮೂರ್ಛೆ ಹೋಗುತ್ತಾನೆ. ಆಗ ಯುದ್ಧವನ್ನು ಮಾತಿನ ಮೂಲಕವೇ ಗಟ್ಟಿಗೊಳಿಸಲು ನಾಟಕಕಾರ ನಾರದನ ಬಾಯಿಂದ ಘೋಷಿಸುತ್ತಾನೆ.

**ನಾರದ:** (ಗಟ್ಟಿಯಾಗಿ) ಏನು? ಶ್ರೀಕೃಷ್ಣನದು ಅರ್ಜುನನ ಕೂಡ ಯುದ್ಧವೇ? ಅರ್ಜುನನ ಕೂಡ ಶ್ರೀಕೃಷ್ಣನು ಯುದ್ಧವಾಡಿದನೇ? ಎಲ್ಯೈ ಸ್ವರ್ಗದ ದೇವತೆಗಳೇ, ಕೇಳಿ! ಎಲ್ಯೈ ಅಷ್ಟ ದಿಕ್ಪಾಲಕರೇ, ಕೇಳಿ! ಎಲ್ಯೈ ಚರಾಚರ ವಿಶ್ವಾಧಿಷ್ಠಿತ ದೇವತೆಗಳೇ, ಕೇಳಿ; ಎಲ್ಯೈ ಯಕ್ಷ ಗಂಧರ್ವ ಕಿನ್ನರ ವಿದ್ಯಾಧರಾದಿ ಉಪದೇವತೆಗಳೇ, ಕೇಳಿ.

ಎಲ್ಯೈ ಭೂಲೋಕವಾಸಿ ಮಾನವರೇ, ಕೇಳಿ; ಎಲ್ಯೈ ಧ್ಯಾನಸ್ಥ ಮುನಿಗಳೇ ಕೇಳಿರಿ – ಕೇಳಿರಿ – ಶ್ರೀಕೃಷ್ಣನ ಮುಖದಿಂದ ಹೊರಟ – ಈ ಶಬ್ದಗಳನ್ನು! ಶ್ರೀಕೃಷ್ಣನು ಅರ್ಜುನನ ಕೂಡ ಯುದ್ಧ ಮಾಡಿದನು! ಶ್ರೀಕೃಷ್ಣನು ಅರ್ಜುನನ ಕೂಡ ಯುದ್ಧ ಮಾಡಿದನು!

ಈ ಮಾತುಗಳನ್ನು ಜೋರಾಗಿ ಹೇಳಿದಾಗ ಪ್ರೇಕ್ಷಕರ ಮೇಲೆ ಆಗುವ ಪರಿಣಾಮ ಎಂತಹದ್ದು? ರಂಗಕ್ರಿಯೆಗಿಂತಲೂ ಈ ಮಾತಿನ ಕ್ರಿಯೆ ಪ್ರೇಕ್ಷಕನ ಮೇಲೆ ಅಗಾಧ ಪರಿಣಾಮ ಮಾಡುತ್ತದೆ. ಶಬ್ದ ಅರ್ಥ ಧ್ವನಿ, ಅವು ನಿರ್ವಹಿಸುವ ಕ್ರಿಯೆ, ರಂಗದ ಮೇಲೆ ನೋಡಿ, ಕೇಳಿ ಅನುಭವಿಸುವುದೇ ಬೇರೆ. ಆದರೆ ಸಾಹಿತ್ಯ ಕೃತಿಯೊಳಗಿನ ಭಾಷಿಕಪಠ್ಯದ ಪರಿಣಾಮ ಕೂಡ ಆಗಾಧವಾಗಿದೆ. ಎಷ್ಟೋ ಸಂದರ್ಭಗಳಲ್ಲಿ ಆಂಗಿಕ ಸಂವಹನಕ್ಕಿಂತ ವಾಚಿಕ ಸಂವಹನ ಕೂಡ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಕಂದಗಲ್ ಹನುಮಂತರಾಯರ ಪೌರಾಣಿಕ ನಾಟಕಗಳಲ್ಲಿ ವಾಚಿಕ ಅಭಿನಯವೇ ಹೆಚ್ಚು ಪರಿಣಾಮಕಾರಿಯಾದುದು.

ವಾಮನರಾವ ಮಾಸ್ತರರ ನಾಟಕಗಳಲ್ಲಿಯ ಭಾಷೆಯ ಸಾಹಿತ್ಯಿಕ ಗುಣಗಳನ್ನು ಕೆಲವು ನಿದರ್ಶಗಳ ಮೂಲಕ ನೋಡಬಹುದು.

**ಕೃಷ್ಣಾರ್ಜುನರ ಯುದ್ಧ:**

'ಕೃಷ್ಣಾರ್ಜುನರ ಯುದ್ಧ' ನಾಟಕದಲ್ಲಿ ಗಾಲವ ಮುನಿಯು ಶ್ರೀಕೃಷ್ಣನ ಶಿಬಿರಕ್ಕೆ ಬಂದು ಋಷಿಮುನಿಗಳ ಮೇಲೆ (ತಮ್ಮ ಮೇಲೆ) ಗಂಧರ್ವರು ಎಸಗಿದ ಕುಕೃತ್ಯವನ್ನು ಕುರಿತು ಹೇಳಿ, ಗಂಧರ್ವರಿಗೆ ಶಿಕ್ಷೆ ಕೊಡಿಸಬೇಕೆಂದು, ಶ್ರೀಕೃಷ್ಣನಲ್ಲಿ ಕೇಳಿಕೊಂಡಾಗ ಶ್ರೀಕೃಷ್ಣನು ಗಂಧರ್ವನಾದ ಚಿತ್ರರಥನ ಶಿರಚ್ಛೇದನವನ್ನು ಮಾಡುವ ಪ್ರತಿಜ್ಞೆ ಮಾಡುತ್ತಾನೆ. ಆ ಕಾರ್ಯಕ್ಕೆ ೧೨ ಪ್ರಹರಗಳ ಗಡುವುನೀಡಿ ಗಾಲವ ಮುನಿ ತಿರುಗಿ ಹೋಗುತ್ತಾನೆ. ಈ ಸಂದರ್ಭದಲ್ಲಿ ವಿಷಯ ತಿಳಿದ ಶ್ರೀಕೃಷ್ಣ ವ್ಯಾಕುಲನಾಗುತ್ತಾನೆ. ಚಿಂತಾಕ್ರಾಂತನಾಗಿ ಮೌನದ ಮೊರೆಹೊಕ್ಕು ಶ್ರೀಕೃಷ್ಣನಿಗೆ ನಾರದರು 'ಪ್ರತಿಜ್ಞೆ ಮಾಡಬೇಡ' ಎಂಬ ಸಲಹೆ ಕೊಡುತ್ತಾರೆ. ಈ ಸಂದರ್ಭದಲ್ಲಿ ನಾರದನು ಹೇಳಿದ ಮಾತಿದು.

**ನಾರದ:** ಈ ಋಷಿಗಳು ಲೌಕಿಕ ಶೂನ್ಯರು, ಇವರ ಬೆನ್ನುಹತ್ತಿ ನೀನು ಪಾರುಗಾಣುವೆಯಾ? ಹೀಗೆ ನೀನು ಈ ಕೋಪಿಷ್ಟ ಋಷಿಗಳ ಮಾತು ಕೇಳುತ್ತ ಹೋದರೆ ಸುಮ್ಮನೇ ಈರ್ಷ್ಯಗೆ ಒಳಗಾಗಿ, ಇಡೀ ನಿನ್ನ ಅಯುಷ್ಯವೆಲ್ಲ. ಈ ರೀತಿಯ ಸಂಹಾರ ಕಾರ್ಯದಲ್ಲಿಯೇ ಕಳೆದೀತು! ಕೌರವ-ಪಾಂಡವರ ಯುದ್ಧ ಮೊನ್ನೆ ಇನ್ನೂ ಮುಗಿದಿದೆ; ಈಗಾಗಲೇ ಇನ್ನೊಂದು ಯುದ್ಧದ ಸಿದ್ಧತೆ! ಹೀಗಾದರೆ ನಿನ್ನ ಜೀವಕ್ಕೆ ಶ್ರೀಕೃಷ್ಣ ವಿಶ್ರಾಂತಿ ಸೌಖ್ಯ ಹೇಗೆ ದೊರಕೀತು? ಹೀಗೆಯೆ ಅರ್ಜುನ ಶ್ರೀಕೃಷ್ಣರ ಮಾತನಾಡುತ್ತಿರುವಾಗ ಅಲ್ಲಿಗೆ ನಾರದ ಪ್ರವೇಶಿಸುತ್ತಾನೆ. ಶ್ರೀಕೃಷ್ಣನು ನಾರದನಿಗೆ ಚಮತ್ಕಾರಗಳನ್ನು ನೋಡಲು ಸಿದ್ಧವಾಗಿರುವಂತಿದೆ । ಎಂದು ವ್ಯಂಗ್ಯವಾಗಿ ನುಡಿದಾಗ.

**ನಾರದನು:** ನಿಶ್ಚಯ, ದೇವಾ - ತಾವು ಚಮತ್ಕಾರಗಳನ್ನು ಮಾಡಿ ತೋರಿಸಲು ಸಿದ್ಧರಾದ ಮೇಲೆ ಅವನ್ನು ನೋಡಲು ನನ್ನಂತಹ ರಸಿಕಪ್ರೇಕ್ಷಕನು ಅವಶ್ಯವಾಗಿ ಬೇಕಲ್ಲವೆ? ಇಂದಿನವರೆಗೆ ಕೃಷ್ಣಲೀಲಾ

ನಾಟಕವು ನಟರ ಚಾತುರ್ಯಕ್ಕಿಂತ ಪ್ರೇಕ್ಷಕರ ರಸಿಕತೆಯಿಂದಲೇ ಹೆಚ್ಚು ಕಳೆಕಟ್ಟಿದೆ! ಶ್ರೀಕೃಷ್ಣಾ ನನ್ನಂತಹ ಪ್ರಿಯಭಕ್ತನ ಆನಂದವೇ ನಿನ್ನ ನಾಟ್ಯ ವ್ಯವಸಾಯದ ಹೇತುವಲ್ಲವೇ? ಎನ್ನುತ್ತಾನೆ.

'ಪಾರ್ವತೀ ಸತ್ವಪರೀಕ್ಷಾ' ನಾಟಕದ ಒಂದು ಸನ್ನಿವೇಶ. ಮಹಾನಂದೆಯನ್ನು ಮೋಹಿಸಿದ ಇಂದ್ರನಿಗೆ ನಾರದನು ಹೇಳುವ ಬುದ್ಧಿವಾದ ಪ್ರೌಢ ಭಾಷೆಯಿಂದ ಪ್ರಾರಂಭವಾಗುತ್ತದೆ. ಆಮೇಲೆ ಹಾಸ್ಯಕ್ಕೆ ವಾಲುತ್ತದೆ.

**ನಾರದ:** (ಇಂದ್ರನಿಗೆ) ಧಣೀಯರೇ ಈ ರೂಪ ಸೌಂದರ್ಯವು ಸೂರ್ಯನಕ್ಕಿಂತಲೂ ತೇಜಃಪುಂಜವಾದದ್ದು! ಅಗ್ನಿಗಿಂತಲೂ ಪ್ರಖರವಾದದ್ದು! ಕಾಲಕೂಟಕ್ಕಿಂತಲೂ ತೀಕ್ಷ್ಣವಾದದ್ದು! ಮತ್ತು ಅಮೃತಕ್ಕಿಂತಲೂ ಮಧುರವಾದದ್ದು! ನೀವು ಇದನ್ನು ಕಪಟತನದಿಂದ ಕೈವಶ ಮಾಡಿಕೊಳ್ಳಲು ಯತ್ನಿಸಿದರೆ ಅಗ್ನಿಯಂತೆ ನಿಮ್ಮ ಸರ್ವಾಂಗವು ಸುಟ್ಟು ಬೂದಿಯಾದೀತು.

**ಇಂದ್ರ:** ವಿದುರನೀತಿ ಕೇಳಿ ಬೆಕ್ಕು ಕದ್ದು ಹಾಲು ಕುಡಿಯುವುದನ್ನು ಬಿಟ್ಟೀತೆ? ಸೊಂಟದ ಮೇಲೆ ಪೆಟ್ಟುಗಳು ಚೆನ್ನಾಗಿ ಬೀಳಲೇಬೇಕು.......

ವೀರ ಅಭಿಮನ್ಯು ನಾಟಕ – (ಎರಡನೆ ಅಂಕ) ಸೌದಾಮಿನಿ ಮತ್ತು ಮೇಘನಾದ ಇವರ ಸಂವಾದ ಹಾಸ್ಯ ರಸಕ್ಕೆ ನಿದರ್ಶನವಾಗಿದೆ. ಯುದ್ಧಕ್ಕೆ ಹಿಂಜರಿಯುತ್ತಿದ್ದ ಮೇಘನಾದನನ್ನು ಸೌದಾಮಿನಿ ತರಾಟೆಗೆ ತೆಗೆದುಕೊಳ್ಳುತ್ತಾಳೆ. ಇವೆರಡೂ ಹಾಸ್ಯ ಪಾತ್ರಗಳು.

**ಸೌದಾಮಿನಿ:** ಓಹೋ ಸರಿ ತಿಳಿಯಿತು. ಯುದ್ಧಕ್ಕೆ ಹೋಗಬೇಕಾಗುವುದೆಂದು ಏನಾದರೂ ಠಕ್ಕುತನವನ್ನು ಮಾಡಿ ತಪ್ಪಿಸುವ ವಿಚಾರವಿದ್ದಂತೆ ಕಾಣುವುದು. ಅದೇನೂ ಇಲ್ಲ. ಇನ್ನು ಮೇಲೆ ನಿಮ್ಮ ಲಗ್ನವು ಯುದ್ಧದಲ್ಲಿಯೇ ಆಗಲಿ.

**ಮೇಘನಾದ:** ಏನೇ, ಲಗ್ನವೆಂದರೇನು? ಯುದ್ಧವೇ ! ಲಗ್ನ ಮಾಡಿಕೊಂಡು ನಿನ್ನನ್ನು ಬೆನ್ನಿಗೆ ಕಟ್ಟಿಕೊಂಡಾಗಲೇ ಯುದ್ಧ ಪ್ರಾರಂಭವಾಯಿತು. ಪರಮೇಶ್ವರಾ ! ನನಗೆ ಬೋರ್ಜಗಲಿಯ ಮೇಲಾದರೂ ಆಜನ್ಮ ಬ್ರಹ್ಮಚಾರಯಾಗಬೇಕೆಂಬ ಬುದ್ಧಿಯನ್ನು ಕೊಟ್ಟಿದ್ದರೆ ಎಷ್ಟು ಒಳ್ಳೆಯದಾಗುತ್ತಿತ್ತು!

**ಸೌದಾಮಿನಿ:** ಸಾಕು, ಸಾಕು, ಸಾಕು ನಿಮ್ಮಂತಹ ದುಗ್ಗಾಣಿ ಬ್ರಹ್ಮಚಾರಿಗಳನ್ನು ನಾನು ಬೇಕಾದಷ್ಟು ನೋಡಿರುವೇನು....

ಇವರ ಸಂವಾದದಿಂದ ಹಾಸ್ಯ ಹೊಮ್ಮುತ್ತದೆ. ಮಾತಿನಲ್ಲಿ ಕಟು ಇಲ್ಲ ಕಟುಕಿ ಇದೆ. ಮಾತು ಸಭ್ಯತೆಯಿಂದ ಹಾಸ್ಯವನ್ನುಂಟುಮಾಡುತ್ತದೆ. 'ಸಂದೇಹ ಸಾಮ್ರಾಜ್ಯ' ನಾಟಕದಲ್ಲಿ ವಿಜಯ, ಆನಂದಶೇಠ, ವೃಶ್ಚಿಕ ಇವರ ಸಂಶಯ ಸ್ವಭಾವ ನಾಟಕವನ್ನು ಹಾಸ್ಯದತ್ತ ಕೊಂಡೊಯ್ಯುತ್ತದೆ. ಸನ್ನಿವೇಶದಿಂದ ಸನ್ನಿವೇಶಕ್ಕೆ ಇವರ ಸಂಶಯ ಹೆಚ್ಚುತ್ತಾ ಹೋಗುವುದು. ಕ್ರೋಧ, ದುಃಖ, ವ್ಯಗ್ರತೆಯಿಂದ ಪಾತ್ರಗಳು

ವಿಹ್ವಲಗೊಳ್ಳುವವು. ತರ್ಕವಿತರ್ಕಗಳಿಂದ ಬಳಲುವವು, ಹೈರಾಣಾಗುವವು ಇವರನ್ನು ನೋಡುವ ಪ್ರೇಕ್ಷಕರಲ್ಲಿ ಸಹಾನುಭೂತಿ ಹುಟ್ಟುವುದಿಲ್ಲ. ಬದಲಿಗೆ ನಕ್ಕು ನಕ್ಕು ಸಂತೋಷಪಡುತ್ತಾರೆ. ಮೇಲಿನ ಮೂರು ಪಾತ್ರಗಳ ವಿಪರೀತ ಚಿಂತನೆ ಮತ್ತು ಅಸಂಗತ ವರ್ತನೆಯಿಂದ ಸಂದೇಹ ಸಾಮ್ರಾಜ್ಯವು ಹಾಸ್ಯ ಸಾಮ್ರಾಜ್ಯವಾಗಿ ಪರಿಣಮಿಸುವುದು.

ಎರಡನೆಯ ಬಾಜೀರಾವ ಪೇಶವೆಯಲ್ಲಿಯ ಸ್ವರಾಜ್ಯ ಲಕ್ಷ್ಮಿಯ ಮಾತುಗಳು ದೇಶಭಕ್ತಿಯಿಂದ ಉಜ್ವಲವೆನಿಸುತ್ತವೆ. ಸಂತಸಖೂ ನಾಟಕದಲ್ಲಿ ಸಖೂಬಾಯಿಯ ಮಾತುಗಳು ಭಕ್ತಿ ಭಾವದಿಂದ ತುಂಬಿವೆ. ಭಕ್ತ ಪ್ರಹ್ಲಾದದಲ್ಲಿ ಪ್ರಹ್ಲಾದನ ಹರಿಭಕ್ತಿ ಭಾಷೆ, ಹಿರಣ್ಯಕಶ್ಯಪನ ಶಿವಭಕ್ತಿಯ ಭಾಷೆ ಎರಡೂ ಕುತೂಹಲದ ಚರ್ಚೆಯಾಗಿ ಬೆಳೆಯುತ್ತವೆ. ವಾಮನರಾಯರ ನಾಟಕಗಳ ಸಂವಾದದಲ್ಲಿ ಸಂಸ್ಕೃತಿ ಇದೆ. ಸ್ವಾರಸ್ಯವಿದೆ. ಆಡು ಮಾತಿನ ಲಯ, ಶಿಷ್ಟ ಮತ್ತು ಜನಪದ ಎರಡರ ಹದವಾದ ಬೆರಕೆಯಿಂದ ಹೆಚ್ಚು ಸಂವಹನ ಶೀಲ ಗುಣವನ್ನು ಪಡೆದಿವೆ. ಇವರ ಭಾಷೆ ಗ್ರಂಥಸ್ಥವು ಅಲ್ಲದ ಆಡುಮಾತು ಅಲ್ಲದ ಅವೆರಡರ ಸಾಮರಸ್ಯದಿಂದ ಕೂಡಿರುವುದಾಗಿದೆ.

ಕಂಪನಿ ನಾಟಕಕಾರರ ಮುಖ್ಯ ಉದ್ದೇಶ ಪ್ರೇಕ್ಷಕರನ್ನು ತಲುಪುವುದು, ನಾಡಿನ ತುಂಬ ತಿರುಗಾಡುವಾಗ ಅಲ್ಲಲ್ಲಿಯ ಪ್ರೇಕ್ಷಕರಿಗೆ ಅರ್ಥವಾಗುವ ರೀತಿಯಲ್ಲಿ ಅವರ ಭಾಷೆ ಸರಳವಾಗಿರುತ್ತದೆ. ಅಲ್ಲದೆ ನಟನೆಗೆ ಕೂಡಾ ಅನುಕೂಲವಾಗಿರುತ್ತದೆ. ವಾಮನರಾಯರ ಭಾಷೆ ಅಭಿನಯ ಗರ್ಭಿತವಾಗಿರುವುದನ್ನು ಕಾಣುತ್ತೇವೆ. ನಾಟಕದ ಶಬ್ದ ಧ್ವನಿ ತರಂಗಗಳು, ಮಾತಿನ ಲಯ, ನಾಟಕೀಯತೆಯನ್ನು ಸೃಷ್ಟಿಸುತ್ತವೆ. ಸಂವಾದ ಗದ್ಯಮಯವಾದರೂ ಅಲ್ಲಿ ಭಾವಾಭಿನಯದ ಅಖಂಡ ಲಯವಿರುವುದು. ಅನುಭವಕ್ಕೆ ಬರುತ್ತದೆ.

ವಾಮನರಾಯರ ಭಾಷೆ ಪ್ರಾಸಬದ್ಧವಾಗಿ ಅಲಂಕಾರಿಕವಾಗಲು ಹಂಬಲಿಸುವುದಿಲ್ಲ ಮೇಲ್ನೋಟಕ್ಕೆ ನಿರಾಭರಣದಂತೆ ಕಂಡರೂ ಅಭಿವ್ಯಕ್ತಿ ಸಾಮರ್ಥ್ಯ ಹಾಗೂ ನಾಟಕೀಯ ಗುಣಗಳಿಂದ ಶಕ್ತಿಶಾಲಿಯೆನಿಸುತ್ತದೆ. ಅನುವಾದವೆನಿಸದಷ್ಟು ಸಹಜ ಸೌಂದರ್ಯವಿದೆ. ಕನ್ನಡದ ನೆಲದಲ್ಲಿಯೇ ಅರಳಿದ, ಕನ್ನಡದ ಕಂಪನ್ನೆ ಚೆಲ್ಲುವ ಅಚ್ಚಗನ್ನಡ ಭಾಷೆ ಅವರದು. ಗ್ರಂಥಸ್ಥ ಮಾತು, ಆಡುಮಾತು ಸಾಂದರ್ಭಿಕವಾಗಿ ಬಳಕೆಯಾಗಿ ಮಾರ್ಮಿಕವೆನಿಸುತ್ತವೆ. ಇದು ಒಂದು ತಂತ್ರವಾಗಿ ನಾಟಕದ ಸೊಗಸನ್ನು ಹೆಚ್ಚಿಸಿದೆ. ಪಾತ್ರಗಳ ಸ್ವಭಾವ ಸನ್ನಿವೇಶಗಳನ್ನು ಪ್ರಕಟಿಸುವ ಸಾಮರ್ಥ್ಯ ಸಂಭಾಷಣೆಗಿದ್ದರೆ. ಲಾಲಿತ್ಯಪೂರ್ಣ ನಾದಮಾಧುರ್ಯ ರಂಗಗೀತೆಗಳಿಗಿದೆ. ಒಟ್ಟಾರೆ ಪ್ರೇಕ್ಷಕರ ಮನಸ್ಸನ್ನು ಸೆಳೆದುಕೊಳ್ಳುತ್ತವೆ. ಪ್ರೇಕ್ಷಕರು ಸಂಭಾಷಣೆ ಕೇಳಿ, ಸಹೃದಯರು ಸಾಹಿತ್ಯ ಓದಿ ಆನಂದಿಸಬಹುದಾದ ರಂಗ ಭಾಷೆ. ರಂಗಕೃತಿಗೂ ಮತ್ತು ಸಾಹಿತ್ಯಕೃತಿಗೂ ಸಲ್ಲುವ ಸುಂದರ ಭಾಷೆ ವಾಮನರಾಯರದು.

**ಈ: ನಾಟಕಗಳು ಮತ್ತು ಸಂಗೀತ:**

ಆಧುನಿಕ ರಂಗಭೂಮಿಯಲ್ಲಿ 'ಸಂಗೀತ ನಾಟಕಗಳ' ಅವಧಿಯನ್ನು ಕಂಪನಿ ನಾಟಕಗಳ ವೈಭವದ ಕಾಲವೆಂದು ಗುರುತಿಸಲಾಗುತ್ತದೆ. ಇಪ್ಪತ್ತನೆಯ ಶತಮಾನದ ೨-೩ ದಶಕದವರೆಗಿನ ರಂಗದ ಮೇಲೆ ಸಂಗೀತ ನಾಟಕಗಳು ಸಂಭ್ರಮಿಸಿದವು. ನಾಟಕ ಕಂಪನಿಗಳ ಹೆಸರಿನಲ್ಲಿ, 'ಸಂಗೀತ' ಎಂಬುದು ಸಾಮಾನ್ಯ ವಿಶೇಷಣವಾಗಿತ್ತು 'ಶ್ರೀ ಕಾಡಸಿದ್ಧೇಶ್ವರ ಸಂಗೀತ ನಾಟಕ ಮಂಡಳಿ' 'ಶ್ರೀ ಮಹಾಲಕ್ಷ್ಮೀ ಪ್ರಾಸಾದಿಕ ಸಂಗೀತ ನಾಟಕ ಮಂಡಳಿ' ಮತ್ತು 'ಶ್ರೀ ಹಾಲಸಿದ್ಧೇಶ್ವರ ಸಂಗೀತ ನಾಟಕ ಮಂಡಳಿ' ಇತ್ಯಾದಿ ನಾಟಕಗಳಾದರೂ ಸಂಗೀತ 'ಶಾಕುಂತಲ'. 'ಸಂಗೀತ ಸುಭದ್ರ' 'ಸಂಗೀತ ವಿದ್ಯಾಸಾಧನೆ' ಇತ್ಯಾದಿ ಹೆಸರುಗಳಿಂದ ಜನಪ್ರಿಯವಾಗಿದ್ದವು. ನಾಟಕ ಪ್ರಯೋಗದಲ್ಲಿ ಸಂಗೀತ ವಾದ್ಯಗಳಿಗೆ, ವಾದಕರಿಗೆ ಮಹತ್ವದ ಸ್ಥಾನವಿತ್ತು. ನಟರಿಗೆ ಸಂಗೀತ ಹೇಳಿಕೊಡಲು ಮತ್ತು ನಾಟಕಗಳಿಗೆ ಸಂಗೀತ ಸಂಯೋಜಿಸಲು ಕಂಪನಿಗಳಲ್ಲಿ ಹೆಸರಾಂತ ಗವಾಯಿಗಳಿರುತ್ತಿದ್ದರು. ಪ್ರತಿದಿನವೂ ಕಂಪನಿಯ ತಾಲೀಮಿನ ಮನೆಯಲ್ಲಿ ಸಂಗೀತದ ತರಬೇತಿ ನಡೆಯುತ್ತಿತ್ತು. ಸಂಗೀತ ಕಲಿಯಬೇಕೆನ್ನುವವರು ನಾಟಕ ಕಂಪನಿಗಳಿಗೆ ಹೋಗುತ್ತಿದ್ದರು. ನಾಟಕದ ನಾಂದಿಯಿಂದ ಮಂಗಲದವರೆಗೆ ನೂರಾರು ಹಾಡುಗಳು ಒಂದು ನಾಟಕದಲ್ಲಿರುತ್ತಿದ್ದವು. ರಾತ್ರಿಯ ನೀರವತೆಯಲ್ಲಿ ಸುಮಧುರವಾಗಿ ತೇಲಿ ಬರುತ್ತಿದ್ದ ಹಾಡುಗಳಿಂದ ಕಂಪನಿ ನೆಲೆಸಿದ್ದ ಪ್ರದೇಶದಲ್ಲಿ ಗಂಧರ್ವ ಲೋಕ ಸೃಷ್ಟಿಯಾಗುತ್ತಿತ್ತು. ಪ್ರೇಕ್ಷಕರು ಶ್ರೋತ್ರಗಳಾಗಿ ಸಂಗೀತ ರಸದೌತಣ ಸವಿಯುತ್ತಿದ್ದರು. ಕಲಾವಿದರಿಗೆ 'ಗಂಧರ್ವ' ಬಿರುದುಗಳು ಸಲ್ಲುತ್ತಿದ್ದವು. ಶಾಸ್ತ್ರೀಯವಾಗಿ ಸಂಗೀತ ಕಲಿತವರೇ ಕಲಾವಿದರಾಗಿರುತ್ತಿದ್ದರು. ಒಂದು ರಂಗಗೀತೆಯನ್ನು ಸುಶ್ರಾವ್ಯವಾಗಿ ಭಾವಪೂರ್ಣವಾಗಿ ಹಾಡಿದರೆ ಪ್ರೇಕ್ಷಕರು ಮೆಚ್ಚಿ 'ಒನ್ಸ್‌ಮೋರ್' ಹೇಳುತ್ತಿದ್ದರು. ವೃತ್ತಿರಂಗಭೂಮಿಗೆ ಪ್ರೇಕ್ಷಕರೇ ಅನ್ನದಾತರು. ಅವರ ಅಭಿಲಾಷೆಯಂತೆ ಕಲಾವಿದರು ಹಾಡಲೇಬೇಕು. ಕಲಾವಿದರು ಮನಸ್ಸು ಮಾಡದಿದ್ದರೆ ಮಾಲೀಕರೇ ಮುಂದಾಗಿ ಹಾಡಲು ಸೂಚಿಸುತ್ತಿದ್ದರು. ಪ್ರೇಕ್ಷಕರ ಪ್ರತಿಕ್ರಿಯೆ ಅವರಿಗೆ ತುಂಬ ಮುಖ್ಯವಾಗಿತ್ತು. ಅದನ್ನು ಕಡೆಗಣಿಸಿದರೆ ಕಂಪನಿಯ ಆರ್ಥಿಕ ಸ್ಥಿತಿಯ ಮೇಲೆ ಮಾರಕ ಪರಿಣಾಮ ಬೀರಬಹುದು ಎಂಬ ಹೆದರಿಕೆ ಮಾಲೀಕರಿಗಿತ್ತು. ಹೀಗಾಗಿ ನಾಟಕದಲ್ಲಿ ಒಂದು ಪಾತ್ರ ಹಾಡಿ ನಿರ್ಗಮಿಸಿದಾಗ ಕೂಡ ಪ್ರೇಕ್ಷಕ 'ಒನ್ಸಮೋರ್' ಹೇಳಿದರೆ ಆ ಪಾತ್ರಧಾರಿ ಮತ್ತೆ ಬಂದು ಹಾಡಲೇಬೇಕು. ಸನ್ನಿವೇಶದ ಔಚಿತ್ಯ ಪ್ರಶ್ನೆ ಉದ್ಭವಿಸಬಹುದು. ಅದು ಸಾಗ್ರ ಸಂಗೀತ ನಾಟಕಗಳ ಕಾಲ. ರಂಗಭೂಮಿ ಚರಿತ್ರೆಯಲ್ಲಿ ಇದನ್ನು 'ಗಂಧರ್ವಯುಗ' ಎಂದು ಕರೆಯುವರು. ಈ ಅವಧಿಯಲ್ಲಿ ನಾಟಕದ ರಸಾನುಭವ ಅನುಭವಿಸುವವರು ಪ್ರೇಕ್ಷಕರೋ ಶ್ರೋತೃಗಳೋ ಎಂದು ಬಿಡಿಸಿ ಹೇಳುವುದು ಸುಲಭವಾಗಿರಲಿಲ್ಲ. ಐವತ್ತು ವರುಷ ಕಾಲ ಹೀಗೆ ಸಂಗೀತವು ರಂಗಭೂಮಿಯ ಅಂತರಂಗ ಬಹಿರಂಗವನ್ನು ವ್ಯಾಪಿಸಿಕೊಂಡಿತ್ತು. ಈ ಅವಧಿಯಲ್ಲಿ ವಾಮನರಾಯರು ಪ್ರಮುಖರಾಗಿ ಕಂಡು ಬರುತ್ತಾರೆ.

ಸಂಗೀತ ಮತ್ತು ರಂಗಭೂಮಿ ಸಂಬಂಧ ತುಂಬ ಪ್ರಾಚೀನವಾದುದು. ಪ್ರಪಂಚದ ಯಾವುದೇ ಭಾಗದ ರಂಗಭೂಮಿಯ ಉಗಮವು ಸಂಗೀತದ ಮೂಲಕವೇ ಆಗಿರುವಂಥದು. ಸಂಗೀತಕ್ಕೆ ಕುಣಿತ, ಮಾತು, ಇತರ ಪರಿಕರಗಳು ಆಮೇಲೆ ಸೇರಿಕೊಂಡವೆಂದು ರಂಗಭೂಮಿಯ ವಿಕಾಸದ ಕಥನ ವಿವರಿಸುತ್ತದೆ. ನಮ್ಮ ಜನಪದ ಬಯಲಾಟಗಳ ಪರಂಪರೆಯನ್ನು ಗಮನಿಸಿದಾಗ ಈ ಮಾತು ಮನವರಿಕೆಯಾಗುವುದು. ಆಧುನಿಕ ಭಾರತದ ಸಂಗೀತ ನಾಟಕಗಳಿಗೆ ಪಾಶ್ಚಾತ್ಯರ 'ಅಪೆರಾ' ಗಳೇ ಪ್ರೇರಣೆ ಎಂಬುದು ವಿದ್ವಾಂಸರ ಅಭಿಪ್ರಾಯ 'ಅಪೇರಾ' ಎಂಬುದು ಇಡೀ ಕಥೆಯನ್ನು ಸಂಗೀತಕ್ಕೆ ಅಳವಡಿಸಿ ಅಭಿನಯಿಸುವ ನಾಟಕ. ಪಾಶ್ಚಾತ್ಯರು ಗೀತ ನಾಟಕಗಳ ಮೂಲವನ್ನು ಗ್ರೀಕ್ ನಾಟಕಗಳಲ್ಲಿ ಕಂಡುಕೊಂಡಿದ್ದಾರೆ. ಈ ರಂಗ ಪ್ರಕಾರ ಸ್ಪಷ್ಟವಾಗಿ ಜನ್ಮ ತಾಳಿದುದು ಇಟಲಿಯಲ್ಲಿ. 'ಅಪೇರಾ' ಎಂಬ ಪದ ಇಟಲಿ ಭಾಷೆಯ 'ಅಪೇರಾ ಇನ್ ಮ್ಯೂಸಿಕ್' ಎಂಬ ಪದಗುಚ್ಛದ ಹ್ರಸ್ವ ರೂಪ. ಇದರ ಅರ್ಥ 'ವರ್ಕ್ ಇನ್ ಮ್ಯೂಸಿಕ್' ಎಂದು ಇಲ್ಲಿ ಇಡೀ ನಾಟಕ ಗೀತರೂಪದಲ್ಲಿರುತ್ತದೆ. ಇದಕ್ಕೆ ಸಂಗೀತ ಸಂಯೋಜಿಸಿ ಪಾತ್ರಧಾರಿಗಳಿಗೆ ವೇಷಭೂಷಣ, ಹಾಕಿ, ಕಥೆಯನ್ನು ದೃಶ್ಯಗಳಾಗಿ ವಿಂಗಡಿಸಿ ಅಭಿನಯಿಸಲಾಗುತ್ತದೆ'[೮]. ನಮ್ಮ ಜನಪದ ರಂಗ ಪ್ರಕಾರಗಳಾದರೂ ಸಂಗೀತಮಯವಾಗಿದ್ದವು ಎಂಬುದನ್ನು ಗಮನಿಸಬೇಕು.

'ಅಪೆರಾ ಸ್ವರೂಪದ ನಾಟಕವು ಮೊದಲು ೧೫೯೭ರಲ್ಲಿ ಇಟಲಿಯಲ್ಲಿ ಪ್ರದರ್ಶಿತವಾಯಿತು ಅದರ ಹೆಸರು 'ಜಾಕೋಪೊ ಪೆರಿಯಾದಾಪ್ನೆ' ಅದರ ಲೇಖಕ ರಿನ್ನಿಜಿನಿ ಅದಕ್ಕೆ ಸಂಗೀತ ಅಳವಡಿಸಿದವನು ಪೆರಿ ಎಂಬುವವನು. ಅನಂತರ ಅದಕ್ಕೆ ಮನರಂಜನೆಯ ಅಂಶಗಳನ್ನು ಸೇರಿಸಿ ಜನಪ್ರಿಯಗೊಳಿಸಿದವನು ಮಾಂಟೆವರ್ದಿ ಎಂಬುವನು. ಇದು ಯುರೋಪಿನಲ್ಲಿ ಜನಪ್ರಿಯವಾಯಿತು. ಅಪೆರಾಗಳಿಗಾಗಿಯೇ ರಂಗಮಂದಿರಗಳು ನಿರ್ಮಾಣವಾದವು. ಅಪೆರಾದ ಎರಡನೆಯ ಘಟ್ಟ ಫ್ರಾನ್ಸಿನಲ್ಲಿ ವಿಕಾಸವಾಯಿತು. ಮೊದಲಿನ ಪ್ರಯೋಗಗಳಲ್ಲಿ ಮತ್ತು ನೃತ್ಯಾಭಿನಯಕ್ಕೆ ಹೆಚ್ಚು ಒತ್ತು ಇತ್ತು. ಎರಡನೆಯ ಘಟ್ಟದಲ್ಲಿ ಅದೇ ಮುಂದುವರಿಯಿತು. ಇದರ ಸುಧಾರಣೆಯಾದದ್ದು ಜರ್ಮನಿಯಲ್ಲಿ. ಇದಕ್ಕೆ ಇತರ ರಂಗಾಂಶಗಳು ಸೇರಿಕೊಳ್ಳಲು ಕಾರಣನಾದವನು ಜರ್ಮನಿಯ ಖ್ಯಾತ ರಂಗ ನಿರ್ದೇಶಕ ರಿಚರ್ಡ್ ವ್ಯಾಗ್ನರ್ ಇವನು ಹಾಡುಗಾರಿಕೆಗೆ ಇದ್ದ ಪ್ರಾಧಾನ್ಯತೆಯನ್ನು ಕಡಿಮೆ ಮಾಡಿ ವಾದ್ಯ ಸಂಗೀತ, ನೇಪಥ್ಯ ವಿನ್ಯಾಸ ಮತ್ತು ಸಾಹಿತ್ಯಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ತಂದು ಕೊಟ್ಟ. ಅಂದಿನಿಂದ ಅಪೇರಾ ನಾಟಕವನ್ನು ಸಂಗೀತ ನಾಟಕ (ಮ್ಯೂಸಿಕಲ್ ಡ್ರಾಮಾ) ಎಂದು ಕರೆಯಲಾಯಿತು'.[೯] ಸಂಗೀತ ನಾಟಕಗಳು ಪಾಶ್ಚಾತ್ಯನಲ್ಲಿ ತುಂಬ ಜನಪ್ರಿಯವಾದವು.

ಪಾಶ್ಚಾತ್ಯರ ಸಂಗೀತ ನಾಟಕಗಳು ಭಾರತೀಯರಿಗೆ ಪರಿಚಯವಾದದ್ದು ೧೯ನೆಯ ಶತಮಾನದ ಆರಂಭದಲ್ಲಿ. ಬ್ರಿಟಿಷ್ ಅಧಿಕಾರಿಗಳ ಮನರಂಜನೆಗಾಗಿ ಕಲ್ಕತ್ತಾ ಮತ್ತು ಮುಂಬಯಿಗಳಲ್ಲಿ ಅಪೆರಾ

ಪ್ರದರ್ಶನಗಳು ನಡೆದವು. ಇವುಗಳಿಂದ ಆಕರ್ಷಿತರಾಗಿ ಭಾರತೀಯರು ಕೂಡ ಅಪೆರಾಗಳನ್ನು ಅನುಕರಿಸಿದರು. ಆರಂಭದ ಕಂಪನಿ ನಾಟಕಗಳು ಅಪೆರಾ ಮಾದರಿಯಲ್ಲಿಯೇ ಇದ್ದವೆನ್ನಲು ಕೆಲವು ಆಧಾರಗಳು ಸಿಗುತ್ತವೆ. ಅಣ್ಣಾಸಾಹೇಬ ಕಿರ್ಲೋಸ್ಕರ ಅವರಿಗೆ ಮರಾಠೀ ಸಂಗೀತ ನಾಟಕ ಪಿತಾಮಹ ಎಂಬ ಗೌರವವಿದೆ. ಇವರ 'ಸಂಗೀತ ಶಾಕುಂತಲ'ವು ೩೧-೧೦-೧೮೮೦ ರಂದು ಪುಣೆಯಲ್ಲಿ ಪ್ರಯೋಗವಾಯಿತು. ಇಲ್ಲಿಂದ ಒಂದುನೂರು ವರುಷದ ಅವಧಿಯನ್ನು 'ಸಂಗೀತ ನಾಟಕ ಯುಗ' ಎಂದು ಮರಾಠೀ ವಿದ್ವಾಂಸರು ಹೇಳುವರು.

ಮಹಾರಾಷ್ಟ್ರದಲ್ಲಿ 'ಕಿರ್ಲೋಸ್ಕರ ರಂಗಮಂದಿರ'ವನ್ನು ಉದ್ಘಾಟನೆ ಮಾಡುತ್ತಾ (೨೧ ಅಗಸ್ಟ ೧೯೦೯) ಬ್ರಿಟಿಷ ಅಧಿಕಾರಿಯಾದ ಮ್ಯೂರ ಮೆಕುಂಝಿಯು 'ಕಿರ್ಲೋಸ್ಕರ ಅಪೇರಾ ಕಂಪನಿ' ಎಂದೇ ಕರೆದಿರುವನು ಮತ್ತು ಭಾರತೀಯ ಸಂಗೀತ ನಾಟಕಗಳು ಪಾಶ್ಚಾತ್ಯರ ಅಪೆರಾಗಳನ್ನೇ ಹೋಲುತ್ತಿದ್ದವೆಂದು ತನ್ನ ಭಾಷಣದಲ್ಲಿ ತಿಳಿಸಿರುವನು. ಭಾರತೀಯ ಪುರಾಣ ಕಾವ್ಯಗಳಲ್ಲಿಯ ಪ್ರಸಂಗಗಳು ಸಂಗೀತ ನಾಟಕ ಪ್ರಕಾರಕ್ಕೆ ತುಂಬ ಅನುಕೂಲವಾಗಿವೆ ಎಂದು ಮೆಕೆಂಝಿ ಹೇಳಿರುವನು "The performances of this company, as I gather from the repport, are generally given on operatic lines, that is to say, in the intervals of dialogue and dramatic recitals, there are songs accompanied with characteristic music. That, as many of my Indian friends may not be aware, was until comparatively recent times, the style in which opera was conducted in Europe. Gradually, however, the spoken dialogue was replaced by the musical recitative with slender accompaniment the songs being a accompanied by the full orchestra and that again was followed by the displacement more and more of the set airs or songs by an elaborate and fully accompanied recitative unitl in the most modern opera every word is sung; every musical phrase is composed to express the exact sentiment uttered by the singer."[೧೦] ೧೯೦೯ ರಲ್ಲಿಯ ಅಭಿಪ್ರಾಯವಿದು ಕ್ರಿಶ ೧೮೮೦ರ ಪೂರ್ವದಲ್ಲಿ ಯುರೋಪಿನಲ್ಲಿ ಯಾವ ರೀತಿ ಅಪೇರಾ ಪ್ರಯೋಗಗಳು ನಡೆಯುತ್ತಿದ್ದವೋ ಅದೇ ಮಾದರಿಯಲ್ಲಿ ಕಿರ್ಲೋಸ್ಕರರ ನಾಟಕಗಳಿವೆ. ಎಂದು ಸರ್ ಮೇಕೆಂಝಿ ತಿಳಿಸಿರುವನು. ಅಪೇರಾಕ್ಕೂ ಸಂಗೀತ ನಾಟಕಗಳಿಗೂ ಇರುವ ವ್ಯತ್ಯಾಸವೇನೆಂದರೆ ಅಪೇರಾದಲ್ಲಿ ಗದ್ಯ ಸಂವಾದ ಇರುವುದಿಲ್ಲ ಸಂಗೀತನಾಟಕಗಳಲ್ಲಿ ಸಂವಾದವಿರುತ್ತದೆ. ಆರಂಭದ ಸಂಗೀತ ನಾಟಕಗಳಿಗೆ ಸಂವಾದಕ್ಕಿಂತ ಹಾಡಿನ ಪ್ರಮಾಣವೇ ಹೆಚ್ಚಾಗಿರುತ್ತಿತ್ತು. ಕ್ರಮೇಣ ಸಂವಾದ ಭಾಗ ಬೆಳೆಯುತ್ತ ಬಂದಿತೆಂದು ಚರಿತ್ರೆಯಲ್ಲಿ ಕಾಣುತ್ತೇವೆ. ಮರಾಠೀ ಕಿರ್ಲೋಸ್ಕರ ನಾಟಕ ಮಂಡಳಿಗಿಂತ ಹಿಂದಕ್ಕೆ ಹೋದರೆ ವಿಷ್ಣುದಾಸ ಭಾವೆ ಅವರ 'ಸಾಂಗಲಿಕರ ನಾಟಕ ಮಂಡಳಿ' ಯ ಪ್ರಯೋಗಗಳು ಆಗುತ್ತಿದ್ದವು. ಅವು ಕನ್ನಡದ ಕರಾವಳಿ ಭಾಗದ ದಶಾವತಾರಿ ಆಟಗಳನ್ನು ಹೋಲುತ್ತಿದ್ದವು. ಕನ್ನಡ ಬಯಲಾಟಗಳಲ್ಲಿ ಹಾಡುಗಳೇ ಪ್ರಧಾನವಾಗಿದ್ದವು. ಮಾತುಗಳು ಹಾಡಿಗೆ ಪೂರಕವಾಗಿ ಬರುತ್ತಿದ್ದವು. ಒಟ್ಟಿನಲ್ಲಿ ಆಧುನಿಕ ಮರಾಠಿ ರಂಗಭೂಮಿಯ ಆರಂಭದ ಪ್ರಯೋಗಗಳಾಗಲಿ, ಕನ್ನಡದ ಕಂಪನಿ

ನಾಟಕಗಳ ಆರಂಭದ ಪ್ರಯೋಗಗಳಾಗಲಿ ಅಲ್ಲಿ ಸಂಗೀತದ ಪಾತ್ರವೇ ಪ್ರಧಾನವಾಗಿತ್ತು. ರಂಗದ ಮೇಲಿನ ಸಂಗೀತಕ್ಕೆ 'ರಂಗಸಂಗೀತ' ಎಂದು ಕರೆಯಲಾಯಿತು. ಇದಕ್ಕೆ 'ಅಭಿನಯ ಸಂಗೀತ' ವೆಂತಲೂ ಕರೆಯುವುದುಂಟು. ರಂಗಸಂಗೀತ ಎಂಬುದು ಶಾಸ್ತ್ರೀಯ ಸಂಗೀತದ ಒಂದು ಭಾಗವಾಗಿಯೇ ಬೆಳೆಯಿತು. ಶಾಸ್ತ್ರೀಯ ಸಂಗೀತ ಮತ್ತು ಸುಗಮ ಸಂಗೀತ ಇವೆರಡರ ನಡುವಿನ ಒಂದು ಪ್ರಕಾರವಾಗಿ 'ರಂಗಸಂಗೀತ' ಬೆಳೆಯಿತು. ಈ ಪ್ರಕಾರವನ್ನು ಮರಾಠಿ ರಸಿಕರು ಪೋಷಿಸಿ ಬೆಳೆಸಿದಂತೆ ಕನ್ನಡಿಗರು ಬೆಳೆಸಲಿಲ್ಲ. ರಂಗಭೂಮಿಯ ಏರಿಳಿತದ ಜೊತೆಗೇ ಅದು ಹೆಜ್ಜೆ ಹಾಕಿತು.

**ರಂಗ ಸಂಗೀತದ ಸ್ವರೂಪ :**

ನಾಟಕ ಮತ್ತು ಸಂಗೀತ ಎರಡೂ ಸ್ವತಂತ್ರ ಕಲೆಗಳ ಪ್ರಭಾವೀ ಕಲೆಗಳು. ನಾಟಕ ಅಭಿನಯ ಪ್ರಧಾನ ಸಂಗೀತ ಸ್ವರಪ್ರಧಾನ. ಅಭಿಯಾನ ಮತ್ತು ಸಂಗೀತ ಎರಡೂ ಕೂಡಿದರೆ ಅವುಗಳ ಆಕರ್ಷಣೆ ಇನ್ನಷ್ಟು ಹೆಚ್ಚಾಗುವುದು ಸಹಜವೇ. ಬಂಗಾರಕ್ಕೆ ಪರಿಮಳ ಬಂದಂತೆ ಅದರ ಸೊಗಸು. ಹಾಲಿಗೆ ಸಕ್ಕರೆ ಬೆರೆಸಿದಂತೆ ಅದರ ಸವಿ. ಮುಖ್ಯವಾದ ಸಂಗತಿಯೆಂದರೆ ಹಾಲಿಗೆ ಸಕ್ಕರೆ ಬೆರೆಯಬೇಕು ಆದರೆ ಸಕ್ಕರೆಗೆ ಹಾಲು ಬೆರಿಸಿದಂತಾಗಬಾರದು. ಈ ಮಾತು ರಂಗದ ಮೇಲಿನ ಸಂಗೀತದ ಸ್ಥಾನವನ್ನು ಅದರ ಮಿತಿಯನ್ನು ಸೂಚಿಸುತ್ತದೆ.

ಸಂಗೀತವು ರಸಗಳನ್ನು ಪೋಷಿಸುತ್ತದೆ. ಅದು ರಸಗಳ ಭಾಷೆ. ಭಾವಾಭಿವ್ಯಕ್ತಿಯ ಸಮರ್ಥ ಮಾಧ್ಯಮ. ಮಾತಿನಿಂದ ಹೇಳಲು ಸಾಧ್ಯವಾಗದ ಸೂಕ್ಷ್ಮ ಭಾವನೆಗಳನ್ನು ಹಾಡಿನ ಮೂಲಕ ಸಮರ್ಥವಾಗಿ ಹೇಳಬಹುದು ಇತ್ಯಾದಿ ವಿಚಾರಗಳು ಸಂಗೀತದ ಮಹತ್ವವನ್ನು ಹೇಳುತ್ತವೆ. "ಬೆಳಕು ಹಾಗೂ ಧ್ವನಿವರ್ಧಕಗಳಂಥ ರಂಗಪರಿಕರಗಳ ಅಭಾವ ಆಗಿನ ರಂಗಭೂಮಿಗೆ ವಸ್ತು ಸನ್ನಿವೇಶಗಳನ್ನು ಅರ್ಥೈಸಿಕೊಡುವಲ್ಲಿ ಭಾವ ರಸಗಳನ್ನು ಅನುಭವಕ್ಕೆ ತಂದುಕೊಡುವಲ್ಲಿ ಸಂಭಾಷಣೆಯಷ್ಟೇ ಸಂಗೀತವೂ ಕೂಡ ಒಂದು ಸಮರ್ಥ ಮಾಧ್ಯಮವೆನಿಸಿತ್ತು. ಅತ್ಯಂತ ಸೂಕ್ಷ್ಮವಾದ ಸಂಚಾರಿ ಭಾವಗಳ ಅಭಿವ್ಯಕ್ತಿಗೆ ಆಂಗಿಕಾಭಿನಯ ಅತ್ಯಂತ ಸ್ಥೂಲ ಮಾಧ್ಯಮವಾಗಿ ಬಿಡುವ ಅಪಾಯವಿರುತ್ತಿತ್ತು. ಒಂದು ರಸದ ಸಂಚಾರಿ ಭಾವಗಳನ್ನು ಆಂಗಿಕಾಭಿನಯದಿಂದಲೇ ಅರ್ಥೈಸಿಕೊಡುವುದು ಅಸಾಧ್ಯವಾದಾಗ ಸಂಗೀತದ ರಾಗಗಳು ಅದರ ಸ್ವರ, ಅಲಾಪ, ತಾನಗಳು ಅರ್ಥಪೂರ್ಣವಾದ ಸಮರ್ಥ ಪೂರಕಗಳಾಗಿರುತ್ತಿದ್ದವು. ದುಶ್ಯಂತನ ವಿರಹದಲ್ಲಿದ್ದ ಶಕುಂತಲೆಯ ಅವಸ್ಥೆಯನ್ನು ಅನುಭವಕ್ಕೆ ತಂದುಕೊಡಲು ಬಳಸುವ ಸಂಗೀತ ಹೆಚ್ಚು ಪರಿಣಾಮಕಾರಿಯಾಗಿರುತ್ತಿತ್ತು".[೧೧] ಕಾರಣ ಸಂಗೀತ ರಂಗಭೂಮಿಯ ಪರಿಣಾಮಕಾರಿ ಭಾಷೆಯಾಗಿ ಬಳಕೆಯಾಯಿತು. ನಾಟಕದ ಕತೆ, ಕತೆಯ ಓಟ, ಸನ್ನಿವೇಶ, ಪಾತ್ರದ ಪ್ರಸ್ತುತತೆ, ಅಭಿನಯ ಇವುಗಳನ್ನು ಸರಿತೂಗಿಸಿಕೊಂಡು, ಇರುವ ಅಲ್ಪಾವಧಿಯಲ್ಲಿ ಕಲಾವಿದನು ರಂಗಗೀತೆಯನ್ನು ಹಾಡಬೇಕು. ಹಾಡು ದೀರ್ಘವಾದರೆ ಔಚಿತ್ಯ ಕೆಡುತ್ತದೆ. ಆಲಾಪ, ಸ್ವರವಿಸ್ತಾರ ಹೆಚ್ಚಾದರೆ ಶಾಸ್ತ್ರೀಯ ಕಸರತ್ತಾಗುತ್ತದೆ. ಇಂಥ

ಪ್ರಸಂಗಗಳಿಗೆ ಅವಕಾಶ ಕೊಡದೆ ಸ್ವಲ್ಪ ಸಮಯದಲ್ಲಿಯೇ ಭಾವ ಪ್ರಕಟಿಸುವ ರಸ ಪೋಷಿಸುವ ಗಾಯನ ಕೌಶಲ್ಯ ರಂಗನಟ ನಿರ್ವಹಿಸಬೇಕು. ಕತೆಗೆ ಹೊಂದಿಕೊಂಡು ಬರುವ ಈ ರಂಗಸಂಗೀತದ ಸೊಗಸನ್ನು ರಸಿಕರು ಶಾಸ್ತ್ರದ ಚೌಕಟ್ಟಿನಲ್ಲಿ ನೋಡದೆ, ಅದು ನಾಟಕದ ಭಾಗವಾಗಿ ಹೇಗೆ ಬರುವುದು? ಎಂದು ಕೇಳಿ ಆನಂದಿಸುವರು. ಮೊದಲಿನ ನಾಟಕಗಳಲ್ಲಿ ನಟನ ಪ್ರವೇಶ, ನಿರ್ಗಮನ, ಹಾಸ್ಯ, ಶೃಂಗಾರ, ಕರುಣ, ವೀರ, ಯುದ್ಧ ಯಾವುದೇ ಸನ್ನಿವೇಶವಿರಲಿ ಅದನ್ನು ಹಾಡಿನ ಮೂಲಕವೇ ಪ್ರಸ್ತುತಪಡಿಸಲಾಗುತ್ತಿತ್ತು. ಅದಕ್ಕಾಗಿಯೆ ನಾಟಕ ಕಂಪನಿಗಳಲ್ಲಿ ಗವಾಯಿಗಳು ತರಬೇತಿ ನೀಡುತ್ತಿದ್ದರು. ಅದು ಕಲಾವಿದನ ಸ್ವಯಂ ಪ್ರಯತ್ನ, ಪ್ರತಿಭೆ, ಕೌಶಲ್ಯದ ಭಾಗವಾಗಿಯೂ ನಾಟಕದ ಪರಿಣಾಮಕ್ಕೆ ಕಾರಣವಾಗುತ್ತಿತ್ತು. ಕೊಣ್ಣೂರ ಕಂಪನಿ, ಶಿರಹಟ್ಟಿ ಕಂಪನಿಗಳಲ್ಲಿ ನಾಟಕಗಳಿಗೆ ಸಂಗೀತ ಸಂಯೋಜಿಸುವುದಕ್ಕಾಗಿಯೇ ಸಂಗೀತ ನಿರ್ದೇಶಕರಿದ್ದರು. ಸ್ವತಃ ವಾಮನರಾಯರು ಸಂಗೀತದಲ್ಲಿ ವಿದ್ವತ್ತು ಉಳ್ಳವರಾಗಿದ್ದರಿಂದ ಅವರೇ ನಿರ್ದೇಶಕರಾಗಿ, ಸಂಗೀತ ಶಿಕ್ಷಕರಾಗಿ, ಸಂಗೀತಕ್ಕೆ ತಕ್ಕ ರಂಗಗೀತೆಗಳನ್ನು ಬರೆಯುವ ಕವಿಗಳಾಗಿ ರಂಗಭೂಮಿಯ ಮೇಲೆ ಸಂಗೀತ ಧಾರೆಯನ್ನು ಹರಿಸಿದರು.

'ಸಂಗೀತ ನಾಟಕ' ವೆಂಬುದು ಕಲಾವಿದರ ಸಮೂಹ ಸೃಷ್ಟಿ. ನಾಟಕಕಾರ, ಸಂಗೀತಕಾರ, ನಿರ್ದೇಶಕ, ಕಲಾವಿದ ವಾದ್ಯಗಾರರು ಇವರೆಲ್ಲರ ಸಂಯುಕ್ತ ಪ್ರಯತ್ನದ ಫಲ. ಸಂಗೀತ ನಾಟಕ ಬರೆಯುವವನು ಸಾಮಾನ್ಯ ಸಾಹಿತಿಯಾಗಿದ್ದರೆ ಸಾಲದು ಅವನಿಗೆ ಸಂಗೀತದ ಜ್ಞಾನ ಇರಬೇಕು. ಅವನು ಸಂಗೀತಜ್ಞ ಸಾಹಿತಿಯಾಗಿರಬೇಕು. ರಂಗಗೀತೆಗಳಾದರೂ ಕಾವ್ಯ ಲಕ್ಷಣಶಾಸ್ತ್ರದ ಛಂದ-ಬಂಧಗಳ ಕಟ್ಟುಪಾಡುಗಳಿಗೆ ಒಳಗಾಗಿರಬೇಕಾಗಿಲ್ಲ. ಭಾವಾಭಿವ್ಯಕ್ತಿಗೆ ಮಾಧ್ಯಮವಾಗುವಂಥ ಪದ್ಯಗಂಧಿ ರಚನೆಗಳಾಗಿ ಇದ್ದರೆ ಸಾಕು. ರಂಗಗೀತೆಗಳು ಗಂಭೀರ ಕವಿತೆಗಳಾಗಿರದೆ ತಾಳ, ಲಯ ಲಾಲಿತ್ಯಗಳನ್ನೊಳಗೊಂಡಿರಬೇಕು.

ರಂಗಗೀತೆಗೆ ಸಂಯೋಜಿಸುವ ಸಂಗೀತವು ಶಾಸ್ತ್ರೀಯ ನಿಯಮವನ್ನು ಅತ್ಯಂತ ನಿಷ್ಠೆಯಿಂದ ಪಾಲಿಸಬೇಕಾಗಿಲ್ಲ. ಸಾಧ್ಯವಾದಷ್ಟು ಶಾಸ್ತ್ರೀಯ ನಿಯಮಗಳನ್ನು ಪಾಲಿಸಬೇಕು. ರಂಗನಿಷ್ಠೆಗೆ ಬೇಕಾಗುವ ಸ್ವಾತಂತ್ರ್ಯ ಇರಬೇಕು. ನಾಟಕವು ಸಾಹಿತ್ಯಿಕ ಮಾತುಗಾರಿಕೆಯಿಂದ ಜಡವೂ ಆಗಬಾರದು. ಅತಿಯಾದ ಹಾಡುಗಾರಿಕೆಯಿಂದ ಸಂಗೀತ ಕಚೇರಿಯೂ ಆಗಬಾರದು. ನಾಟಕದ ವಸ್ತುವಿನ ಭಾವ ಪ್ರಕಾಶ ಮತ್ತು ರಸಪೋಷಣೆಗೆ ಬೇಕಾಗುವ ರೀತಿಯಲ್ಲಿ ಹಿತಮಿತವಾಗಿ ರಂಗಸಂಗೀತ ಇದ್ದರೆ 'ಸಂಗೀತ ನಾಟಕ'ವು ಯಶಸ್ವಿ ಪ್ರಯೋಗವಾಗಬಹುದು, ಜನಪ್ರಿಯವಾಗಬಹುದು.

ಡಾ. ಶಿವರಾಮ ಕಾರಂತರು ಹೇಳುವಂತೆ "ಗೀತ ನಾಟಕ ಬಿಡಿ ಭಾಗಗಳ ಒಂದು ಗುಚ್ಛವಾಗಿರಲಾರದು. ಬಿಡಿಗೀತ ಒಂದು ಶಿಲ್ಪ ಕೃತಿ. ಆದರೆ ನಾಟಕ ಒಂದು ವಾಸ್ತುವಿದ್ದಂತೆ. ಹತ್ತು ಶಿಲ್ಪ ಸೇರಿದೊಡನೆ ಒಂದು ವಾಸ್ತು ನಿರ್ಮಾಣವಾಗಲಾರದು. ವಾಸ್ತುವಿನಲ್ಲಿ ಸೇರಿದ ಒಂದೊಂದು ಅಂಗಕ್ಕೂ

ಸ್ವತಂತ್ರವಾದ ಚಲುವಿನ ಅಳತೆಯಿಲ್ಲ. ಅದು ಒಟ್ಟು ವಾಸ್ತುವಿನ ಯೋಜನೆ ಚೆಲುವುಗಳನ್ನು ಪ್ರತಿವಾದಿಸುವುದರಲ್ಲಿ ಎಷ್ಟು ಪೂರಕವಾಗುವುದೋ ಅದರ ಮೇಲಿಂದ ಅದನ್ನು 'ಚೆಲುವು' ಎಂದೆಣಿಸಬೇಕು" ಸಂಗೀತ ನಾಟಕಗಳ ಶಿಲ್ಪಕ್ಕೆ ಈ ಮಾತು ಅನ್ವಯಿಸುವುದು.

**ಕನ್ನಡ–ಮರಾಠಿ ರಂಗಸಂಗೀತ:**

ವಾಮನರಾಯರ ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿಯಲ್ಲಿ ಹಿಂದುಸ್ತಾನಿ ಧಾಟಿಗಳ ರಂಗಗೀತೆಗಳು ರಚನೆಯಾದವು. ಹಿಂದುಸ್ತಾನಿ ಸಂಗೀತದಲ್ಲಿ ಸಾಧನೆ ಮಾಡಿದ ಕಲಾವಿದರಿಂದ ಅವು ಜನಪ್ರಿಯವಾದವು. ವಾಮನರಾಯರ ನಾಟಕ ಕಂಪನಿ ಎಂದರೆ ರಂಗ ಸಂಗೀತದ ಗಂಗಾ ಕಾವೇರಿ ಸಂಗಮ ಎಂದು ಹೇಳಬಹುದು. ವಾಮನರಾಯರಿಗಿಂತ ಮೊದಲಿನ ನಾಟಕ ಕಂಪನಿಗಳಲ್ಲಿ ರಂಗಗೀತೆಗಳು ಕರ್ನಾಟಕಿ ಪದ್ಧತಿಯಲ್ಲಿ ಹಾಡಲ್ಪಡುತ್ತಿದ್ದವು. ಕರ್ನಾಟಕ ನಾಟಕ ಪಿತಾಮಹ ಎಂದು ಖ್ಯಾತರಾದ ಶಾಂತಕವಿಗಳ ನಾಟಕಗಳು ಯಕ್ಷಗಾನ ಮೂಡಲಪಾಯ ತಳಹದಿಯ ಮೇಲೆ ರಚನೆಯಾಗಿದೆ. ಕೊಣ್ಣೂರು ನಾಟಕ ಕಂಪನಿಯ ಆರಂಭದಲ್ಲಿ ಬಳ್ಳಾರಿ ಬಸಪ್ಪ ಎಂಬ ಕಲಾವಿದ ಕರ್ನಾಟಕಿ ಪದ್ಧತಿಯಲ್ಲಿಯೇ ಹಾಡುತ್ತಿದ್ದ. ಕ್ರಮೇಣ ಮರಾಠೀ ಧಾಟಿಗಳ ಪ್ರಭಾವ ಕನ್ನಡ ನಾಟಕಗಳ ಮೇಲಾಯಿತು. ವಿಶೇಷವಾಗಿ ಕಿರ್ಲೋಸ್ಕರ ಅವರ ಸಂಗೀತ ಶಾಕುಂತಲ, ಸಂಗೀತ ಸೌಭದ್ರ ನಾಟಕಗಳನ್ನು ನೋಡಿ ಅಲ್ಲಿಯ ರಂಗಗೀತೆಗಳನ್ನು ಕೇಳಿ ಅದೇ ಮಾದರಿಯಲ್ಲಿ ಸಂಗೀತ ಇದ್ದರೆ ಇನ್ನಷ್ಟು ಜನಪ್ರಿಯತೆ ಗಳಿಸಬಹುದು ಎಂದು ನಮ್ಮ ಕಲಾವಿದರು ಹೊಸ ನಮೂನೆಯ ಮರಾಠೀ ರಂಗಗೀತೆಗಳ (ಹಿಂದುಸ್ತಾನಿ) ಧಾಟಿಗಳನ್ನು ಅಳವಡಿಸಿಕೊಂಡರು. ಈ ದಿಶೆಯಲ್ಲಿ ವಾಮನರಾವ ಮಾಸ್ತರ ಸವಣೂರ ಅವರ ಪ್ರಯತ್ನ ಪರಿಣಾಮಕಾರಿಯೆನಿಸಿತು. ಹೆಚ್ಚು ಜನಪ್ರಿಯವಾಯಿತು.

೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಕನ್ನಡ ಮರಾಠಿ, ತೆಲುಗು ಈ ಮೂರು ಭಾಷೆಯ ಧಾಟಿಗಳು ಇಲ್ಲಿಂದ ಅಲ್ಲಿ, ಅಲ್ಲಿಂದ ಇಲ್ಲಿ ಧಾರಾಳವಾಗಿ ಸಂಚರಿಸಿವೆ. ವಾಮನರಾಯರು ತಮ್ಮ ರಂಗಗೀತೆಗಳಿಗೆ ಸೂಚಿಸಿದ ಮರಾಠೀ ಧಾಟಿಗಳು ಮೂಲದಲ್ಲಿ ಕನ್ನಡದಲ್ಲಿಯೋ ತೆಲುಗಿನಲ್ಲಿಯೋ ಇವೆ. ಮರಾಠೀ ರಂಗಭೂಮಿ ಹಿಂದುಸ್ತಾನಿ ಸಂಗೀತವನ್ನು ಸ್ವೀಕರಿಸುವುದಕ್ಕಿಂತ ಮೊದಲು ಕನ್ನಡ ಮತ್ತು ಇತರ ಜನಪದ ರಂಗಭೂಮಿ ಅಥವಾ ಸಂಗೀತದಿಂದ ಪ್ರಭಾವಿತವಾಗಿತ್ತು. ಮರಾಠೀ ಸಂಗೀತ ನಾಟಕ ಪರಂಪರೆಯಲ್ಲಿ ಅಣ್ಣಾಸಾಹೇಬ ಕಿರ್ಲೋಸ್ಕರರ 'ಸಂಗೀತ ಶಾಕುಂತಲ' ಕ್ಕೆ ಪ್ರಮುಖ ಸ್ಥಾನವಿದೆ. ಈ ನಾಟಕದ ಮೂಲಕ ಕೀರ್ತನೆ ಪದ, ಲಾವಣಿ, ಝುಮರಿ, ಖ್ಯಾಲಗಾಯಕಿ, ಗೀತೆ, ಕನ್ನಡ ಜಾನಪದ ಗೀತೆ ಇವುಗಳನ್ನು ಮೊದಲ ಬಾರಿಗೆ ಬಳಸಿದರು. ಇವು ರಸಿಕ ಪ್ರೇಕ್ಷಕರ ಮನಸ್ಸನ್ನು ಸೆಳೆದವು.

"ಅಣ್ಣಾಸಾಹೇಬ ಕಿರ್ಲೋಸ್ಕರ ಅವರು ಬೆಳಗಾವಿ ಜಿಲ್ಲೆ ಸವದತ್ತಿ ಸಮೀಪದ ಗುರ್ಲಹೊಸೂರಿನವರು. ಕನ್ನಡ ಅವರಿಗೆ ಚೆನ್ನಾಗಿ ಬರುತ್ತಿತ್ತು. ಅಲ್ಲದೆ ಕನ್ನಡದಲ್ಲಿ ಕವಿತೆಗಳನ್ನು

ಬರೆದಿದ್ದಾರೆ. ಕಿರ್ಲೋಸ್ಕರರು ನೌಕರಿ ನಿಮಿತ್ತ ಬೆಳಗಾವಿಗೆ ಬರುವುದಕ್ಕಿಂತ ಮೊದಲು ಶ್ರೀಕೃಷ್ಣ ಪಾರಿಜಾತ, ಇತರ ಬಯಲಾಟಗಳನ್ನು ನೋಡಿದ್ದರು. ಪಾರಿಜಾತ ನೋಡಿ ತುಂಬಾ ಪ್ರಭಾವಿತರಾಗಿದ್ದರು. 'ಸ್ತ್ರೀ ಪಾತ್ರಕ್ಕೆ ಸ್ತ್ರೀಯರೇ ಬೇಕು' ಎಂಬ ಕರಾರಿನ ಮೇಲೆ (ಕೌಜಲಗಿ ನಿಂಗಮ್ಮನ ಪಾತ್ರದ ಪ್ರಭಾವ) ಸಾಂಗಲೀಕರ ನಾಟಕ ಮಂಡಳಿಗೆ ಅದನ್ನು ಕೊಟ್ಟರು. ಅಲ್ಲಿಯೂ ಸತ್ಯಭಾಮೆಯ ಪಾತ್ರಕ್ಕೆ ಕಲಾವಿದೆಯರು ಸಿಗಲಿಲ್ಲ. ಆದರೂ ಸ್ತ್ರೀಮುಖಚರ್ಯೆಯ, ನಾಜೂಕು ಹಾವಭಾವದ ಒಬ್ಬ ಸುಂದರ ತರುಣನಿಂದ ಆ ಪಾತ್ರ ಮಾಡಿಸಿ ಪಾರಿಜಾತವನ್ನು ಪ್ರಯೋಗಿಸಿದರಂತೆ".[೨] ಮುಂದೆ ಕಿರ್ಲೋಸ್ಕರರು 'ಶಾಕುಂತಲ' ಬರೆದು ೧೮೮೦ರಲ್ಲಿ ಪುಣೆಯಲ್ಲಿ ಪ್ರದರ್ಶಿಸಿದರು. ಈ ನಾಟಕ ನೋಡಿದ ಖ್ಯಾತ ಮರಾಠೀ ಸಾಹಿತಿ ವಿಷ್ಣು ಶಾಸ್ತ್ರಿ ಚಿಪಳೂಣಕರ ಅವರು 'ಮರಾಠೀ ರಂಗಭೂಮಿಗೆ ಹೊಸ ತಿರುವು ಉಂಟಾಗಿದೆ' ಎಂದು ಹೊಗಳಿದರು.

'ಶ್ರೀ ಕೃಷ್ಣ ಪಾರಿಜಾತ'ವು ಉತ್ತರ ಕರ್ನಾಟಕದ ಅತ್ಯಂತ ಜನಪ್ರಿಯ ಬಯಲಾಟ. ಇದರ ಮಾತು ಸಂಗೀತದ ಪ್ರಭಾವ ಕನ್ನಡ ಕಂಪನಿ ನಾಟಕಗಳ ಮೇಲೆ ಹೇಗೊ ಹಾಗೆ ಮರಾಠೀ ಕಂಪನಿ ನಾಟಕಗಳ ಮೇಲೂ ಆಗಿದೆ. "ಮರಾಠಿ ಸಂಗೀತ ಸೌಭದ್ರ ನಾಟಕದಲ್ಲಿ ಅಣ್ಣಾ ಕಿರ್ಲೋಸ್ಕರರು ಕರ್ನಾಟಕ ಸಂಗೀತ ಮತ್ತು ಕನ್ನಡ ಪದಗಳ ಧಾಟಿಗಳನ್ನು ಬಳಸಿದರು. ಉದಾ: ಕ್ಷೀರಸಾಗರ ನಮ್ಮ ತವರುಮನೆ, ದ್ವಾರಕೆ ನಮ್ಮತ್ತೆ ಮನೆ' ಈ ಪದ "ಪಾಂಡುನೃಪತಿ ಜನಕ ಜಯಾ' ಎಂಬ ಪದಕ್ಕೆ ಧಾಟಿಯಾಗಿ ಬಳಸಿದ್ದು ಜನಜನಿತವಿದೆ. ದಿ. ಹೀರಾಬಾಯಿ ಬಡೋದೆಕರ ಈ ಮರಾಠೀ ಪದವನ್ನು ಬಹಳೇ ಉತ್ತಮವಾಗಿ ಹಾಡುತ್ತಿದ್ದರು. ನರಗುಂದದ ಬಾಬಾಸಾಹೇಬ ೧೮೫೭ರ ಕ್ರಾಂತಿಯಲ್ಲಿ ಭಾಗವಹಿಸಿದ್ದು ಅರಿತ ವಿಷಯ. ಈ ಘಟನೆಯ ಕುರಿತು ಭಿಕ್ಷುಕರು "ಏಕತಾರಿ" ಬಾರಿಸುತ್ತ ಮನೆ ಬಾಗಿಲೆದುರು "ಆಳಿದಾರ ನರಗುಂದ" ಪದ ಹೇಳಿ ಭಿಕ್ಷೆ ಸ್ವೀಕರಿಸುತ್ತಿದ್ದರು. ಕಿರ್ಲೋಸ್ಕರ ತಮ್ಮ "ವೀರಭದ್ರ ಅವತಾರ" ಕೃತಿಯಲ್ಲಿ "ದಕ್ಷವಧೆ ಹಾ ದೇವ ಕಶಾಚಾ" ಪದಕ್ಕೆ ದಾಟಿಯಾಗಿ ಬಳಸಿದ್ದಾರೆ. ಬೆಳಗಾಂವ, ಧಾರವಾಡ ಪರಿಸರದಲ್ಲಿ ವೀರಶೈವ ಮಠಗಳಲ್ಲಿ 'ಚಿಕ್ಕ ಮಕ್ಕಳೆ ಕೇಳಿರಯ್ಯ, ನಿಮಗೆ ಅಕ್ಕರದಿಂದಲಿ ಪೇಳುವೆನಯ್ಯಾ" ಎಂಬ ಪದವನ್ನು ಕಲಿಸುತ್ತಿದ್ದರು. ಕಿರ್ಲೋಸ್ಕರರು ತಮ್ಮ "ಸೌಭದ್ರ" ನಾಟಕದಲ್ಲಿ "ಅರಸಿಕ ಕಿತಿ ಹಾ ಕೇಟಾ' ಪದಕ್ಕೆ ದಾಟಿಯಾಗಿ ಬಳಸಿರುವರು. ಚುರಮುರಿಯವರ ಕಕ್ಕ ಕೃಷ್ಣರಾಯರು ವಕೀಲರು ಮತ್ತು ರಸಿಕ ಕವಿಗಳು 'ಬೆಳಗಾಗ ಬಂತು ಬಿಡೆನ್ನ, ನಾಳೆ ತಡೆಯಾದೆ ಬರುವೆನೋ ಕೇಳೊ ಮೋಹನ್ನಾ" ಪದದ ರಚನೆ ಮಾಡಿದರು. ಮಾತ್ರವಲ್ಲ ಬೆಳಗಾಂವ ಜಿಲ್ಲೆಯ 'ಕಲಾವಂತಿಣಿ'ಯರು ಹಾವಭಾವ ವ್ಯಕ್ತ ಮಾಡುತ್ತ ಇತ್ತೀಚಿನವರೆಗೂ ಹಾಡುತ್ತಿದ್ದರು. ಕಿರ್ಲೋಸ್ಕರರು ತಮ್ಮ "ಶ್ರೀ ಕೃಷ್ಣ ಪಾರಿಜಾತ"ದ ಪದ "ಹಾ ಹಾ ಹೇ ಕೃಷ್ಣ ಮುಕುಂದಾ" ಈ ಪದಕ್ಕೆ ಧಾಟಿಯಾಗಿ ಬಳಸಿದ್ದಾರೆ. ಕನ್ನಡ ಶಾಕುಂತಲ ನಾಟಕದಲ್ಲಿ "ಬೆಳಗಾಯಿತು ಮೂಡಲಲ್ಲಿ" ಎಂಬ ಪದಕ್ಕೆ ಚುರುಮುರಿಯವರು "ಬೆಳಗಾಗ ಬಂತು................." ಪದವನ್ನೇ ಧಾಟಿಯಾಗಿ ಸೂಚಿಸಿದ್ದಾರೆ. "ಬೆದರಬ್ಯಾಡೋ ಮದನಸುಂದರಾ ಆ ಸಖಿಯ ಭಯದಿ'

ಮತ್ತು "ದಯ ಮಾಡಲೊಲ್ಲ್ಯಾ ದಯಾನಿಧೆ' ಪದಗಳನ್ನು ತುರುಮುರಿಯವರು ಮತ್ತು ಕಿರ್ಲೋಸ್ಕರರು ತಮ್ಮ ನಾಟಕಗಳಲ್ಲಿ ಧಾಟಿಯಾಗಿ ಬಳಸಿರುವರು".[೧೩] ಇವುಗಳ ನಾದ ಮಾಧುರ್ಯಕ್ಕೆ ಪ್ರೇಕ್ಷಕರು ತಲೆದೂಗಿ ಹರ್ಷೋದ್ಗಾರ ವ್ಯಕ್ತಪಡಿಸಿದರು. ಈ ಸಂಗೀತವು ಕಿರ್ಲೋಸ್ಕರ ಕಂಪನಿಯ ವಿಶೇಷ ಆಕರ್ಷಣೆಯೆನಿಸಿತು.

ಕಿರ್ಲೋಸ್ಕರರು ಸಂಗೀತ ಬಲ್ಲ ಸುಶಿಕ್ಷಿತ ಕಲಾವಿದರನ್ನು ಹುಡುಕಿ ಕಂಪನಿಗೆ ಸೇರಿಸಿಕೊಂಡರು. ಬಾಲ ಗಂಗಾಧರ ತಿಳಕರು ಕಂಪನಿಯ ಹಿತೈಷಿಗಳಾಗಿ ಶ್ರೇಷ್ಠ ಕಲಾವಿದರನ್ನು ಕೂಡಿಸಲು ನೆರವಾದರು. ಭಾಸ್ಕರ ಬುವಾ ಬಖಲೆ ಹಿಂದುಸ್ತಾನಿ ಸಂಗೀತದಲ್ಲಿ ತಪಸ್ವಿಗಳು. ಇವರು ಕಲಾವಿದರಿಗೆ ಸಂಗೀತ ಹೇಳಿಕೊಡಲು, ನಾಟಕಗಳಿಗೆ ಸಂಗೀತ ಸಂಯೋಜಿಸಲು ಕಿರ್ಲೋಸ್ಕರ ಕಂಪನಿಗೆ ಬಂದರು. ಇಲ್ಲಿಂದ ಕಿರ್ಲೋಸ್ಕರ ಕಂಪನಿಯ ರಂಗಸಂಗೀತ ಹಿಂದುಸ್ತಾನಿಗೆ ಹೊರಳಿತು. ಗೋವಿಂದ ಬಲ್ಲಾಳ ದೇವಳರು ಕಿರ್ಲೋಸ್ಕರರ ಶಿಷ್ಯರು. ರಂಗ ಗೀತೆಗಳನ್ನು ಬರೆಯುತ್ತಿದ್ದರು. ಅಭಿನಯ ಕಲಿಸುತ್ತಿದ್ದರು. ಇವರೆಲ್ಲ ಅಧ್ಯಯನಶೀಲ, ಪ್ರಯೋಗಶೀಲ ರಂಗಕರ್ಮಿಗಳು ಇವರ ಜೊತೆಯಲ್ಲಿ ನಟರಾಗಿದ್ದವರು ಪ್ರಸಿದ್ಧ ಗಾಯಕರು, ಅಭಿನಯಕುಶಲರು.

ವಾಘೂಲಿಕರ, ನಾಟೇಕರ, ಭಾವುರಾವ ಕೋಲ್ಹಟಕರ, ಮೋರೋಬಾ, ಚಿಂತೋಬಾ ಗುರವ, ಮಾಸ್ಟರ್ ಕೃಷ್ಣರಾವ್, ಜೋಗಳೆಕರ, ಗೋವಿಂದರಾವ ಟೇಂಬೆ, ಮಾಸ್ಟರ್ ದೀನಾನಾಥ ಮಂಗೇಶಕರ, ಬಾಲಗಂಧರ್ವ ಕಿರ್ಲೋಸ್ಕರ ಕಂಪನಿಯ ಅತಿರಥ ಮಹಾರಥ ನಟರು. ಒಬ್ಬರಿಗಿಂತ ಒಬ್ಬರು ಗಾಯನದಲ್ಲಿ, ಅಭಿನಯದಲ್ಲಿ ಶ್ರೇಷ್ಠರೆನಿಸಿದ್ದರು. ಇವರ ಕಲೆಯ ಕೌಶಲ್ಯದಿಂದ ಕಿರ್ಲೋಸ್ಕರ ಕಂಪನಿಯ ಹೆಸರು ಮಹಾರಾಷ್ಟ್ರದ ತುಂಬ ಪಸರಿಸಿತು. ನೆರೆಯ ಕರ್ನಾಟಕಕ್ಕೂ ಅದರ ಖ್ಯಾತಿ ಹಬ್ಬಿತು. ಉತ್ತರ ಕರ್ನಾಟಕದಲ್ಲಿ ಆಗಿನ್ನು ಮರಾಠೀ ಸಂಸ್ಥಾನಿಕರಿದ್ದರು. ಜಮಖಂಡಿ, ರಾಮದುರ್ಗ, ಮುಧೋಳ, ಅಂಕಲಿ, ಕುರಂದವಾಡ ಮುಂತಾದ ಕಡೆಗೆ ಮರಾಠೀ ಅರಸರಿದ್ದರು. ಅವರ ಸುತ್ತ ಮರಾಠೀ ರಸಿಕರಿದ್ದರು. ಅವರಿಗಾಗಿ ಮರಾಠೀ ನಾಟಕ ಕಂಪನಿಗಳು ಬರುತ್ತಿದ್ದವು. ಕಿರ್ಲೋಸ್ಕರರ ಕಂಪನಿಯ ಸಂಗೀತ ನಾಟಕಗಳು ಹೊಸ ಸಂಗೀತದಿಂದ ಜನರನ್ನು ಆಕರ್ಷಿಸಿದವು. ಈ ಕಂಪನಿಯ ನಾಟಕಗಳ ನಾದಲೀಲೆಗೆ ಮಾರುಹೋದವರಲ್ಲಿ ವಾಮನರಾವ ಮಾಸ್ತರರೂ ಒಬ್ಬರು. ಇವರ ಚಿಕ್ಕಪ್ಪ ಸಂಗೀತ ಪ್ರೇಮಿಯಾಗಿದ್ದ ಕಿರ್ಲೋಸ್ಕರ ಕಂಪನಿಯ ಶ್ರೇಷ್ಠ ನಟ ಜೋಗಳೇಕರರ ಗೆಳೆಯನೂ ಆಗಿದ್ದ. ವಾಮನರಾಯರಿಗೆ ಚಿಕ್ಕಪ್ಪನ ಮೂಲಕ ಕಂಪನಿ ನಟರ ಪರಿಚಯವಾಯಿತು. ಇವರಲ್ಲಿಯ ಸಂಗೀತದ ಆಸಕ್ತಿ ಸಂಗೀತ ಕಲೆಯ ಶಕ್ತಿ ಅವರಿಗೆ ಪರಿಚಯವಾಯಿತು. ಮರಾಠೀ ನಾಟಕ ಮತ್ತು ನಾಟ್ಯ ಸಂಗೀತದ ಪ್ರಭಾವಳಿ ಇವರನ್ನು ಸೆಳೆಯಿತು. ವಾಮನರಾಯರು ಕಿರ್ಲೋಸ್ಕರ ಕಂಪನಿಯ ಅಭಿಮಾನಿಯಾಗಿ ಅಲ್ಲಿಯ ಕಲೆಯ

ಆರಾಧಕರಾಗಿ ಬೆಳೆದರು. ಇದರ ಪರಿಣಾಮ ಶಾಲೆಯ ಶಿಕ್ಷಕ-ವೃತ್ತಿ ರುಚಿಸಲಿಲ್ಲ ರಾಜಿನಾಮೆ ನೀಡಿ ನಾಟಕದ ಹಾದಿ ಹಿಡಿದರು.

ವಾಮನರಾಯರು ಮರಾಠೀ ರಂಗಸಂಗೀತದ ಸೊಗಸನ್ನು ಕನ್ನಡಕ್ಕೆ ಅನುವಾದಿಸಿ, ಕನ್ನಡ ರಸಿಕರಿಂದ ಮೆಚ್ಚುಗೆ ಗಳಿಸಿದರು. ಇವರ ಕಂಪನಿ, ಕಂಪನಿಯಲ್ಲಿದ್ದ ಕಲಾವಿದರು ಸಂಗೀತ ಸಾಧನೆಯಲ್ಲಿ ಅದ್ಭುತ ಯಶಸ್ಸು ಪಡೆದರು. ಮಲ್ಲಿಕಾರ್ಜುನ ಮನಸೂರ, ಗುರುರಾವ ದೇಶಪಾಂಡೆ, ಬಸವರಾಜ ಮನಸೂರ, ಕೇಶವಭಟ್ಟ ಮಿಶ್ರಿಕೋಟಿ, ರಾಣೆಬೆನ್ನೂರ ಮಲ್ಲಪ್ಪ, ಹೆಸರು ಪಡೆದ ಹಿಂದುಸ್ತಾನಿ ಸಂಗೀತ ಪಂಡಿತರು. ಅಲ್ಲದೆ ಮರಾಠೀ ನಾಟ್ಯಸಂಗೀತವನ್ನು ಕರಗತ ಮಾಡಿಕೊಂಡಿದ್ದರು. ಕನ್ನಡ 'ಸಂತ ಸಖೂ' ನಾಟಕದ 'ಸಕಲ ಜಗದ ಧರ್ಮಾತ್ಮಕ' ಎಂಬ ಪದಕ್ಕೆ "ಝಾಲೆ ಯುವತಿ ಮನಾ' ಎಂಬ ಮರಾಠೀ ನಾಟ್ಯ ಪದವನ್ನೂ 'ಮಹಾನಂದಾ' ನಾಟಕದಲ್ಲಿಯ 'ರನ್ನದಾ ಮೂರುತಿಯೊ ಕಾಂತಿಯೊ' ಪದಕ್ಕೆ 'ಚಂದ್ರಿಕಾ ಹೇ ಜನು' ಎಂಬ ನಾಟ್ಯ ಪದದ ಧಾಟಿ ಇದೆ. ಆದರೆ ಈ ಎರಡೂ ಪದಗಳ ಮೂಲ ತೆಲಗು ಭಾಷೆಯಲ್ಲಿದೆ. "ರಾಮನಾಡು ಶ್ರೀನಿವಾಸ ಅಯ್ಯಂಗಾರರು ರಚಿಸಿದ ಜಾವಡಿಗಳು ಮರಾಠಿ ಮತ್ತು ಕನ್ನಡ ರಂಗಭೂಮಿಗಳಲ್ಲಿ ವಿಜೃಂಭಿಸಿದ ರಂಗಗೀತೆಗಳಾದವು" ಎಂದು ಡಾ.ಎಚ್.ಕೆ. ರಂಗನಾಥರು ಅಭಿಪ್ರಾಯ ಪಟ್ಟಿದ್ದಾರೆ.[೧೪] ವಾಮನರಾಯರ ಅವಧಿಯಲ್ಲಿ ಎರಡು ಭಾಷೆಯ ರಂಗಭೂಮಿಗಳ ಮಧ್ಯೆ ಕೊಡುಕೊಳ್ಳುವಿಕೆ ಧಾರಾಳವಾಗಿ ನಡೆಯಿತು. ಪ್ರೇಕ್ಷಕರನ್ನು ರಂಗಭೂಮಿಯತ್ತ ಆಕರ್ಷಿಸುವ ಸಲುವಾಗಿ ಅವನಿಗೆ ಪ್ರಿಯವಾಗುವ ರಂಗಗೀತೆಗಳನ್ನು, ರಂಗ ಸಂಗೀತವನ್ನು ನಾಟಕದಲ್ಲಿ ಎರಕ ಹೊಯ್ಯಲು ವಾಮನರಾಯರು ತುಂಬ ಶ್ರಮಪಟ್ಟರು ಇದರಿಂದ ರಂಗಗೀತೆಗಳನ್ನು ಕೇಳಿ ಆನಂದಿಸುವ ಪ್ರವೃತ್ತಿ ಪ್ರೇಕ್ಷಕರಲ್ಲಿಯೂ ಬೆಳೆದು ಬರಲು ಸಾಧ್ಯವಾಯಿತು.

**ವಾಮನರಾಯರ ರಂಗಸಂಗೀತ ವೈಭವ:**

ವಾಮನರಾಯರ ರಂಗ ಸಂಗೀತದ ವಿಶೇಷತೆ ಎಂದರೆ ನಾದ ಮಾಧುರ್ಯತೆ ಮತ್ತು ಸಾಹಿತ್ಯದ ಸೊಗಸುಗಾರಿಕೆ. ಇವೆರಡರ ಹದವಾದ ಅಭಿವ್ಯಕ್ತಿ ಪ್ರೇಕ್ಷಕರಿಗೆ ಹೃದ್ಯವೆನಿಸಿತ್ತು. ಜೊತೆಗೆ ದಕ್ಷಿಣಾದಿ ಹಿಂದುಸ್ತಾನಿ ಧಾಟಿಗಳ ಸಮರಸವೂ ಅವರ ರಂಗಗೀತೆಗಳಲ್ಲಿರುತ್ತಿತ್ತು. ಮೈಸೂರು, ಬೆಂಗಳೂರು ಪ್ರದೇಶದಲ್ಲಿ ಸಂಚರಿಸುವಾಗ ಅಲ್ಲಿಯ ಸಂಗೀತಗಾರರಿಂದ ಧಾಟಿಗಳನ್ನು ಸಂಗ್ರಹಿಸಿ ಅವುಗಳಿಗೆ ತಕ್ಕಂತೆ ಹಾಡುಗಳನ್ನು ಬರೆಯುತ್ತಿದ್ದರು. ಮೈಸೂರು ವಾಸುದೇವಾಚಾರ್ಯರು 'ಶಂಭೋ ಮಹಾದೇವ ಶಂಕರ ಗಿರಿಜಾರಮಣ' ಎಂಬ ಹಾಡಿನ ಧಾಟಿ ಹೇಳಲು ವಾಮನರಾಯರು

**'ಗಂಗೇ ಮಹಾದೇವಿ ಮಂಗಳಕರ ಶುಭಚರಿತೇ ॥**

**ಗಂಗೇ ಮಹಾದೇವಿ ಅಂಗಜಪಿತಪದ ಸಂಭವೇ ॥**

**ಶೃಂಗಾರ ತರಂಗ ಶೋಭೆ ತುಂಬ ವಿಮಲ ಚಾರು ಕೀರ್ತೆ' ॥**

ಎಂಬ ರಂಗಗೀತೆ ಬರೆದರು. ಅದನ್ನು 'ಕೃಷ್ಣಾರ್ಜುನರ ಯುದ್ಧ' ನಾಟಕದಲ್ಲಿ ಗಾಲವಮುನಿಯಿಂದ ಹಾಡಿಸಿದರು. ಹೊಸ ಚೀಜು ಸಿಕ್ಕರೆ ಸಾಕು ವಾಮನರಾಯರು ಸೊಗಸಾದ ಹಾಡು ಬರೆಯುತ್ತಿದ್ದರು. ಗುರುರಾವ ದೇಶಪಾಂಡೆ ಅವರು ಹಿಂದುಸ್ತಾನಿ ಸಂಗೀತದಲ್ಲಿ ಸಾಕಷ್ಟು ಸಾಧನೆ ಮಾಡಿದವರು. ಅವರು 'ವಿಧಿಚಾರುಕಾಂತ ಕುಸುಮಾ" ಎಂಬ ಚಾಲಿ ಹೇಳಿದರೆ, ಕೆಲ ಹೊತ್ತಿನ ಮೇಲೆ 'ರಮಣೀಯವಾಸ ಸುಖದಾ' ಎಂಬ ಹಾಡು ಸಿದ್ಧವಾಗುತ್ತಿತ್ತು. 'ಸೈನನ ಸಮಾ ರಹೆ' ಎಂಬ ಮತ್ತೊಂದು ಖ್ಯಾಲ ಚೀಜ್ ಹೇಳಿದಾಗ 'ಕೋಮಲೆ ಸುಭಾಂಗಿಯೆ' ಎಂದು ಸರಸ ಸುಂದರವಾದ ರಚನೆ ರೂಪುಗೊಳ್ಳುತ್ತಿತು. "ಕೃಷ್ಣಾರ್ಜುನರ ಯುದ್ಧ" ನಾಟಕದಲ್ಲಿ ಗುರುರಾಯರ ಹಾಡುಗಾರಿಕೆಯಲ್ಲಿ ಈ ಹಾಡು ಇನ್ನಷ್ಟು ಕಳೆ ಕಟ್ಟುತ್ತಿತ್ತು. 'ಭಕ್ತಿ ಭಾವ ಥ್ಯಾ ಹಾ ಸೇವಾ' ಎಂಬ ಬಾಲಗಂಧರ್ವರ ಧಾಟಿಯನ್ನು ಗುರುರಾಯರು ಸೂಚಿಸಿದಂತೆ ಒಂದು ಸಂಜೆ ಇಬ್ಬರೂ ವಾಯು ಸಂಚಾರ ಮುಗಿಸಿಕೊಂಡು ಬರುವ ಹೊತ್ತಿಗೆ ಹಾಡು ಮಾಸ್ತರರ ತಲೆಯಲ್ಲಿ ತಯಾರಾಗಿತ್ತು. 'ಹ್ಞಾ ಗುರುರಾವ ಬರಕೊಳ್ಳಿ, ನಿಮ್ಮ ಹಾಡು' ಎಂದು ಮಾಸ್ತರರು ತಮ್ಮ ರಚನೆಯನ್ನು ಹಾಡಿ ತೋರಿಸಿದರು.[೧೫] ಸಾಹಿತ್ಯಕ್ಕೆ ತಕ್ಕ ಸಂಗೀತ, ಸಂಗೀತಕ್ಕೆ ತಕ್ಕ ಸಾಹಿತ್ಯ ಸಂಯೋಜಿಸುವ ಪ್ರತಿಭೆ ವಾಮನರಾಯರದಾಗಿತ್ತು.

ರಂಗಗೀತೆಗಳನ್ನು ಹಾಡುವ ಕಲೆಯೂ ವಾಮನರಾಯರಿಗೆ ಸಿದ್ಧಿಸಿತ್ತು. ಸಂತಸಖೂಬಾಯಿ ನಾಟಕದಲ್ಲಿ ವಾಮನರಾಯರದು ಸಖೂಬಾಯಿಯ ಪತಿ–ಮಾಧವರಾಯನ ಪಾತ್ರ. ತಾಯಿಯ ಮಾತು ಕೇಳಿ ಹೆಂಡತಿಗೆ ತೊಂದರೆ ಕೊಟ್ಟ ಬಗ್ಗೆ ಆ ಮೇಲೆ ಪಶ್ಚಾತ್ತಾಪ ಆಗುವದು. ಆಗ ಯಮನ ರಾಗದಲ್ಲಿ–

**"ಕೋಮಲೆ ನಾನು ನೀಚತಮನೆ ನಿರ್ದಯನೆ ವೃಥಾ ಬಳಲಿಸಿದೆನೆ"**

ಅತ್ಯಂತ ಭಾವಪೂರ್ಣವಾಗಿ ಹಾಡುತ್ತಿದ್ದರಂತೆ ಮಾಧವನ ಅಸಹಾಯಕತೆ, ಮುಗ್ಧತೆ ಹಾಡಿನಲ್ಲಿ ಜೀವವಾಗಿ ಹರಿದಾಡುತ್ತಿತ್ತು. 'ಶೃಂಗಾರ ರಸದ ನಿರೂಪಣೆಯಲ್ಲಿಯೂ ಅದೇ ಪರಿಣತಿ, 'ವನಸೌಭಾಗ್ಯವೋ, ಲಾವಣ್ಯರಾಶಿಯೊ ಶ್ರೀಯೊ ಎಂಬ ಹಾಡಿಗೆ ಒನ್ಸಮೋರ್ ಅಥಾಣಾ ಚೀಜಿನಲ್ಲಿ ಎಂದಿಗೆ ಮನತಾಪ ಹೋಗುವುದೋ ಕಾಣೆ' ಎಂದು ಹಾಡುತ್ತಿದ್ದರೆ, ಲಲಿತರಾಗದಲ್ಲಿ 'ಖಲಮತಿ ನಾ ನಿಜದೆ ಪಾಪಿಯಾದೆ" ಎಂದು ಹಾಡುತ್ತಿದ್ದರೆ ಪ್ರೇಕ್ಷಕರು 'ವ್ಹಾ ವ್ಹಾ' ಎಂದು ಮೆಚ್ಚುಗೆ ಸೂಚಿಸಿ ಅದ್ಭುತ ಕರತಾಡನದ ಪ್ರತಿಕ್ರಿಯೆ ವ್ಯಕ್ತ ಪಡಿಸುತ್ತಿದ್ದರಂತೆ.[೧೬] 'ವೀರ ಅಭಿಮನ್ಯು' ನಾಟಕದಲ್ಲಿ ವಾಮನರಾಯರು ಕೃಷ್ಣನ ಪಾತ್ರದಲ್ಲಿ ಅರ್ಜುನನ ಪಕ್ಷವಹಿಸಿ ಸೈಂಧವನ ವಧೆಗಾಗಿ ಸುದರ್ಶನ ಚಕ್ರದ ನೆರವು ಕೋರಿ'

**'ಮಮ ಪಾಂಡವಾ ಪ್ರಿಯಾ ।**

**ಸುಖ ಶ್ರೀಯಾದೆಯಾ ಮದೀಯಾ' ॥**

ಎಂದು ಭೈರವಿ ರಾಗದಲ್ಲಿ ಹಾಡುವಾಗ ಪ್ರೇಕ್ಷಕ ವೃಂದ ಭಕ್ತಿ ಭಾವದಿಂದ ತಲ್ಲೀನರಾಗಿ, ಮೈಯಲ್ಲಾ ಕಿವಿಯಾಗಿ ಕೇಳುತ್ತಿದ್ದರಂತೆ. ರಾಯರ ಹಾಡುಗಾರಿಕೆಯಲ್ಲಿ ಅವರ ಧ್ವನಿ, ಆಲಾಪ, ಸ್ವರ ವಿಸ್ತಾರ, ಶಾಸ್ತ್ರ,

ಶಿಸ್ತು, ಭಾವ ಪ್ರಕಟ ಎಲ್ಲವೂ ಒಂದು ಕಲಾಕೃತಿಯಾಗಿ ರೂಪಗೊಳ್ಳುತ್ತಿದ್ದವೆಂದು ತಿಳಿದು ಬರುವುದು. ಅಂದಿನ ಸಂಗೀತಬಲ್ಲ ಕಲಾವಿದರು ವಾಮನರಾಯರ ಗಾಯನಕಲೆಯನ್ನು ಮೆಚ್ಚಿ ಮಾತನಾಡಿದ್ದಾರೆ. ಅವರ ಮಾರ್ಗದರ್ಶನದಲ್ಲಿ ಪಳಗಿದ, ಶ್ರೇಷ್ಠ ಗಾಯನ ಚತುರರೆನಿಸಿದ ಕಲಾವಿದರೂ ತಾವು ವಾಮನರಾವ ಮಾಸ್ತರರ ಶಿಷ್ಯರೆಂದು ಅಭಿಮಾನದಿಂದ ಹೇಳಿ ಕೊಂಡಿರುವರು.

ವಾಮನರಾಯರ ಗೀತ-ಸಂಗೀತದ ಸಿರಿಯೆ ಸೂರೆಯಾದುದನ್ನು ಅವರ 'ವೀರ ಅಭಿಮನ್ಯು' ನಾಟಕದಲ್ಲಿ ಕಾಣುತ್ತೇವೆ. ಅವರ ಹುಬ್ಬಳ್ಳಿಯ ಕ್ಯಾಂಪಿನಲ್ಲಿ ಈ ವೀರ ಅಭಿಮನ್ಯು (ಮರಾಠಿಯಲ್ಲಿ ಶುಕ್ಲ ಅವರ 'ಸಿಂಹಾ ಚಾ ಛಾವಾ' ದ ಕನ್ನಡ ರೂಪಾಂತರ) ನಾಟಕದ ಗೀತಗಳೆಲ್ಲವೂ ಅವರವೆ ಗೀತಗಳು ಅನುವಾದಿತವಾಗಿರಲಿಲ್ಲ. ಈ ನಾಟಕದೊಳಗಿನ ಎಲ್ಲ ೬೪ ಪದಗಳೂ ನನಗೆ ಇಂದಿಗೂ ಧಾಟಿ ಸಹಿತವಾಗಿ ಕಂಠೋಕ್ತವಾಗಿವೆ.

ಮೊದಲಿನ ನಾಂದಿಗೀತವನ್ನೆ ನೋಡಬಹುದು. ಅದು ಹಿಂಡೋಲ ರಾಗದಲ್ಲಿದೆ.

ವಾರನಿಧಿ ಶಯನಾ । ನೀರಜಾಸನ । ವಂದಿತಾ ಪವಮಾನವಿನುತಾ ॥ ಪ ॥

ಮಥಿಸಿ ಕಡಲನು ಅತಿವಿಲಾಸದಿ । ರಿತಿಜರಿಗೆ ವರಸುಧೆಯನುಣಿಸಿದ ॥ ೧ ॥

ಬಲಿಯ ಯಜ್ಞದಿ ಬೇಡಿ ದಾನವ । ಛಲದಿ ಬೆಳೆಸಿದೆ ಭಕ್ತ ಮಹಿಮೆಯ ॥ ೨ ॥

ಪರಮ ಹರುಷದಿ ನಾಟ್ಯ ಕುಸುಮವ । ಚರಣಕರ್ಪಿಸಿ ಧನ್ಯನಾಗುವೆ ॥ ೩ ॥

ವೀರ ಅಭಿಮನ್ಯು ತನ್ನ ನವವಧುವಾದ ಉತ್ತರಯೊಡನೆ ಶೃಂಗಾರ ಮಗ್ನನಾಗಿರುವಾಗ ಅತ್ತ ಕೌರವರೊಡನೆ ಯುದ್ಧದ ಕರೆ ಬಂದಾಗ, ದೇಸ್ಕಾರ ರಾಗದಲ್ಲಿ ವೀರಾವೇಶದಿಂದ ಹೇಳುವ ಪದ:

**ಕೊಡು ಯೆನಗಾಜ್ಞೇಯಾ । ಜನನಿತವ ॥ ಪ ॥**

**ಬಿಡು ನೀ ಭಯವಾ । ನೀಡು ಅಭಯಾ ।**

**ಬಾಲನೆಂಬ ಮೋಹಾ ಬಿಡು ಮಾತೆ । ಬಾಲನಲ್ಲ ರಿಪು ಕಾಲಾಂತಕನೆ ॥ ೧ ॥**

ತಾಯಿ ಸುಭದ್ರೆ ವೀರಮಾತೆಯಾಗಿ ಹರಸುವ 'ಹರನಾಮುರ ಸುಮುರ ಸುಖದಾಂ । ಜಗತಮೇ ಜೀವನದೋ ದಿನಕಾ ॥' ಎಂಬ ಹಿಂದೀ ಭಜನೆಯ ಚಾಲೀ ಮೇಲಿನ (ಚಾಲೀ ಕೊಟ್ಟವರು ಮಲ್ಲಿಕಾರ್ಜುನ ಮನ್ಸೂರ ಅವರು. ಆ ಚಾಲಿಯ ಮೇರೆಗೆ ಅಲ್ಲಿಂದಲ್ಲಿಯೆ ಮಾಸ್ತರರು ಗೀತ ರಚಿಸಿದರು):

**ಪೋಗು ಪರಾಕ್ರಮಿಯೆ । ಸಮರಕೇ ॥ಪ॥ ತೋರಿಶೌರ್ಯಾ ವೈರಿ ನಿಕರವ ।**

**ನಾಶಗೊಳಿಸು ತನಯಾ । ಧರಾತಲದಾ ನೀ ಮಹಾ ಸುಯಶವ । ನೈದು**

**ಕುಲೋದ್ಧಾರಾ ॥ ಸಮರಕೆ ॥**

ಶ್ರೀಕೃಷ್ಣನ ಪಾತ್ರದಲ್ಲಿ ವಾಮನರಾವ ಮಾಸ್ತರರು 'ಮೀಯಾ ಮಲ್ಹಾರ' ರಾಗದಲ್ಲಿ ತಾವೇ ರಚಿಸಿ, ತಾವೇ ಹಾಡುವ ಈ ತಾತ್ವಿಕ, ಭಗವದ್ಗೀತಾ ಸಾರವೆನುವಂತಹ ಗೀತವಿದು:

**ಈ ಭವಸಾಗರದಿ । ಸಮಭಾವಾ ಮನಕೇ ಶಾಂತಿ ॥ ಪ ॥**

**ವಿಕಾರ ಮತಿಗೆ ವಶವಾಗಿರದೆ । ಶೋಕ ತಾಪಕೆ ವ್ಯಸನಗೈಯದೆ**

**ಏಕಭಾವದಿ ಎನ್ನ ಭಜಿಸುವವ । ಲವೋಕದೊಳುತ್ತಮನೇ ಪಾರ್ಥಾ ॥ ೧ ॥**

ಎನ್ಕೆಯವರು ವಿವರಿಸಿದಂತೆ ಮಂದ್ರದಿಂದ ತಾರಸಪ್ತಕದವರೆಗೂ ಲೀಲಾವಿಲಾಸದಿಂದ ಸಂಚರಿಸಿ ಬರುವ ಅವರ ಶಾರೀರ, ಸಂಗೀತ ಬುದ್ಧಿಮತ್ತೆಯಿಂದೊಡಗೂಡಿ ಉತ್ತಮ ಶಾಸ್ತ್ರೀಯ ಗಾಯಕರು ತೋರಬಹುದಾದ ಸಂಗೀತ ಕಲಾ ಕುಸುರಿಯನ್ನೆಲ್ಲಾ ತಮ್ಮ ರಂಗಸಂಗೀತದಲ್ಲಿ ತುಂಬಲು ಸಮರ್ಥರಾಗಿದ್ದರು. ಶಾರೀರ ಅವರಿಗೆ ದೈವದತ್ತ ವರವಾಗಿತ್ತು. ಗಾಯನಚಾತುರ್ಯವನ್ನು ಸಾಧನೆಯಿಂದ ಕರಗತ ಮಾಡಿಕೊಂಡಿದ್ದರು. ವಾಮನರಾಯರು ಆಯಾ ಸನ್ನಿವೇಶ, ಪಾತ್ರಗಳ ಬಗೆಗಿನ ತಮ್ಮ ದರ್ಶನವನ್ನು ರಂಗಸಂಗೀತದ ಮೂಲಕ ಪರಿಣಾಮಕಾರಿಯಾಗಿ ಪ್ರದರ್ಶಿಸುತ್ತಿದ್ದರು.

ಪಾರ್ವತೀ ಸತ್ವ ಪರೀಕ್ಷಾ - ನಾಟಕದಲ್ಲಿ ಗಂಗೂಬಾಯಿ ಗುಳೇದಗುಡ್ಡ - ವಾಮನರಾವ ಮಾಸ್ತರರ ಹಾಡುಗಳು 'ಸಂದೇಹ ಸಾಮ್ರಾಜ್ಯ' ದಲ್ಲಿ ಅಶ್ವಿನಿಶೇಠ ಶತತಾರೆ ಪಾತ್ರಗಳಲ್ಲಿ ಇದ್ದ ಹಾಡುಗಳು. ಕೃಷ್ಣಾರ್ಜುನರ ಯುದ್ಧ ನಾಟಕದಲ್ಲಿ ನಾರದನಾಗಿ ಸಂಗನಬಸಪ್ಪ ಕುಕನೂರ ಅವರ ಹಾಡುಗಾರಿಕೆ ವೀರ ಅಭಿಮನ್ಯು ನಾಟಕದಲ್ಲಿ ಶಕುನಿ ಪಾತ್ರದಲ್ಲಿ ಮಲ್ಲಿಕಾರ್ಜುನ ಮನಸೂರರ ಹಾಡುಗಾರಿಕೆ. ವಿಶ್ವಗುಣಾದರ್ಶ ಕಂಪನಿಯಲ್ಲಿ ಇತಿಹಾಸ ನಿರ್ಮಿಸಿದವು.

ವಾಮನರಾವ ಮಾಸ್ತರರ ರಂಗಗೀತೆಗಳಿಗೆ ಸ್ವರ ಪ್ರಸ್ತಾರ ಹಾಕಿದ ಡಾ॥ ಶ್ರೀಮತಿ ಸುಮಿತ್ರಾ ಜಿ. ಹಿರೇಮಠ ಅವರು ಹೇಳುವಂತೆ - ಶ್ರೀ ವಾಮನರಾವ ಮಾಸ್ತರರು ಸ್ವತಃ ಒಬ್ಬ ಶ್ರೇಷ್ಠ ಶಾಸ್ತ್ರೀಯ ಸಂಗೀತಗಾರರಾಗಿದ್ದರೆಂದು ಅವರು ರಂಗಗೀತೆಗಳಿಗೆ ಸಂಯೋಜಿಸಿದ ರಾಗಗಳಿಂದ ಹಾಗೂ ತಾಳಗಳಿಂದ ನಿರೂಪಿತವಾಗುತ್ತದೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ 'ಖಯಾಲ ಗಾಯನ ಶೈಲಿ'ಯು ಸಂಪೂರ್ಣವಾಗಿ ರಾಗದ ಶಾಸ್ತ್ರೀಯ ನಿರೂಪಣೆಯಿಂದ ಕೂಡಿದ್ದರೆ, 'ಠುಮರಿ ಗಾಯನ ಶೈಲಿ'ಯು ಭಾವರಸ ಪ್ರಧಾನವಾಗಿದ್ದು ರಂಗಸಂಗೀತಕ್ಕೆ ಹೆಚ್ಚು ಪೂರಕವಾಗಿರುತ್ತದೆ. ಶ್ರೀ ವಾಮನರಾವ ಮಾಸ್ತರರು ರಾಗ ಸಂಗೀತದ ಶಾಸ್ತ್ರೀಯತೆಯನ್ನೊಳಗೊಂಡ ಅನೇಕ ಅಮೋಘ ರಾಗಗಳನ್ನು ಅಂದರೆ ಅಥಾಣಾ, ಭಾಗೇಶ್ರೀ, ಬಿಹಾಗ, ಸಾರಂಗ, ಶಂಕರಾ, ಭೂಪ, ಮಲ್ಹಾರ, ಬಸಂತ, ಕೇದಾರ, ಮಿಯಾಮಲ್ಲಾರ, ಜೈಜೈವಂತಿ, ಪೂರ್ವಿ, ಪೂರಿಯಾ, ಜೀವನಪಪುರಿ ಮುಂತಾದವುಗಳನ್ನು ರಂಗಗೀತೆಗಳ ಸ್ವರಸಂಯೋಜನೆಗೆ ಅಳವಡಿಸಿಕೊಂಡಿದ್ದಾರೆ ಅದರಂತೆ ಠುಮರಿ, ಗಾಯನ ಶೈಲಿಯ ಪ್ರಚಲಿತ ರಾಗಗಳಾದ ಖಯಾಜ, ಕಾಫಿ, ದೇಸ ಭೈರವಿ, ಪೀಲೂ, ತಿಲಕಾಮೋಧ, ಝಿಂಝೋಟಿ, ಮಾಂಡ, ತಿಲಂಗ, ಹಮೀರ ಮುಂತಾದವುಗಳಲ್ಲಿ ರಂಗಗೀತೆಗಳಿಗೆ ಸ್ವರಸಂಯೋಜಿಸಿದ್ದಾರೆ. ಅಷ್ಟೇ ಅಲ್ಲದೆ ಈ

ರಂಗಗೀತೆಗಳನ್ನು ಪ್ರಮುಖವಾದ ಮತ್ತು ಪ್ರಚಲಿತವಿದ್ದ ಎಲ್ಲ ತಾಳಗಳಲ್ಲಿ ಅಂದರೆ ತೀನತಾಲ, ಏಕತಾಲ, ದಾದರಾ, ಕೆಹರವಾ, ಧುಮಾಳಿ, ಪಂಜಾಬಿ, ಧಮಾರ, ದೀಪಚಂದಿ, ಅಡಾಚಾತಾಲಗಳಲ್ಲಿ ಸಂಯೋಜಿಸಿದ್ದಾರೆ. ಇವರ ನಾಟಕದ ರಂಗಗೀತೆಗಳ ಸ್ವರ ಹಾಗೂ ತಾಳಗಳ ಸಂಯೋಜನೆಯಲ್ಲಿ ಕಂಡು ಬರುವ ಇನ್ನೊಂದು ವೈಶಿಷ್ಟ್ಯವೆಂದರೆ, ಇವರು ಕರ್ನಾಟಕ ಸಂಗೀತ ಪದ್ಧತಿಯ ರಾಗಗಳಾದ ಹಂಸಧ್ವನಿ, ಸಾವೇರಿ, ಆನಂದಭೈರವಿ, ಕಾಂಬೋಜಿ, ಕರ್ನಾಟಕೀ ತೋಡಿ ಮುಂತಾದವುಗಳನ್ನು ಹಾಗೂ ಝಂಪಾ, ಕೆಹರವಾ ರೂಪಕ, ಆದಿತಾಳ ಮುಂತಾದ ತಾಳಗಳ ಪ್ರಯೋಗವನ್ನು ನೋಡಿದಾಗ ಇವರು ಕರ್ನಾಟಕ ಸಂಗೀತ ಪದ್ಧತಿಯ ಶ್ರೇಷ್ಠಗಾಯಕರೆಂಬುದು ತಿಳಿದುಬರುತ್ತದೆ. ಇವರು ರಂಗಗೀತೆಗಳಿಗೆ ಹೆಚ್ಚಾಗಿ ಖಯಾಜ, ಭೈರವಿ, ಸಾರಂಗ, ಅಥಾಣಾ, ಪಹಡಿ ರಾಗಗಳನ್ನು ಬಳಸಿರುವುದು ಕಂಡುಬರುತ್ತದೆ. ಹೀಗೆ ಸಂಗೀತದ ದೃಷ್ಠಿಯಿಂದ ಇವರ ರಂಗಗೀತೆಗಳು ಬಹಳ ಮಾಧುರ್ಯದಿಂದ ಕೂಡಿವೆ ಮತ್ತು ಆ ಸನ್ನಿವೇಶಕ್ಕೆ ತಕ್ಕಂತೆ ರಚಿಸಿದ ರಂಗಗೀತೆಗಳ ಸಾಹಿತ್ಯವೂ ಮಾರ್ಮಿಕವಾಗಿದ್ದು ಆ ಸನ್ನಿವೇಶದ ಭಾವಕ್ಕೆ ತಕ್ಕಂತೆ, ಆ ರಂಗಗೀತೆಗಳಿಗೆ, ಆ ರಸಭಾವದ ರಾಗಗಳ ಜೋಡಣೆ ಮಾಡಿರುವುದು. ಅವರ ಸಂಗೀತ ಜ್ಞಾನದ ಅನನ್ಯತೆಯ ದ್ಯೋತಕವಾಗಿದೆ. ರಂಗಗೀತೆಗಳಲ್ಲಿ ಅವರು ಬಳಸಿರುವ ಪ್ರಾಸಬದ್ಧವಾದ ಪದಗಳ ಜೋಡಣೆ ಅತ್ಯಂತ ಮನೋಜ್ಞವಾಗಿದೆ ಮತ್ತು ಗಾಯಕನಿಗೆ ಈ ರೀತಿಯ ರಚನೆಗಳನ್ನು ಹಾಡಲು ಹೆಚ್ಚಿನ ಸ್ಫೂರ್ತಿಯನ್ನು, ಪ್ರೇರಣೆಯನ್ನು ನೀಡುತ್ತವೆ ಜೊತೆಗೆ ರಂಗಗೀತೆಗಳ ರಾಗದ ಸಂಪೂರ್ಣ ರಸಭಾವದೊಂದಿಗೆ, ಗೀತೆಗಳ ಭಾವಾರ್ಥವನ್ನು ಪ್ರಸ್ತುತಪಡಿಸಲು ಪೂರಕವಾಗುತ್ತಿವೆ. ಅವರು ತಿಳಿಸಿರುವ ತಾಳಗಳಲ್ಲಿ ಹಾಡಲು ಸೂಕ್ತವಾಗುವಂತೆ, ರಂಗಗೀತೆಗಳಲ್ಲಿ ಮಾಡಿರುವ ಪದಗಳ ಜೋಡಣೆ ಅತ್ಯಂತ ಸುಂದರವಾಗಿದೆ. ಹೀಗಾಗಿ ಇವರ ನಾಟಕದ ಹಾಡುಗಳನ್ನು ಹಾಡಿ ಅನೇಕ ಹಿರಿಯ ಕಲಾವಿದರು ತಮ್ಮ ಕಲಾಪ್ರೌಢಿಮೆಯನ್ನು ಪ್ರಚುರ ಪಡಿಸಿದ್ದಾರೆ.

**ಅಡಿ ಟಿಪ್ಪಣೆಗಳು:**

೧. ನಾಟ್ಯಭೂಷಣ ಪ್ರ. ಸಂ ಡಾ॥ ಎಮ್. ಎಮ್. ಕಲಬುರ್ಗಿ– ಪು ೯೪

೨. ಕನ್ನಡ ರಂಗಪರಂಪರೆ (ಪ್ರಹ್ಲಾದ ಮುದಗಲ್) ವೃತ್ತಿರಂಗಭೂಮಿಯ ಕನ್ನಡ ಸಂವೇದನೆ (ಡಾ॥ ರಾಮಕೃಷ್ಣ ಮರಾಠೆ) ನೋಡಿರಿ

೩. ಕನ್ನಡ ರಂಗಭೂಮಿ ನಡೆದು ಬಂದ ದಾರಿ, ಸಂ. ಶ್ರೀರಂಗ ಪು ೪೦೮

೪. ನಟ ನಾಟಕಕಾರ ವಾಮನರಾವ ಮಾಸ್ತರ – ಎನ್ಕೆ ಪು ೩೫

೫. ಸಂಶಯ ಕಲ್ಲೋಳ, ಗೋವಿಂದ ಬಲ್ಲಾಳ ದೇವಳ– ಪು ೧

೬. ರಂಗಕ್ಕೊಂದಿಷ್ಟು ಹತ್ತಿರ– ಲಿಂಗದೇವರು ಹಳೇಮನೆ – ಪು ೧೨೦

೭. ನಾಟಕದ ನೆಲೆಗಳು– ಡಾ॥ ಎಮ್. ಎಮ್. ಕಲಬುರ್ಗಿ– ಸಂ. ಡಾ॥ ರಾಮಕೃಷ್ಣ ಮರಾಠೆ ಪು ೫೩

೮. ಕಂಪನಿ ನಾಟಕಗಳ ಭಾಷೆ– ಡಾ॥ ಎಚ್ ಎಮ್ ಮಹೇಶ್ವರಯ್ಯ, ಕನ್ನಡ ನಾಟಕಗಳಲ್ಲಿ ಭಾಷೆ ಸಂ. ಡಾ॥ ಸಂಗಮೇಶ ಸವದತ್ತಿಮಠ– ಪು ೫೯

೯. ಸಂಗೀತ ಪ್ರಧಾನ ನಾಟಕಗಳು – ಲಿಂಗದೇವರು ಹಳೇಮನೆ– ಪು ೨೧೦

೧೦. ಅದೇ ಅದೇ ಪು ೨೧೧

೧೧. ಮರಾಠಿ ನಾಟ್ಯ ಸಮೀಕ್ಷೆ– ಡಾ॥ ರಾಮಚಂದ್ರ ಶಂಕರ ವಾಳಿಂಬೆ– ಪು ೩೭

೧೨. ಉದ್ಧರಣೆ– ಡಾ॥ ಎಸ್. ಎಸ್. ಕೋತಿನ– ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ಡಾ॥ ರಾಮಕೃಷ್ಣ ಮರಾಠೆ– ಪು ೩೨೬

೧೩. ಕನ್ನಡ ರಂಗ ಪರಂಪರೆ ಡಾ॥ ಪ್ರಹ್ಲಾದ ಮುದಗಲ್ ಪು ೧೬

೧೪. ನಾಟ್ಯಭೂಷಣ ಪ್ರ. ಸಂ ಡಾ॥ ಎಮ್. ಎಮ್. ಕಲಬುರ್ಗಿ– ಪು ೯೫

೧೫. ಉದ್ಧರಣೆ– ಕನ್ನಡ ಮರಾಠಿ ರಂಗಸಂಗೀತ– ಪ್ರಹ್ಲಾದ ಮುದುಗಲ್– ಪು ೩೩೫

೧೬. ನಟ ನಾಟಕಕಾರ ವಾಮನರಾವ ಮಾಸ್ತರ– ಎನ್ಕೆ ಪು ೪೬

೧೭. ಸಂದರ್ಶನ ಏಣಗಿ ಬಾಳಪ್ಪ ಸ್ಥಳ : ಧಾರವಾಡ ೧೧–೫–೨೦೦೯

# ಅಧ್ಯಾಯ : ಆರು

## ಸಮಾರೋಪ

**ಪೀಠಿಕೆ:**

ಆಧುನಿಕ ರಂಗಭೂಮಿಯ ಪರಂಪರೆಯನ್ನು ಮೂರು ಮುಖ್ಯ ಘಟ್ಟಗಳಲ್ಲಿ ವಿವರಿಸಲಾಗುತ್ತದೆ. ೧ : ನಟಕೇಂದ್ರಿತ ರಂಗಭೂಮಿ, ೨ : ನಾಟಕಕಾರಕೇಂದ್ರಿತ ರಂಗಭೂಮಿ, ೩ : ನಿರ್ದೇಶಕಕೇಂದ್ರಿತ ರಂಗಭೂಮಿ ನಟಕೇಂದ್ರಿತ ರಂಗಭೂಮಿಯಲ್ಲಿ ನಟನೇ ಪ್ರಮುಖ. ಅದು ಕಂಪನಿ ನಾಟಕಗಳ ರಂಗಭೂಮಿ. ನಾಟಕಕಾರಕೇಂದ್ರಿತ ರಂಗಭೂಮಿಯಲ್ಲಿ. ನಾಟಕಕಾರನೇ ಪ್ರಮುಖನಾಗಿದ್ದ. ಹವ್ಯಾಸಿ ರಂಗಭೂಮಿಯ ಆರಂಭದ ಚಟುವಟಿಕೆಗಳು. ಉದಾಹರಣೆಗೆ ಶ್ರೀರಂಗ, ಕೈಲಾಸಂ ಮುಂತಾದ ನಾಟಕಕಾರರ ಅವಧಿ. ನಿರ್ದೇಶಕ ಕೇಂದ್ರಿತ ರಂಗಭೂಮಿ ಅಂದರೆ ನಿರ್ದೇಶಕನೇ ಪ್ರಮುಖನಾದ ಹವ್ಯಾಸಿ ರಂಗಭೂಮಿಯಲ್ಲಿ ಇತ್ತೀಚಿನ ಚಟುವಟಿಕೆಗಳು. ಉದಾಹರಣೆಗೆ ಪ್ರಸನ್ನ, ಸಿ. ಬಸವಲಿಂಗಯ್ಯ ಮುಂತಾದ ನಿರ್ದೇಶಕರ ಅವಧಿ. ಹೀಗೆ ಆಧುನಿಕ ರಂಗಭೂಮಿಯ ಇದುವರೆಗಿನ ಚಟುವಟಿಕೆಗಳನ್ನು ಪ್ರಮುಖವಾಗಿ ಮೂರು ನೆಲೆಗಳಲ್ಲಿ ನೋಡುವ ಕ್ರಮ ನಮ್ಮಲ್ಲಿದೆ.

೧೯ನೆಯ ಶತಮಾನದ ಪೂರ್ವಾರ್ಧ, ೨೦ನೆಯ ಶತಮಾನದ ಉತ್ತರಾರ್ಧದಲ್ಲಿ ಕಂಪನಿ ರಂಗಭೂಮಿ ನಾಡಿನ ಸಂಸ್ಕೃತಿಯ ಬಹುಮುಖ್ಯ ಭಾಗವಾಗಿ ಬೆಳೆದು ಬಂದಿತು. ಈ ಅವಧಿಯಲ್ಲಿ ರಂಗಭೂಮಿಯ ಮೇಲೆ ನಟನೇ ಸರ್ವಸ್ವನಾಗಿದ್ದರಿಂದ ನಾಡಿನ ಜನತೆ ಅತ್ಯಂತ ಗೌರವದಿಂದ, ಹೆಮ್ಮೆಯಿಂದ ಕಾಣುವಂತಹ ನಟಪರಂಪರೆ ಬೆಳೆದುಬಂದಿತು. ಆಂಗಿಕ ಇಲ್ಲವೆ ವಾಚಿಕ ಅಭಿನಯದ ಮೂಲಕ ಪ್ರೇಕ್ಷಕರನ್ನು ಸಮ್ಮೋಹನಗೊಳಿಸಿದ ಅಭಿಜಾತ ನಟರ ಬಹುದೊಡ್ಡ ಪರಂಪರೆ ನಿರ್ಮಾಣವಾಯಿತು. ಅವರಲ್ಲಿ ನಮ್ಮ ಅಧ್ಯಯನದ ಕೇಂದ್ರವ್ಯಕ್ತಿಯಾದ ಸವಣೂರ ವಾಮನರಾವ ಮಾಸ್ತರರೂ ಒಬ್ಬರು. ಅವರು ನಟರಾಗಿ, ನಾಟಕಕಾರರಾಗಿ, ನಾಟಕ ಕಂಪನಿಯ ಮಾಲೀಕರಾಗಿ ಎರಡು ದಶಕಗಳ ಅವಧಿಯಲ್ಲಿ ಮಾಡಿದ ಸಾಧನೆ ಮಹತ್ತರವಾದುದು, ಮೌಲಿಕವಾದುದು. ಇವರ ಜೊತೆಯಲ್ಲಿ ನೆನಪಿಸಿಕೊಳ್ಳಬೇಕಾದವರೆಂದರೆ ಎ.ವ್ಹಿ.ವರದಾಚಾರ್ಯ, ಮಂಡ್ಯಂ ರಂಗಾಚಾರ್ಯ, ಗೌರಿ ನರಸಿಂಹಯ್ಯ ಬಳ್ಳಾರಿ ಬಸಪ್ಪ, ಕೊಟ್ಟೂರಪ್ಪ, ಶಿರಹಟ್ಟಿ ವೆಂಕೋಬರಾಯರು, ತುಕಾರಾಮಪ್ಪ ಹೊಸಮನಿ, ಗರುಡ ಸದಾಶಿವರಾಯರು, ಗುಬ್ಬಿ ವೀರಣ್ಣನವರು, ಹಂದಗನೂರ ಸಿದ್ರಾಮಪ್ಪ, ಮಹಮ್ಮದ ಪೀರ, ಚಿಕ್ಕೋಡಿ ಶಿವಲಿಂಗಸ್ವಾಮಿ ಇವರೆಲ್ಲ ವಾಮನರಾಯರ ಸಮಕಾಲೀನರು. ಈ ಮಹಾನ್ ನಟರನ್ನು ಅವರ ಅಭಿನಯವನ್ನು ನಾವು ನೋಡಿಲ್ಲ. ಆದರೆ ಅಭಿನಯ ಕೌಶಲ್ಯ ಕೇಳಿದ್ದೇವೆ. ಅವೆಲ್ಲವು ಕತೆಗಳಾಗಿ ಕೇಳಿ ಬರುತ್ತವೆ. ಇಂದಿನ ತಲೆಮಾರಿಗೆ ಆ ನಟರು ದಂತಕತೆಗಳಾಗಿದ್ದಾರೆ. ಅವರ ಚರಿತ್ರೆಗಳನ್ನು ನಾವು ಜತನವಾಗಿ ಇಡಲಿಲ್ಲ. 'ನಾಟಕದವರೆ'ಂಬ ಉದಾಸೀನದಿಂದ ಅವರ ಚರಿತ್ರೆಯ ಬಹಳಷ್ಟು ಪುಟಗಳನ್ನು

ಕಳೆದುಕೊಂಡಿದ್ದೇವೆ. ಈಗ ಅಕ್ಷರಲೋಕದಲ್ಲಿ ಸಾಕ್ಷಾತ್ಕಾರ ಮಾಡಿ ನಮ್ಮ ಸಾಂಸ್ಕೃತಿಕ ಭಂಡಾರ ಶ್ರೀಮಂತಗೊಳಿಸಬೇಕೆಂದರೆ ಅವರ ಬಗೆಗಿನ ಅದೆಷ್ಟೋ ನೆನಪುಗಳು ವಿಸ್ಮೃತಿಗೆ ಸಂದಿವೆ. ಉಳಿದವು ಚದುರಿದಂತಹ ನೆನಪುಗಳು ಮಾತ್ರ. ಅಲ್ಲಲ್ಲಿ ಉಳಿದಿರುವ ಹಳೆಯ ಕಲಾವಿದರು, ಪ್ರೇಕ್ಷಕರು ಹೇಳುವ ನೆನಪುಗಳ ಜೊತೆಗೆ ಬರಹಕ್ಕೆ ಸಿಕ್ಕ ನೆನಪುಗಳನ್ನು ಹೆಕ್ಕಿ ಎರಡನ್ನೂ ಕೂಡಿಸಿಕೊಂಡು ಕಲಾವಿದರ ಚರಿತ್ರೆಗಳನ್ನು ಕಟ್ಟಬೇಕಾದ ಪರಿಸ್ಥಿತಿಯಲ್ಲಿ ನಾವಿದ್ದೇವೆ.

ರಂಗಭೂಮಿಯಲ್ಲಿ ಧ್ರುವತಾರೆಯಂತೆ ಬೆಳಗಿದ ವಾಮನರಾಯರ ಕುರಿತ ಆಕರಸಾಮಗ್ರಿ ತುಂಬಾ ವಿರಳ. ಎರಡು ಕಿರುಹೊತ್ತಿಗೆ ಬಿಟ್ಟರೆ ಉಳಿದವು ಅವರ ಪ್ರಕಟಿತ ನಾಟಕಗಳು. ಇದು ಮೂಲ ಸಾಮಗ್ರಿ. ಇದಕ್ಕೆ ಇನ್ನಷ್ಟು ಕೂಡಿಸಿ ವಾಮನರಾಯರ ವ್ಯಕ್ತಿತ್ವ, ಅವರ ಕಂಪನಿಯ ಚರಿತ್ರೆ ಕಟ್ಟಬೇಕೆಂಬ ಕುತೂಹಲದಿಂದ ಈ ಅಧ್ಯಯನ ಪ್ರಾರಂಭಿಸಿದೆ. ವಾಮನರಾಯರ ಮೊಮ್ಮಕ್ಕಳಾದ ರಘು, ಸತ್ಯಬೋಧರನ್ನು, ಹಿರಿಯ ರಂಗನಟ, ಅದ್ಭುತ ಸ್ಮರಣಶಕ್ತಿಯ ತೊಂಭತ್ತೈದು ವಯಸ್ಸಿನ ಏಣಗಿ ಬಾಳಪ್ಪನವರನ್ನು ಸಂದರ್ಶಿಸಿದೆ. ಜೊತೆಗೆ ವಾಮನರಾಯರ ಸಮಕಾಲೀನ ಕಲಾವಿದರ ಚರಿತ್ರೆಗಳಲ್ಲಿ ಚದುರಿದಂತಹ ಚಿತ್ರಗಳನ್ನು ಸಂಗ್ರಹಿಸಿದೆ. ಕನ್ನಡ ರಂಗಭೂಮಿಯ ಪರಂಪರೆಯಲ್ಲಿ ವಾಮನರಾಯರ ಸ್ಥಾನಮಾನವೇನು? ಎಂದು ಗುರುತಿಸುವುದಕ್ಕಾಗಿ ಅನೇಕ ರಂಗಭೂಮಿ ಕುರಿತ ಅಧ್ಯಯನಗಳನ್ನು, ನಾಟಕ ಮಂಡಳಿಗಳ ಚರಿತ್ರೆಗಳನ್ನು ಅಭ್ಯಸಿಸಿದೆ. ಇವನ್ನೆಲ್ಲ ಆಧರಿಸಿ ಈ ಮಹಾಪ್ರಬಂಧ ಸಿದ್ಧಪಡಿಸಿರುವೆ.

**ಫಲಿತಗಳು:**

೧. ಕರ್ನಾಟಕದಲ್ಲಿ ಸಂಗೀತ ನಾಟಕಗಳ ಜಯಭೇರಿ ಕಾಲದಲ್ಲಿ ವಾಮನರಾಯರು ರಂಗಭೂಮಿಯ ಮೇಲೆ ವಿಜೃಂಭಿಸಿದರು. ಹಾಡುವವನೇ ನಟ ಹಾಡುವುದೇ ನಾಟಕ ಎಂಬ ಅಭಿಪ್ರಾಯ ರೂಢಿಯಲ್ಲಿದ್ದಾಗ ವಾಮನರಾಯರು ಅದ್ಭುತ ಗಾಯಕನಟರಾಗಿ ಪ್ರೇಕ್ಷಕರ ಮನ ಸೂರೆಗೊಂಡರು. ಕನ್ನಡ ಪ್ರೇಕ್ಷಕರು ಮರಾಠಿ ನಾಟಕ, ಮರಾಠಿ ನಾಟ್ಯ ಸಂಗೀತದ ಗುಂಗಿನಲ್ಲಿದ್ದಾಗ, ಮರಾಠಿ ಮಾದರಿಯಲ್ಲಿಯೇ ಕನ್ನಡ ರಂಗಸಂಗೀತವನ್ನು ಸಾದರಪಡಿಸಿ ಕನ್ನಡ ರಂಗಭೂಮಿಯ ವರ್ಚಸ್ಸನ್ನು ಹೆಚ್ಚಿಸಿದರು. ಕನ್ನಡ–ಮರಾಠೀ ರಂಗಭೂಮಿಗಳ ಸ್ನೇಹಜೀವಿಯಾಗಿ ಕನ್ನಡ–ಮರಾಠೀ ಸಾಂಸ್ಕೃತಿಕ ಸಾಮರಸ್ಯಕ್ಕೆ ಸೇತುವಾಗಿ ಬೆಳೆದರು.

೨. ಕರ್ನಾಟಕದಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಕಂಪನಿ ನಾಟಕವೆಂಬುದು ಒಂದು ಚಳುವಳಿಯ ರೂಪದಲ್ಲಿಯೇ ಕಾಣಿಸಿಕೊಂಡಿತು. ನಾಡು ನುಡಿಯ ಅಭಿಮಾನಕ್ಕೆ ಪೆಟ್ಟು ಬಿದ್ದಾಗ, ಕನ್ನಡದ ಮೇಲೆ ನೆರೆಹೊರೆಯ ಭಾಷೆಗಳು ಸವಾರಿ ಮಾಡಿದಾಗ, ಸ್ವಾಭಿಮಾನಿ ಕನ್ನಡಿಗರು ಕನ್ನಡದ ಶಕ್ತಿ ಏನು? ಎಂದು ತೋರಿಸಿಕೊಡಲು ಪರಂಪರೆಯ ಬಯಲಾಟಗಳಿಗೆ ನಾಟಕದ ರೂಪ ಕೊಟ್ಟು ಕಂಪನಿ ಶೈಲಿಯಲ್ಲಿ ಆಡಿ ತೋರಿಸಿದವರು ಶಾಂತಕವಿಗಳು. ಅದಾದ ಮೇಲೆ ಎರಡು ಮೂರು

ದಶಕಗಳವರೆಗೂ ಮರಾಠಿ ನಾಟಕಗಳ ಮೋಹ ಕನ್ನಡಿಗರನ್ನು ಕಟ್ಟಿ ಹಾಕಿತ್ತು. ಅಲ್ಲದೆ ಮರಾಠೀ ರಂಗಸಂಗೀತದ ಆಕರ್ಷಣೆ ಇನ್ನೂ ಜೋರಾಗಿಯೇ ಅವರನ್ನು ಹಿಡಿದಿಟ್ಟಿತ್ತು. ಆಗ "ಮರಾಠಿಯಲ್ಲಿ ಯಶಸ್ವಿಯಾದ ನಾಟಕಗಳನ್ನು ಕನ್ನಡಕ್ಕೆ ತಂದು ಅಷ್ಟೇ ಯಶಸ್ವಿಯಾಗಿ ಪ್ರಯೋಗಿಸಿದರು ವಾಮನರಾಯರು. ಸಂಗೀತಕ್ಕೆ ಪ್ರಧಾನ್ಯತೆ ಇದ್ದುದು, ನಾಟ್ಯ ಸಂಗೀತಕ್ಕೆ ಶಾಸ್ತ್ರೀಯ ರೀತಿಯ ಕಲೆಯನ್ನು ಕೊಟ್ಟದ್ದು; ನಾಟಕದಲ್ಲಿ ವಾಚನಾಭಿನಯದ ಸಹಜತೆ; ಮಾತುಗಾರಿಕೆಯಲ್ಲಿ ಏರಿಳಿತ, ಓಜಸ್ಸು ಮುಂತಾದವುಗಳು ಸಾಮಾನ್ಯವಾಗಿ ವಿಶ್ವಗುಣಾದರ್ಶ ರಂಗಭೂಮಿಯಲ್ಲಿ ಎತ್ತಿ ಕಾಣಿಸಿದ ಗುಣಗಳು" ವಾಮನರಾಯರು ಮರಾಠೀ ಸಂಗೀತ ನಾಟಕಗಳಿಗೆ ಸರಿದೊರೆಯಾಗಿ ಕನ್ನಡ ಸಂಗೀತ ನಾಟಕಗಳನ್ನಾಡಿ ರಸಿಕರ ಮನಗೆದ್ದರು. ಇದು ಎರಡನೆಯ ಮಹತ್ವದ ಪ್ರಯತ್ನ.

೩. ಮಹಾರಾಷ್ಟ್ರದಲ್ಲಿ ಕಂಪನಿ ಸ್ವರೂಪದ ಆಧುನಿಕ ನಾಟಕ ಕಾಲೂರಿ ನಿಲ್ಲುತ್ತಿದ್ದ ಕಾಲದಲ್ಲಿಯೇ ಅದಕ್ಕೆ ರಾಷ್ಟ್ರೀಯ ಜಾಗೃತಿಯ ಕಂಕಣ ಕಟ್ಟಿದವರು ಲೋಕಮಾನ್ಯ ಬಾಲಗಂಗಾಧರ ತಿಲಕರು. ಅವರ 'ಸ್ವರಾಜ್ಯವೇ ನನ್ನ ಜನ್ಮ ಸಿದ್ಧ ಹಕ್ಕು' ಚಳುವಳಿಗೆ ರಂಗಭೂಮಿಯೇ ಸಮರ್ಥ ಮಾಧ್ಯಮವಾಗಬಲ್ಲದೆಂದು ಅರಿತಿದ್ದರು. ಭಕ್ತಿ ಪಂಥಗಳ ಚಳುವಳಿಯಲ್ಲಿ ಕೀರ್ತನೆಗಳು ಹೇಗೆ ಧರ್ಮಪ್ರಸಾರ ಮಾಡಿ ಜನರ ಮನಸ್ಸನ್ನು ಕಟ್ಟಿದವೋ ಅದೇ ರೀತಿಯ ಕೆಲಸವನ್ನು ನಾಟಕಗಳು ಮಾಡಬೇಕೆಂದು ನಾಟಕದವರಿಗೆ ಹೇಳಿದರು. ಅದರ ಫಲವಾಗಿ 'ಕೀಚಕವಧ' (ಕೆ.ಪಿ.ಖಾಡಿಲ್ಕರ್) ದಂತಹ ರಾಜಕೀಯ ಸಂದೇಶದ ನಾಟಕಗಳು ರಚನೆಯಾದವು. ಭಕ್ತಿಯ ಬದುಕು ಅಥವಾ ಪುರಾಣಕಥೆಯ ಮೂಲಕ ಸಮಕಾಲೀನ ಸಂದರ್ಭವನ್ನು ಅರ್ಥಯಿಸುವ ಪ್ರಯತ್ನ ಪೌರಾಣಿಕ ನಾಟಕಗಳಲ್ಲಿ ನಡೆಯಿತು. ಕೆ.ಪಿ.ಖಾಡಿಲ್ಕರ್ ಅವರು ತಿಲಕರ ಶಿಷ್ಯರಾಗಿದ್ದರು. ತಿಲಕರ ಸ್ವರಾಜ್ಯ ಚಳುವಳಿಯ ಅನುಯಾಯಿಗಳಾಗಿದ್ದರು. ೧೯೦೭ ರಲ್ಲಿ 'ಕೀಚಕವಧ' ನಾಟಕ ಬರೆದರು. ಮುಂದೆ 'ವಿದ್ಯಾಹರಣ' ಬರೆದರು. ಈ ನಾಟಕವನ್ನು ವಾಮನರಾಯರು ಕನ್ನಡಕ್ಕೆ ಅನುವಾದಿಸಿದರು. ತಿಲಕರ ದೇಶಭಕ್ತಿಯನ್ನು ಪ್ರೇಕ್ಷಕಸಮುದಾಯಕ್ಕೆ ತಲುಪಿಸಿ ಜನಜಾಗೃತಿ ಮಾಡಿದರು.

೪. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಯಾವುದು ನವೋದಯ ಕಾಲವೋ ಅದುವೇ ಕಂಪನಿ ನಾಟಕಗಳ ಕಾಲ. ಭಕ್ತಿ ಆಧ್ಯಾತ್ಮ ಚಿಂತನೆ, ಸ್ವಾತಂತ್ರ್ಯ ಸಾಧನೆ, ನಾಡು ನುಡಿ ಅಭಿಮಾನ, ನಿಸರ್ಗ ಪ್ರೀತಿ ಮೊದಲಾದ ನವೋದಯದ ಆಶಯಗಳು ಆ ಕಾಲದ ಕಂಪನಿ ನಾಟಕಗಳ ಆಶಯಗಳಾದವು. ಸಾಹಿತ್ಯಿಕವಾಗಿ ನವೋದಯವು ಭಾವಗೀತೆಗಳ ಕಾಲವಾದರೆ ಕಂಪನಿ ನಾಟಕಗಳದ್ದು ಸಂಗೀತ ನಾಟಕಗಳ ಕಾಲ. ನಾಟಕಗಳಲ್ಲಿ ಸಂಗೀತವೇ ಪ್ರಧಾನವಾಗಿತ್ತು. ಹಾಡುಬಲ್ಲವನೇ ನಟ ಹಾಡುವುದೇ ನಾಟಕ ಎನ್ನುವಂತಾಯಿತು. ಸಂಗೀತವು ರಂಗಭೂಮಿಯ ಭಾಷೆಯಾಯಿತು. ಮರಾಠಿ ಮತ್ತು ಕನ್ನಡ ಎರಡೂ ಭಾಷೆಯ ರಂಗಭೂಮಿಯಲ್ಲಿ ಇದು ಏಕಕಾಲದಲ್ಲಿ ವಿಜೃಂಭಿಸಿತು. ಮೈಸೂರು ಭಾಗದಲ್ಲಿ

ಎ. ವ್ಹಿ. ವರದಾಚಾರ್ಯರಿಂದ, ಉತ್ತರ ಕರ್ನಾಟಕದಲ್ಲಿ ವಾಮನರಾವ ಮಾಸ್ತರರಿಂದ ರಂಗಸಂಗೀತದ ರಸಧಾರೆ ರಂಗಭೂಮಿಯ ಮೇಲೆ ಹರಿಯಿತು.

೫. ವೃತ್ತಿ ರಂಗಭೂಮಿ ಪರಂಪರೆಯ ಜೊತೆಯಲ್ಲಿ ವಾಮನರಾಯರನ್ನು ಗುರುತಿಸಿರುವುದು, ಅವರ ಸಾಧನೆಯನ್ನು ಪರಿಶೀಲಿಸಿರುವುದು ತುಂಬಾ ಮುಖ್ಯವಾದುದು. ಮರಾಠೀ ಸಾಹಿತ್ಯ ಸಂಸ್ಕೃತಿಯ ಕ್ಷೇತ್ರದಲ್ಲಿ ಕಿರ್ಲೋಸ್ಕರ ನಾಟಕ ಮಂಡಳಿ ಮತ್ತು 'ಗಂಧರ್ವ ನಾಟಕ ಮಂಡಳಿಗೆ' ದೊಡ್ಡಸ್ಥಾನವಿದೆ. ಅಲ್ಲಿಯ ನಟರು ವಾಮನರಾಯರ ಸಂಗೀತ ಆಸಕ್ತಿಗೆ ಒಂದಿಷ್ಟು ಶಾಸ್ತ್ರೀಯ ಪಾಠಗಳನ್ನು ರಾಗ-ತಾಳಗಳ ಜ್ಞಾನವನ್ನು ಒದಗಿಸಿತು. ಇದರಿಂದ ವಾಮನರಾಯರಿಗೆ ವೃತ್ತಿ ಜೀವನಕ್ಕಿಂತ ಈ ಪ್ರವೃತ್ತಿಯ ಜೀವನದ ಸೆಳೆತ ಹೆಚ್ಚಾಯಿತು. ಸ್ವಾಧ್ಯಾಯದಿಂದ ಸಂಗೀತ, ಅಭಿನಯ ಕಲೆಯಲ್ಲಿ ಸಿದ್ಧಿ ಪಡೆದರು. ವಾಮನರಾಯರಿಗೆ ಸಂಗೀತ ಕಲಿಸಿದ ಗುರು ಯಾರು? ಎಂಬುದು ಗೊತ್ತಿಲ್ಲ. ಅವರಿಗೆ ಅಭಿನಯ ಹೇಳಿಕೊಟ್ಟ ಗುರು ತಿಳಿದುಬರುವದಿಲ್ಲ. ಆದರೆ ಸಂಗೀತ ಅಭಿನಯಗಳಲ್ಲಿ ಅವರ ಪ್ರಸಿದ್ಧಿ ಬೆರಗುಗೊಳಿಸುವಂಥದ್ದು. ಅದನ್ನು ಅವರು ಸ್ವಂತ ಪರಿಶ್ರಮ, ಸತತ ಅಧ್ಯಯನ, ಅನುಸಂಧಾನದಿಂದ ಸಾಧಿಸಿದರೆಂಬುದು ಇಲ್ಲಿ ಗುರುತಿಸಲಾಗಿದೆ. ಶಿರಹಟ್ಟಿ ಕಂಪನಿಯಲ್ಲಿ ಅವರು ಮಾಡಿದ್ದ ತಪಸ್ಸು ಅವರನ್ನು ರಂಗಕಲೆಯ ಸಂಪನ್ಮೂಲವ್ಯಕ್ತಿಯನ್ನಾಗಿ ರೂಪಿಸಿತ್ತು. ಇದರ ಫಲವಾಗಿ ಗೆಳೆಯರ ನೆರವಿನಿಂದ ಹಣ ಸಂಗ್ರಹಿಸಿ 'ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿ' ಯನ್ನು ಪ್ರಾರಂಭಿಸಿದರು. ರಂಗಭೂಮಿಯಿಂದ ಕಲಿತದ್ದನ್ನು ರಂಗಭೂಮಿಗೇ ಧಾರೆ ಎರೆಯುವಂಥ ಅವಕಾಶವು ಸ್ವಂತ ಕಂಪನಿಯಿಂದ ಸಾಧ್ಯವಾಯಿತು.

೬. ವೃತ್ತಿ ರಂಗಭೂಮಿಯ ಪರಂಪರೆಯ ಅನುಸಂಧಾನದಿಂದಾಗಿ ವಾಮನರಾಯರು ನಟರಾಗಿ ಬೆಳೆದರು, ನಾಟಕಕಾರರಾಗಿ ಬೆಳೆದರು, ಕಂಪನಿಯ ಒಡೆಯರಾಗಿ ಬೆಳೆದರು. ಈ ಮೂರು ವ್ಯಕ್ತಿತ್ವಗಳಿಗೆ ಅವರು ಪರಂಪರೆಯಿಂದ ಸಾಕಷ್ಟು ಸ್ವೀಕರಿಸಿದರು, ಕಲಿತರು. ಪರಂಪರೆಗೆ ವಿಶಿಷ್ಟ ಕೊಡುಗೆ ನೀಡುವ ಮಟ್ಟಕ್ಕೆ ಬೆಳೆದರು. ನಾಟಕ ಮಾಸ್ತರರಾಗಿ ಆ ಕಾಲದ ರಂಗಭೂಮಿಗೆ ಅಗತ್ಯವಾದ ಮೌಲ್ಯಗಳನ್ನು ತುಂಬಿದರು. ರಂಗದ ಮೇಲೆ ನಟನಾದವನು ನಿಜ ಜೀವನದಲ್ಲಿ ಹೇಗಿರಬೇಕು? ಎಂದು ರಾಯರು ನಡೆದು ತೋರಿಸಿದರು, ನುಡಿದು ತೋರಿಸಿದರು. ರಂಗದ ಮೇಲೆ ಬಗೆಬಗೆಯ ಪಾತ್ರಗಳನ್ನು ಮಾಡಿ ತೋರಿಸಿದರು. ನಾಟಕದ ಭ್ರಮೆಯಲ್ಲಿ ಲೋಕವ್ಯವಹಾರಕ್ಕೆ ವ್ಯತಿರಿಕ್ತವಾಗಿ ನಡೆದುಕೊಳ್ಳಲಿಲ್ಲ, ವ್ಯಸನಗಳಿಗೆ ಬಲಿಯಾಗಲಿಲ್ಲ ತಮ್ಮ ನೈತಿಕ, ಧಾರ್ಮಿಕ ನಡವಳಿಕೆಯಿಂದ ರಂಗಭೂಮಿಗೆ ಘನತೆ ಗೌರವ ತಂದುಕೊಡಬೇಕೆಂದು ವಾಮನರಾಯರು ತುಂಬ ಶ್ರದ್ಧೆಯಿಂದ ಶ್ರಮಿಸಿದರು. ತಮ್ಮ ಕಂಪನಿಯ ಕಲಾವಿದರು ಅದೇ ಮಾರ್ಗದಲ್ಲಿ ನಡೆಯಬೇಕೆಂದು ಕಟ್ಟುನಿಟ್ಟಿನ ಶಿಸ್ತು ವಿಧಿಸಿದರು. ಅಂದಿನ ರಂಗಭೂಮಿಗೆ ಇದು ದೊಡ್ಡ ವರವಾಗಿ ಪರಿಣಮಿಸಿತು. ರಂಗಭೂಮಿ

ಎಂದರೆ ಅಪವಿತ್ರ ಎಂದು ಮೂಗು ಮುರಿಯುವವರು ರಂಗಭೂಮಿಯ ಬಗ್ಗೆ ಅಭಿಮಾನಪಟ್ಟುಕೊಳ್ಳುವಂತೆ ಮಾಡಿದರು. ಇದು ವಾಮನರಾಯರ ದೊಡ್ಡಗುಣ. ಈ ಶಿಸ್ತು ಮುಂದೆ ಗರುಡರ ಕಂಪನಿಯಲ್ಲಿಯೂ ಮುಂದುವರಿದು ರಂಗಭೂಮಿಗೆ ಗೌರವದ ಸ್ಥಾನ ಲಭಿಸಿತು. ವಾಮನರಾಯರು ಸ್ವಭಾವದಿಂದ ಬಹಳ ಒಳ್ಳೆಯರು. ಯಾವಾಗಲೂ ಆದರ್ಶದ ಕನಸು ಕಾಣುತ್ತಿದ್ದರು. ಲೋಕಾನುಭವದಲ್ಲಿಯೂ ಜಾಣರಾಗಿದ್ದರು. ಇವೆರಡೂ ಗುಣಗಳಿಂದ ಅವರ ನಾಟಕದ ಬದುಕು ಪುಟಕ್ಕಿಟ್ಟ ಚಿನ್ನವಾಯಿತು.

೭. ಶರೀರ, ಶಾರೀರ, ಸಾತ್ವಿಕ ಅಭಿನಯ ವಾಮನರಾಯರ ನಟನೆಯ ಶಕ್ತಿಗಳಾಗಿದ್ದವು. ಅವರ ನಾಟಕಗಳಾದರೂ ಆದರ್ಶಜೀವನದ ಮೌಲ್ಯಗಳನ್ನು ಪ್ರತಿಪಾದಿಸುತ್ತಿದ್ದವು. ಅವರ 'ವಿದ್ಯಾಸಾಧನೆ' ನಾಟಕ ಮದ್ಯಪಾನ ನಿಷೇಧವನ್ನು ಸಾರಿತು. 'ಪಾರ್ವತೀ ಸತ್ವ ಪರೀಕ್ಷೆ' ಯು ವೇಶ್ಯೆಯೊಬ್ಬಳ ಗೌರವದ ಬದುಕನ್ನು ಚಿತ್ರಿಸಿತು. ಸಾಧ್ವಿಸಖೂಬಾಯಿ, ಭಕ್ತ ಪುಂಡಲೀಕ, ಭಕ್ತ ಪ್ರಹ್ಲಾದ, ನಾಟಕಗಳೂ ಭಕ್ತಿಯ ಹಿರಿಮೆಯನ್ನು ತೋರಿಸಿದವು. 'ಎರಡನೆಯ ಬಾಜೀರಾವ' ನಾಟಕ ಸ್ವರಾಜ್ಯನಿಷ್ಠೆಯನ್ನು, 'ಕೃಷ್ಣಾರ್ಜುನರ ಯುದ್ಧ' ವೀರ ಅಭಿಮನ್ಯು, ನಾಟಕಗಳು ವೀರಮೌಲ್ಯಗಳನ್ನು ನೈತಿಕ ಬದುಕನ್ನು ಪ್ರತಿಪಾದಿಸಿದವು. ಒಂದೊಂದು ನಾಟಕ ಒಂದೊಂದು ಮೌಲ್ಯಗಳನ್ನು ಪ್ರದರ್ಶಿಸುವುದಕ್ಕಾಗಿಯೇ ಬರೆದಂತಿದ್ದವು. ಅವರ ಕಂಪನಿಯ ವೈಭವವೆಂದರೆ ರಂಗ ಸಂಗೀತ. ಶಾಸ್ತ್ರೀಯ ನೆಲೆಯಲ್ಲಿ ಹರಿದು ಬರುವ ಸುಮಧುರ ಸಂಗೀತ. ಮರಾಠೀ ನಾಟಕ ಮಂಡಳಿ ಮತ್ತು ಸಮಕಾಲೀನ ಕನ್ನಡ ನಾಟಕ ಮಂಡಳಿಗಳಿಗಿಂತ ತುಂಬ ಭಿನ್ನವಾಗಿ ಮತ್ತು ಪ್ರೇಕ್ಷಣೀಯವಾಗಿ ವಾಮನರಾಯರು ತಮ್ಮ ಕಂಪನಿಯಲ್ಲಿ ಮೇಳವಿಸಿಕೊಂಡರು. ಮರಾಠೀ ಮಂಡಳಿಯಲ್ಲಿ ರಂಗ ಸಂಗೀತದ ಜೊತೆಯಲ್ಲಿ ರಂಗದ ಇತರ ಆಕರ್ಷಣೆಗಳೂ ಇದ್ದವು. ವೇಷಭೂಷಣ, ರಂಗಪರಿಕರಗಳಿಂದಲೂ ನಾಟಕಗಳು ಮೋಹಕವೆನಿಸಿದ್ದವು. ನಟರ ವಿಲಾಸಜೀವನವೂ ನೋಡುವಂತಿತ್ತು. ವಾಮನರಾಯರಿಗೆ ನಟರ ವಿಲಾಸಿ ಜೀವನದ ಬಗ್ಗೆ ತಕರಾರು ಇತ್ತು. ಇತರ ನಟರಿಗಿಂತ ಮಾಲೀಕರೇನು ಭಿನ್ನರಲ್ಲ. ನಾಟಕ ಕಂಪನಿ ಅನ್ನೋದು ಒಂದು ಅವಿಭಕ್ತ ಕುಟುಂಬ. ಮಾಲೀಕ ಅದರ ಮುಖ್ಯಸ್ಥ ಅವನು ಕುಟುಂಬದ ಇತರ ಸದಸ್ಯರಿಗೆ ಅನುಕರಣೀಯನಾಗಿರಬೇಕು. 'ನನ್ನಿಂದ ನಾಟಕ, ನಾನೇ ಮಾಲೀಕ' ಎಂಬ ಅಹಂಕಾರ ಬೆಳೆದರೆ ಕಂಪನಿ ಹಾಳಾಗಲು ತಡವಾಗುವುದಿಲ್ಲ. ಈ ನೈತಿಕ ಎಚ್ಚರಕ್ಕೆ ವಾಮನರಾಯರ ಕಂಪನಿ ಕಲಾವಿದರು ತಲೆಬಾಗಿದರು. 'ಇದು ನಮ್ಮ ಕಂಪನಿ' ಎಂದು ಅಭಿಮಾನದಿಂದ ಹೇಳಿಕೊಂಡರು. ಬಸವರಾಜ ಮನಸೂರು, ಸಂಗನಬಸಪ್ಪ ಕುಕನೂರು, ಗುರುರಾವ ದೇಶಪಾಂಡೆ, ಕೇಶವಭಟ್ಟ ಮಿಶ್ರಿಕೋಟಿ, ಬೇವೂರ ಬಾದಷಾಮಾಸ್ತರ ಇವರೆಲ್ಲರದು ಕಂಪನಿಯ ಜೊತೆಯಲ್ಲಿ ಆತ್ಮೀಯವಾದ ಭಾವನಾತ್ಮಕ ಸಂಬಂಧವಿತ್ತು.

ಸ್ತ್ರೀ ಕಲಾವಿದೆಯರ ಬಗೆಗೂ ಅವರದು ಉದಾರಧೋರಣೆ. ಕಲಾವಿದೆಯರಿದ್ದರೆ ಕಲಾವಿದರು ಕೆಡುವರೆಂದು ಅವರು ಭಾವಿಸಿರಲಿಲ್ಲ. ವೈಯಕ್ತಿಕವಾಗಿ ಚಾರಿತ್ರ್ಯವಂತರಾದರೆ ಅಂಥ ಸಮಸ್ಯೆಗಳಿಗೆ ಅವಕಾಶವೇ ಇರುವದಿಲ್ಲ. ಇದು ಅವರ ಸ್ಪಷ್ಟನಿಲುವು. ಅದಕ್ಕಾಗಿ ವಿಶ್ವಗುಣಾದರ್ಶದಲ್ಲಿ ಕಲಾವಿದೆಯರು ಕಂಪನಿ ಕಲಾವಿದರ ಜೊತೆಜೊತೆಗೆ ಸಾಧನೆ ಮಾಡಿದರು. ಅವರೂ ಎತ್ತರ ಸಾಧಿಸಿದರು ಎಂಬುದಕ್ಕೆ ನಿದರ್ಶನ ಗಾನರತ್ನ ಗುಳೇದಗುಡ್ಡ ಗಂಗೂಬಾಯಿ.

ರಂಗಭೂಮಿಯು ಜನರ ಮನರಂಜನೆಗಾಗಿ ಮಾತ್ರ ಅಲ್ಲ ಅದು ಮನಸ್ಸನ್ನು ಸಂಸ್ಕರಿಸಬೇಕು. ಬದುಕನ್ನು ತಿದ್ದಬೇಕು. ಸುಸಂಸ್ಕೃತ ಜೀವನಕ್ಕೆ ಬೇಕಾಗುವ ಗುಣಗಳನ್ನು ನಾಟಕ ಕಲಿಸಬೇಕು. ಅದಕ್ಕಾಗಿ ನಾಟಕ ಕಂಪನಿ ಅನ್ನೋದು ಒಂದು 'ವಿದ್ಯಾಸಂಸ್ಥೆ'ಯಾಗಿ ಸಂಚರಿಸುತ್ತ ತನ್ನ ಪ್ರದರ್ಶನದ ಪಾಠಗಳನ್ನು ಸಾದರಪಡಿಸಬೇಕು ಎಂಬುದು ವಾಮನರಾಯರ ನಿಲುವು. ಈ ದರ್ಶನಕ್ಕೆ ಅನುಗುಣವಾಗಿ ಅವರ ಪ್ರದರ್ಶನ ಸಂಸ್ಥೆ 'ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿ' ಕಾರ್ಯನಿರ್ವಹಿಸಿತು. ವೃತ್ತಿರಂಗಭೂಮಿ ಪರಂಪರೆಯಲ್ಲಿ ವಾಮನರಾಯರ ಸಾಧನೆ ಅತ್ಯಂತ ಮೌಲಿಕವಾದುದು ಮತ್ತು ಅದೇ ಕಾರಣಕ್ಕೆ ಅವರ ವ್ಯಕ್ತಿತ್ವವು ಆದರ್ಶ ಸ್ಮೃತಿಚಿತ್ರವಾಗಿ ಇಂದಿಗೂ ಉಳಿದು ಬಂದಿರಲು ಕಾರಣವಾಗಿದೆ.

೮. ನಾಟಕ ಕಂಪನಿಯ ಹೆಸರು ನಾಟಕಗಳ ಉಸಿರಾಗಿತ್ತು, ಕಲಾವಿದರ ಉಸಿರಾಗಿತ್ತು. ೧೯೧೦ಳ ರಿಂದ ೧೯೩೦ಳ ಎರಡು ದಶಕಗಳ 'ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿ' ಕನ್ನಡ ರಂಗಭೂಮಿಯ ಹೆಮ್ಮೆಯ ಸಂಸ್ಥೆಯಾಗಿ ಸಂಚರಿಸಿತು. ರಾಣೆಬೆನ್ನೂರು, ಹರಿಹರ, ದಾವಣಗೆರೆ, ತುಮಕೂರ, ಬೆಂಗಳೂರು, ಮಂಡ್ಯ, ಮೈಸೂರು, ಬಳ್ಳಾರಿ, ಮಂತ್ರಾಲಯ, ಬಾಗಿಲಕೋಟೆ, ಬಿಜಾಪೂರ, ಉಡುಪಿ ಮಂಗಳೂರು – ಈ ಪ್ರಮುಖ ನಗರಗಳಲ್ಲದೆ ಹಳ್ಳಿ, ಪಟ್ಟಣ ಪ್ರದೇಶಗಳಲ್ಲಿಯೂ ಈ ಕಂಪನಿ ವಾಸ್ತವ್ಯ ಮಾಡಿ ಸಂಗೀತ ನಾಟಕಗಳನ್ನಾಡಿತು. ನಡ ನಡುವೆ ಸ್ಥಳೀಯ ಪುಂಡರಿಂದ ಅನೇಕ ತೊಂದರೆಗಳು ಎದುರಾಗುತ್ತಿದ್ದವು. ಕಲೆಕ್ಷನ್ ಇಲ್ಲದೆ ಆರ್ಥಿಕ ಬಿಕ್ಕಟ್ಟು ತಲೆದೋರುತ್ತಿತ್ತು. ಅನಾರೋಗ್ಯದಿಂದಾಗಿ ಅಡಚಣೆ ಆಗುತ್ತಿತ್ತು. ಕಲಾವಿದರು ಕಂಪನಿ ಬಿಟ್ಟು ಹೋಗುತ್ತಿದ್ದರು. ಈ ಸಾಮಾನ್ಯ ಸಂಕಷ್ಟಗಳ ನಡುವೆ ಕೆಲವೊಮ್ಮೆ ನೈಸರ್ಗಿಕ, ವಿಕೋಪಗಳು ಕಂಪನಿಯ ಅಸ್ತಿತ್ವವನ್ನೇ ಅಲುಗಾಡಿಸುತ್ತಿದ್ದವು. ಇಂಥ ಎಲ್ಲ ತೊಂದರೆಗಳನ್ನು ಎದುರಿಸಿ ನಿಂತು ಕಂಪನಿಯನ್ನು ಎರಡು ದಶಕ ಬದುಕಿಸಿದ ಶ್ರೇಯಸ್ಸು ವಾಮನರಾಯರದು. ಕಂಪನಿಯ ಸುದೀರ್ಘ ಸೇವೆಯಲ್ಲಿ ವಾಮನರಾಯರಿಗೆ ತುಂಬ ಸಹಕಾರ ನೀಡಿದವರು ಕಲಾವಿದರು. ಪ್ರೇಕ್ಷಕರು ಮತ್ತು ಕುಟುಂಬ ವರ್ಗದವರು. ವಾಮನರಾಯರ ಜೊತೆಗೆ ಈ ಮೂರು ಕಂಬಗಳು ಗಟ್ಟಿಯಾಗಿ ನಿಂತುಕೊಂಡಿದ್ದರಿಂದಲೇ ನಾಟಕ ಕಂಪನಿಯ ತಿರುಗಾಟ ಸುಗಮವಾಯಿತು.

ವಾಮನರಾಯರ ಪತ್ನಿ ಕಾಶೀಬಾಯಿ ಅವರು ಕಂಪನಿಯಲ್ಲಿದ್ದ ಕಲಾವಿದರ ಯೋಗಕ್ಷೇಮ ನೋಡಿಕೊಳ್ಳುವಲ್ಲಿ ತಾಯಿಯ ಸ್ಥಾನದಲ್ಲಿರುತ್ತಿದ್ದರು. ಬಾಲಕರಾಗಿದ್ದಾಗಲೇ ಕಂಪನಿ ಸೇರಿದವರಿಗೆ ತಾಯಿ–ತಂದೆಗಳ ನೆನಪಾಗದಂತೆ ವಾಮನರಾಯರು, ಕಾಶೀಬಾಯಿಯವರು ನೋಡಿಕೊಂಡರು.

ವಾಮನರಾಯರಿಗೆ ಕಲಾವಿದರ ಬಗೆಗೆ ಎಂತಹ ಪ್ರೀತಿ ಇತ್ತು. ಕಾಳಜಿ ಇತ್ತು ಎನ್ನಲು ಒಂದು ನಿದರ್ಶನವಿದೆ. ಅನಾರೋಗ್ಯ ಕಾಡುತ್ತಿತ್ತು. ದೇಹದ ಶಕ್ತಿ ಕುಂದಿತ್ತು. ಇನ್ನೇನು ಕಂಪನಿ ಮುಂದುವರಿಸಲು ಸಾಧ್ಯ ಇಲ್ಲ. ಎಂದು ರಾಯರು ಕಂಪನಿಯನ್ನು ನಿಲ್ಲಿಸಿಬಿಟ್ಟರು ಆಗ ಕಲಾವಿದರ ಸಂಬಳವನ್ನೆಲ್ಲ ಕೊಟ್ಟು ಅವರನ್ನು ಬೀಳ್ಕೊಡುವಷ್ಟು ಪರಿಸ್ಥಿತಿ ಚೆನ್ನಾಗಿರಲಿಲ್ಲ. ಕಲಾವಿದರಾದರೂ ಸಂಬಳಬೇಕು ಎಂದು ಹಟ ಮಾಡಲಿಲ್ಲ. ಕಂಪನಿ ಮುಚ್ಚಿತು. ಕಲಾವಿದರು ಬೇರೆ ದಾರಿ ಇಲ್ಲದೆ ಮನೆಗೆ ಮರಳಿದರು. ಕೆಲದಿನಗಳಲ್ಲಿ ವಾಮನರಾಯರು ಸಾವಿನ ಜೊತೆಗೆ ಸೆಣಸಾಡತೊಡಗಿದರು. ಆಗ ಒಂದು ದಿನ ಮಗನನ್ನ ಹತ್ತಿರ ಕರೆದು ಕಲಾವಿದರಿಗೆ ಕೊಡಬೇಕಾದ್ದು ಸಂಬಳವನ್ನು ಕೊಡುತ್ತೇನೆಂದು ವಚನ ಕೊಡು ಎಂದರು. ಮಗ ವೆಂಕಟೇಶನಿಗೆ ದುঃಖ ತಡೆಯಲಾಗಲಿಲ್ಲ. ಕಣ್ಣೀರು ಸುರಿಸುತ್ತ ಕೈಯಲ್ಲಿ ಮಾತುಕೊಟ್ಟನು. ಕನ್ನಡ ರಂಗಭೂಮಿ ಚರಿತ್ರೆಯಲ್ಲಿ ಈ ರೀತಿ ಸಾವಿನ ಸನ್ನಿವೇಶದಲ್ಲಿಯೂ ಮಗನಿಂದ ಮಾತು ತೆಗೆದುಕೊಂಡ ಏಕೈಕ ಮಾಲೀಕ ಎಂದರೆ ವಾಮನರಾವ ಮಾಸ್ತರ ಎಂದು ಏಣಗಿ ಬಾಳಪ್ಪನವರು ಆ ಘಟನೆ ಸ್ಮರಿಸುತ್ತಾರೆ. ಆಮೇಲೆ ಮಗನು ತಂದೆಯ ಮಾತು ನಡೆಸಿಕೊಟ್ಟನು. ವಾಮನರಾಯರ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿಯುವ ಇಂಥ ಪ್ರಸಂಗಗಳು ಇನ್ನೆಷ್ಟು ಇವೆಯೋ? ನಮ್ಮ ಅಧ್ಯಯನದಲ್ಲಿ ಕೆಲವು ಪ್ರಸಂಗಗಳು ಮಾತ್ರ ದಾಖಲಾಗಿವೆ.

ಈ ಕಂಪನಿಯ ಜೀವಾಳವೆಂದರೆ ಸಂಗೀತ, ಸಂಗೀತ ನಾಟಕಗಳು, ಗಾಯಕ ಕಲಾವಿದರು. ವಾಮನರಾಯರು ಸಂಗೀತ ಶಿಕ್ಷಕರಂತಿದ್ದರು. ಕಂಪನಿಯಲ್ಲಿದ್ದ ಕಲಾವಿದರನ್ನು ಸ್ಮರಿಸಿದರೆ ಸಾಕು ಕಂಪನಿಯ ಸಂಗೀತಶಕ್ತಿ ಏನೆಂಬುದು ಮನವರಿಕೆಯಾಗುವದು. ಪಂ. ಮಲ್ಲಿಕಾರ್ಜುನ ಮನಸೂರ, ಬೇವೂರ ಬಾದಷಸಾಹೇಬ, ಗುರುರಾವ ದೇಶಪಾಂಡೆ, ಬಸವರಾಜ ಕುಕನೂರು, ಗಾನರತ್ನ ಗುಳೇದಗುಡ್ಡ ಗಂಗೂಬಾಯಿ, ಯಲ್ಲೂಬಾಯಿ ಗುಳೇದಗುಡ್ಡ ಇವರೆಲ್ಲ ಸಂಗೀತದಲ್ಲಿ ಸಾಧನೆ ಮಾಡಿದವರು. ಒಬ್ಬೊಬ್ಬರು ಒಂದೊಂದು ಸಂಗೀತ ಕಚೇರಿ ನಡೆಸಿಕೊಡಬಲ್ಲವರು. ಇಂಥವರೆಲ್ಲ ಒಂದು ಕಂಪನಿಯ ನಾಟಕದಲ್ಲಿ ಪಾತ್ರಧಾರಿಗಳೆಂದರೆ ನಾಟಕ ಪ್ರಯೋಗ ಹೇಗಿರುತ್ತಿತ್ತು ಎಂಬುದು ಊಹಿಸಬೇಕು ಅಷ್ಟೇ.

೯. ಗಾಯಕ ನಟರನ್ನು ನಟಿಯರನ್ನು ನಿರ್ಮಿಸಿದ ಶ್ರೇಯಸ್ಸು ವಾಮಯನರಾಯರಿಗೆ ಸಲ್ಲುತ್ತದೆ. ಈ ಕಂಪನಿಯ ಸಂಗೀತಕ್ಕೆ ಆಕರ್ಷಿತರಾಗಿ ಬಸವರಾಜ ಮನಸೂರ ಬಾಲ್ಯದಲ್ಲಿಯೇ ಕಂಪನಿ ಸೇರಿದರು. ಅಣ್ಣನನ್ನು ಅನುಸರಿಸಿ ಮಲ್ಲಿಕಾರ್ಜುನ ಮನಸೂರರು ಎಂಟನೆಯ ವಯಸ್ಸಿನಲ್ಲಿಯೇ ಕಂಪನಿ

